# ಮುನ್ನುಡಿ

ಶ್ರೀಮಾನ್ ಪ. ನಾಗರಾಜಯ್ಯನವರು ನನ್ನ ಆತ್ಮೀಯರಾದ ಮಿತ್ರರು. ನನ್ನ ಜೈನ-ಸಾಹಿತ್ಯ ಸೇವೆಯ ಕಾರ್ಯದಲ್ಲಿ ನನಗೆ ಸಹಾಯಕರಾಗಿರುವವರು. ಅವರು ತಮ್ಮ 'ಅಜಿತ ಪುರಾಣ ತಿಲಕಂ-ಕಾವ್ಯ ಸಂಗ್ರಹ'ಕ್ಕೆ ಮುನ್ನುಡಿ ರೂಪವಾಗಿ ಎರಡು ಹರಕೆಯ ಮಾತುಗಳನ್ನು ಬರೆದುಕೊಡುವಂತೆ ನನ್ನನ್ನು ಕೇಳಿದ್ದರು. ಅವರ ಸೌಜನ್ಯ, ಸಜ್ಜನಿಕೆಗಳಿಗೆ ಮಾರುಹೋಗಿರುವ ನಾನು ಸಂತೋಷದಿಂದ ಆ ಕಾರ್ಯಕ್ಕೆ ಒಪ್ಪಿದ್ದೆ. ಇಂದು ನನ್ನ ಮಾತಿನಂತೆ ಕೆಳಗಿನ ಎರಡು ಮಾತುಗಳನ್ನು ಬರೆಯುತ್ತಿದ್ದೇನೆ.

ಕನ್ನಡಸಾಹಿತ್ಯದ ಅರುಣೋದಯವಾಗಿರುವುದೆ ಜಿನ ಕವಿ ದಿವಾಕರನಿಂದ. 'ಕನ್ನಡ ಸಾಹಿತ್ಯದ ನೂತನಯುಗ ಪ್ರವರ್ತಕ'ನೆಂದು, 'ಕನ್ನಡದ ಸ್ವರ್ಣಯುಗ ಸ್ಥಾಪಕ'ನೆಂದು, 'ಆದಿ ಕವಿ'ಯೆಂದು ಪ್ರಸಿದ್ಧನಾದ ಪಂಪ ಮಹಾಕವಿ 'ಬೆಳಗುವೆನಿಲ್ಲಿ ಲೌಕಿಕಮನ್' ಎಂದು 'ವಿಕ್ರಮಾರ್ಜುನ ವಿಜಯ'ವನ್ನೂ, 'ಅಲ್ಲಿ ಜಿನಾಗಮಮಂ' ಎಂದು 'ಆದಿಪುರಾಣ'ವನ್ನೂ ಬರೆದು, ತನ್ನ ಮುಂದಿನ ಕವಿಗಳಿಗೆ ಹೊಸದೊಂದು ಹೆದ್ದಾರಿಯನ್ನು ನಿರ್ಮಿಸಿಕೊಟ್ಟನು. ಅಷ್ಟೇ ಅಲ್ಲ, ತನ್ನ ಧಾರ್ಮಿಕ ಗ್ರಂಥವಾದ 'ನೆಗಟ್ದ ಆದಿಪುರಾಣದೊಳಱಿವುದು ಕಾವ್ಯಧರ್ಮಮಂ, ಧರ್ಮಮುಮಂ' ಎಂದು ಹೇಳಿ, ಧರ್ಮನಿರೂಪಣಾ ವಿಧಾನಕ್ಕೆ ಸರ್ವಜನಾದರಣೀಯವಾಗುವ ಒಂದು ಮಾರ್ಗವನ್ನು ತೋರಿಸಿದನು. ಇದರಿಂದ ಆತನು ನೂತನ ಸಂಪ್ರದಾಯವೊಂದರ ಆದಿ ಬ್ರಹ್ಮನೆನಿಸಿದನು. ಈತನು ಹಾಕಿಕೊಟ್ಟ ಈ ಸಂಪ್ರದಾಯ—ಲೌಕಿಕ, ಧಾರ್ಮಿಕ ಕಾವ್ಯಗಳ ಸೃಷ್ಟಿ ಮತ್ತು ಧಾರ್ಮಿಕ ಕಾವ್ಯದಲ್ಲಿ ಧರ್ಮ, ಕಾವ್ಯಧರ್ಮಗಳ ಸಮ್ಮಿಳನ—ಸಾಕಷ್ಟು ಶ್ರೀಮಂತವಾಗಿ ಬೆಳೆದಿದೆ. ಅದನ್ನು ಬೆಳೆಸಿದವರಲ್ಲಿ ಪಂಪ ಮೊದಲಿಗನಾದರೆ, ಪೊನ್ನ ಎರಡನೆಯವ, ನಮ್ಮ ರನ್ನ ಕವಿ ಮೂರನೆಯವ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರನ್ನನಂತಹ ಅದೃಷ್ಟಶಾಲಿ ಮತ್ತೊಬ್ಬನಿಲ್ಲ ಎನಿಸುತ್ತದೆ. ಯಾವುದೋ ಮೂಲೆಯಲ್ಲಿ ಅಜ್ಞಾತನಾಗಿದ್ದು, ಮರವೆಯ ಮಹಾಸಾಗರದಲ್ಲಿ ವಿಲೀನನಾಗಿ ಹೋಗಬಹುದಾಗಿದ್ದ ಬಡ ಬಳೆಗಾರನೊಬ್ಬನ ಮಗ, ಆತ. ಆದರೆ ಸಾಹಿತ್ಯ ಜಗತ್ತಿನಲ್ಲಿ ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೂ ಉದಿತೋದಿತನಾಗುತ್ತಾ ಹೋಗಿ, ತೈಲಪ ಚಕ್ರವರ್ತಿಯ ಆಸ್ಥಾನ ಕವಿಯಾದ. ಚಕ್ರವರ್ತಿಯ ಪುತ್ರನನ್ನು 'ಅನಿಲಜನೊಳ್ ಪೋಲಿಸಿ', ಕಥಾನಾಯಕನನ್ನಾಗಿ ಮಾಡಿಕೊಂಡು 'ಗದಾಯುದ್ಧ'ವನ್ನು ಬರೆದು 'ಕವಿ ಚಕ್ರವರ್ತಿ' ಬಿರುದಿನ

ಜೊತೆಗೆ ಪಲ್ಲಕ್ಕಿ, ಚಾಮರ, ಚಿನ್ನದ ಕೋಲು ಇತ್ಯಾದಿ ಇತ್ಯಾದಿ ಸನ್ಮಾನಗಳನ್ನು ಗಿಟ್ಟಿಸಿದ. ಇದಾದ ಹನ್ನೊಂದು ವರ್ಷಗಳ ಮೇಲೆ 'ಅಜಿತ ತೀರ್ಥಂಕರ ಪುರಾಣ ತಿಲಕ'ವನ್ನು ಬರೆದು, ಅದಕ್ಕೆ ಕಾರಣಕರ್ತಳಾದ ಅತ್ತಿಮಬ್ಬೆಯಿಂದ ಸಾಕೆನಿಸುವಷ್ಟು ಸನ್ಮಾನಿತನಾದ. ಇದರ ಫಲವಾಗಿ ಶ್ರೀಮಂತ ವಿಧವೆಯಾದ ಆ ಅತ್ತಿಮಬ್ಬೆ 'ಕವಿಗಳ ಕಾಮಧೇನು'ವೆನಿಸಿದಳು. ಅದಕ್ಕೂ ಹೆಚ್ಚಾಗಿ ಕಾಲ ಪುರುಷನ ಕವಳವಾಗಿ ನಿರ್ನಾಮಳಾಗಬಹುದಾಗಿದ್ದವಳು ಅಜಿತ ತೀರ್ಥಂಕರನ ಸುಂದರ ಚಿತ್ರಕ್ಕೆ ಚೌಕಟ್ಟಾಗಿ, ಜನಮನದಲ್ಲಿ ಚಿರಂಜೀವಿ ಪಟ್ಟವನ್ನು ಪಡೆದಳು.

ರನ್ನನದು ಆದರ್ಶ ಸಂಸಾರ—ಶ್ರೀದೇವಿ, ಭೂದೇವಿಯರಂತಿರುವ ಇಬ್ಬರು ಹೆಂಡಿರು—ಜಕ್ಕಿ, ಶಾಂತಿ. ಕೀರ್ತಿಗೊಬ್ಬ ಮಗ—ರಾಯ; ಆರತಿಗೊಬ್ಬ ಮಗಳು—ಅತ್ತಿಮಬ್ಬೆ. ಮನೆಯಲ್ಲಿ ಶಾಂತಿ, ಸೌಖ್ಯ, ಸಂಪತ್ತು; ಹೊರಗೆ ಅಧಿಕಾರ, ಗೌರವ, ಕೀರ್ತಿ; ಬಾಳಿನಲ್ಲಿ ಉಬ್ಬು ತಗ್ಗುಗಳಿಲ್ಲದೆ ಸುಗಮ. ಹೀಗಿರುವಾಗ ಆತ್ಮಪ್ರತ್ಯಯ ಹುಟ್ಟದೆ ಇರುತ್ತದೆಯೆ? ಆತನಲ್ಲಿ ಅದು ತುಂಬಿ ತುಳುಕುತ್ತಿದೆ—'ರತ್ನ-ಪರೀಕ್ಷಕನಾಂ ಕೃತಿರತ್ನ ಪರೀಕ್ಷಕನೆನೆಂದು ಫಣಿಪತಿಯ ಫಣಾರತ್ನಮುಮಂ, ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೆ?' ಎಂದು ಷಡ್ಡು ಹೊಡೆದು ತನ್ನ ಎದುರಾಳಿಯನ್ನು ಆಹ್ವಾನಿಸುತ್ತಾನೆ. "ಬಹುರತ್ನಾ ವಸುಂಧರಾ" ಎಂಬ ಮಾತೇ ಸುಳ್ಳು, ಜಗತ್ತಿನಲ್ಲಿರುವುದು ಒಂದೇ ರತ್ನ, ಅದು ತಾನೆ—ಎಂಬುದು ಇವನ ಆರ್ಭಟ. 'ಆರಾತೀಯಕವೀಶ್ವರರಾರುಂ ಮುನ್ನಾರ್ತರಿಲ್ಲ, ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತ ಮೆನಿಪ ಕವಿತೆಯೊಳ್ ಕವಿರತ್ನಂ' ಎಂದು ಆರ್ಭಟಿಸುತ್ತಾನೆ. ತನ್ನ ಹಿರಿತನದ ಹೊಗಳಿಕೆಯಷ್ಟರಿಂದಲೆ ತೃಪ್ತನಾಗದೆ, ಇತರ ಕವಿಗಳನ್ನು ಕೆಣಕುತ್ತಾನೆ—"ನೆಗಟ್ದ ಕವಿರತ್ನನಂತೊಳಪುಗುವುದು ಪೊಗ್ಗಾಯ್ತೆ ಜಿನಮತಾಂಬೋಧಿಯುಮಂ ಪುಗದಾಗಮಮುಮಜೀವರ ಬಗೆವುಗದೆ ಕೆಲರ್ಕವಿಗಳಾಡಿದರ್ ತಡಿದಡಿಯೊಳ್" ಎನ್ನುತ್ತಾನೆ. ಸೃಷ್ಟಿ ಶಕ್ತಿಯಲ್ಲಿ ತಾನು ಮತ್ತೊಬ್ಬ ಚತುರ್ಮುಖನಂತೆ! ಇಷ್ಟು ವಿಜೃಂಭಿಸಿದರೂ ಆತ ನಮಗೆ ಪ್ರಿಯನಾಗಿದ್ದಾನೆ. ಆತನದು 'ಬುಡ್ಡಾಳವಿಲ್ಲದ ಬಡಾಯಿ'ಯಲ್ಲ. ಆತನ 'ಅಹಂ' ನಮಗೆ ಸಹನೀಯವಷ್ಟೇ ಅಲ್ಲ, ಆಪ್ಯಾಯಮಾನವಾಗಿಯೂ ಇದೆ. ಇದಕ್ಕೆ ಮುಖ್ಯವಾದ ಆತನ ವೀರ್ಯವತ್ತಾದ ಶೈಲಿ, ಆ ಶೈಲಿಯಲ್ಲಿರುವ ಸುಸ್ಪಷ್ಟತೆ, ಅರ್ಧನಾರೀಶ್ವರನಂತಿರುವ ಶಬ್ದ—ಅರ್ಥ ಸಂಪತ್ತು, ಇವೆಲ್ಲಕ್ಕೂ ಹೆಚ್ಚಾಗಿ, ಮತ್ತಾವ ಕನ್ನಡ ಕವಿಯಲ್ಲಿಯೂ

ಇಷ್ಟು ಸಮಗ್ರವಾಗಿ ಕಾಣಬರದ ನಾಟಕೀಯತೆ. ಆತನ ರಸಘಟ್ಟಿಯಾದ 'ಗದಾಯುದ್ಧ' ಇದಕ್ಕೆ ಉದಾಹರಣೆ. ಕಾಳಿದಾಸನ ಭಾವಬಂಧುರತೆ ಬಾಣ ಕವಿಯ ಭಾಷಾ ಪ್ರೌಢಿಮೆಗಳು ರನ್ನ ಕವಿಯ ಕಾವ್ಯಗಳಲ್ಲಿ ಮನೆಮಾಡಿಕೊಂಡಿವೆ. ನವರಸ ಪರಿಪೂರ್ಣವಾದ ಆತನ ಕಾವ್ಯಗಳು ಅಮರವಾದುವು. ಅಜಿತಪುರಾಣ ದಲ್ಲಿ ಕವಿಚೇತನದ ಆತ್ಮರೋದನದಂತೆ ಕಾಣಿಸಿಕೊಂಡಿರುವ ವೈರಾಗ್ಯ ವರ್ಣನೆ, ಸಗರನ ಕಥೆ, ಇವುಗಳ ಜೊತೆಯಲ್ಲಿ '' ಮೊಲೆವೊತ್ತ ತೈಲ ಜನನಿಯುಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ '' ಎಂದು ಆತನು ಕೀರ್ತಿಸುವ 'ಕವಿವರ ಕಾಮಧೇನು' ಅತ್ತಿಮಬ್ಬೆಯ ಚಿತ್ರ—ಇವು ಕಲ್ಪಾಂತರ ಸ್ಥಾಯಿಯಾಗಿನಿಲ್ಲುತ್ತವೆ.

ಸುಮಾರು ಎಂಟುನೂರು ಪದ್ಯಗಳನ್ನು ಒಳಗೊಂಡ 'ಅಜಿತಪುರಾಣ ತಿಲಕ'ವನ್ನು ಶ್ರೀಮಾನ್ ನಾಗರಾಜಯ್ಯನವರು ಮುನ್ನೂರೈದು ಪದ್ಯಗಳಿಗೆ ಭಟ್ಟಿ ಇಳಿಸಿ ಸಂಗ್ರಹಿಸಿದ್ದಾರೆ. ಮೂಲದ ಕಥೆಗೆ ಸ್ವಲ್ಪವೂ ಲೋಪ ಬರದಂತೆ, ರಸವತ್ಕಾವ್ಯಭಾಗಗಳಾವುವೂ ಬಿಟ್ಟು ಹೋಗದಂತೆ ಸಂಗ್ರಹಿಸಿರುವುದು ಸಂಗ್ರಹ ಕಾರರ ಪಾಂಡಿತ್ಯಕ್ಕೂ ರಸಾಭಿಜ್ಞತೆಗೂ ಸಾಕ್ಷಿಯಾಗಿದೆ. ತಮ್ಮ ಸಂಗ್ರಹಕ್ಕೆ ಅವರು ಬರೆದಿರುವ ದೀರ್ಘವಾದ ಪ್ರಸ್ತಾವನೆ ಪಾಂಡಿತ್ಯಪೂರ್ಣವಾಗಿರುವಂತೆ, ಲಲಿತ ಮನೋಹರವಾಗಿಯೂ ಇದೆ. ಇದಕ್ಕೂ ಹೆಚ್ಚಾಗಿ 'ಅಜಿತಪುರಾಣ ತಿಲಕಂ–ಕಾವ್ಯಸಂಗ್ರಹ'ದ ಕೊನೆಯಲ್ಲಿ ಇರುವ 'ಟಿಪ್ಪಣಿ' ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವಾದ ಮಾರ್ಗದರ್ಶನವನ್ನು ನೀಡ ತಕ್ಕುದಾಗಿದೆ. ಇದನ್ನು ಅಚ್ಚಿಗೆ ಸಿದ್ಧಪಡಿಸುವುದರಲ್ಲಿ ಆತುರಗೊಂಡುದ ರಿಂದಲೋ ಏನೋ ಕೆಲವು ಸಣ್ಣ ಪುಟ್ಟ ಲೋಪಗಳು ಇಣಿಕಿಹಾಕಿವೆ. ನಿರೂಪಣಾ ವಿಧಾನ, ವಿಷಯಗಳ ಜೋಡಣೆ, ವ್ಯಾಕರಣ ಸಂಬಂಧವಾದ ಸೂಚನೆ—ಇತ್ಯಾದಿ ಗಳು ಇನ್ನೂ ಸ್ಪಷ್ಟವಾಗಿ, ಸಮಗ್ರವಾಗಿ, ಇರಬಹುದಾಗಿತ್ತು ಎನಿಸುತ್ತದೆ. 'ನಡೆವರೆಡಹದೆ ಕುಳಿತರೆಡಹುವರೆ? ಮುಂದಿನ ಆವೃತ್ತಿಯಲ್ಲಿ ಇವೆಲ್ಲ ಸರಿ ಹೋಗುತ್ತವೆ, ಅಷ್ಟೆ.

ಸುಂದರವಾದ, ಉಪಯುಕ್ತವಾದ ಈ ಸಂಗ್ರಹದ ಕೊಡುಗೆಗಾಗಿ ಶ್ರೀಮಾನ್ ಪ. ನಾಗರಾಜಯ್ಯನವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸಿ, ಇಂತಹ ಸಂಗ್ರಹ ಕಾರ್ಯ ಅವರ ಲೆಕ್ಕಣಿಕೆಯಿಂದ ಇತೋಪ್ಯತಿಶಯವಾಗಿ ಹೊರಬರಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ತ. ಸು. ಶಾಮರಾಯ

# ಅರಿಕೆ

"ಅಜಿತ ಪುರಾಣ ಸಂಗ್ರಹ"ವನ್ನು ಕನ್ನಡ ಪಂಡಿತ ತರಗತಿಗೆ ಬೋಧಿಸುವ ಅವಕಾಶ ಒಮ್ಮೆ (೧೯೭೩-೭೪) ಒದಗಿದ್ದಿತು. ಅದಕ್ಕಾಗಿ ಚೆನ್ನಾಗಿ ಅಭ್ಯಾಸಮಾಡಿದ; ಟಿಪ್ಪಣಿ ಮಾಡಿಕೊಂಡ, ಅದೇ ವಿಸ್ತೃತಗೊಂಡು ಇಲ್ಲಿ ಸೇರಿದೆ. ತೀ.ನಂಶ್ರೀ ಯವರ 'ಗದಾಯುದ್ಧ ಸಂಗ್ರಹಂ' ಮಾದರಿಯಲ್ಲಿ ಟಿಪ್ಪಣಿಯಿರುವ, ಜೊತೆಗೇ ವಿಸ್ತೃತ ಪ್ರಸ್ತಾವನೆಯೂ ಇರುವ ಅಜಿತ ಪುರಾಣ ಸಂಗ್ರಹದ ಅಗತ್ಯವನ್ನು ಅಂದು ಕಂಡು ಕೊಂಡೆ. ಆದರೆ ನಾನೇ ಆ ಕೆಲಸಕ್ಕೆ ಮುಂದಾಗುವ ಧೈರ್ಯವಿರಲಿಲ್ಲ. ಅದೇ ಹೊತ್ತಿಗೆ ನಾನೊಬ್ಬನೇ ಸಂಪಾದಕನಾಗಿ ಕೃತಿಯೊಂದನ್ನಾದರೂ ಹೊರತರಬೇಕಾದ ಅಗತ್ಯವನ್ನು ಶ್ರೀ ಎ. ಹೆಚ್. ಗೌಡರು ಮನಗಾಣಿಸಿ ಪ್ರೇರಿಸಿದರು. ಅದೇ ಕಾರಣವಾಗಿ ನಾನು ಬೇರೆಯವರಿಂದ ಆಶಿಸಿದ್ದ ಈ ಕೆಲಸವನ್ನು ನಾನೇ ಮಾಡಿಮುಗಿಸಿದೆ. ಈ ಕೆಲಸವನ್ನು ಕೈಗೆತ್ತಿಕೊಳ್ಳುವ ಮೊದಲೇ ನನಗೆ ಹಿರಿಯರೂ, ತುಂಬು ವಿಶ್ವಾಸಿಗಳೂ ಆದ ಶ್ರೀ ತ.ಸು. ಶಾಮರಾಯರನ್ನು ಇದಕ್ಕೆ ಮುನ್ನುಡಿ ಬರೆದು ಪ್ರೋತ್ಸಾಹಿಸಿ ಹರಸಬೇಕೆಂದು ಪ್ರಾರ್ಥಿಸಿ, ಅವರ ಒಪ್ಪಿಗೆಯನ್ನು ಪಡೆದೆ. ಕಾರಣ, ಅವರು ಆ ಮೊದಲೇ ಅಜಿತ ಪುರಾಣದ ಸಂಗ್ರಹವನ್ನು ಮಾಡಿ, ಪ್ರಕಟಿಸಿದ್ದುದು. ಈಗ ಅವರು ನನ್ನ ಈ ಕೃತಿಯನ್ನು ಕಂಡು ಮೆಚ್ಚಿದ್ದಾರೆ; ತುಂಬ ಪ್ರೀತಿಯಿಂದ ಆ ಕೆಲಸವನ್ನು ಮಾಡಿಕೊಟ್ಟಿರುತ್ತಾರೆ. ನನ್ನ ಈ ಕೆಲಸದಲ್ಲಿ ಹಿರಿಯರಾದ ಡಾ|| ಎನ್. ಅನಂತರಂಗಾಚಾರ್, ಪಂಡಿತ ಹೆಚ್. ಎನ್. ಕೃಷ್ಣಮೂರ್ತಿ, ಮಿತ್ರರಾದ ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ—ಇವರು ತುಂಬ ನೆರವಾಗಿದ್ದಾರೆ. ಗ್ರಂಥ ಋಣದಲ್ಲಿ ನಾನು ಹೆಸರಿಸಿರುವ ಎಲ್ಲ ವಿದ್ವಾಂಸರ ಕೃತಿಗಳ ನೆರವನ್ನೂ ಪಡೆದಿರುತ್ತೇನೆ. ಅಚ್ಚಿಗೆ ಪ್ರತಿ ಸಿದ್ಧಪಡಿಸುವ ಕೆಲಸದಲ್ಲಿ ಮಿತ್ರರಾದ ಶ್ರೀ ಎಸ್. ಶ್ರೀನಿವಾಸಮೂರ್ತಿ, ಶ್ರೀಮತಿ ಅ. ಜಯಮ್ಮ, ಶ್ರೀಮತಿ ಅ. ವಿಜಯಲಕ್ಷ್ಮೀ, ಕು|| ಯದುಶೈಲಾ ಕೇಶವಮೂರ್ತಿ—ಇವರು ನೆರವಾಗಿದ್ದಾರೆ. ಹಿರಿಯ ವಿಶ್ವಾಸಿಗಳಾದ ಶ್ರೀ ಆರ್. ಎನ್. ಹಬ್ಬು ಅವರು ಪ್ರಕಾಶನದ ಹೊಣೆಯನ್ನು ಹೊತ್ತಿದ್ದಾರೆ; ಅವರ ಮಗ ಶ್ರೀ ರಮೇಶ್ ಅವರು ಮುದ್ರಿಸಿಕೊಟ್ಟಿದ್ದಾರೆ.

ಅಚ್ಚಿನ ಕಾಲಕ್ಕೆ ಕರಡು ತರುವ, ತಿದ್ದುವ, ಕೊಡುವ ಕೆಲಸದಲ್ಲಿ ಶ್ರೀ ನಾ. ಜಿನೇಂದ್ರ ಪ್ರಕಾಶ, ಶ್ರೀ ನಾ. ಮಹಾವೀರ ಪ್ರಸಾದ–ಇವರು ನೆರವಾಗಿದ್ದಾರೆ. ಹೀಗೆ ಈ ಕೃತಿಯ ಪೂರ್ಣತೆಗೆ ಮೊದಲಿಂದ ಕಡೆ ತನಕ ಎಲ್ಲ ಬಗೆಯಿಂದ ನೆರವಾದ ಈ ಎಲ್ಲ ಹಿರಿಯರನ್ನೂ ತುಂಬು ವಿಶ್ವಾಸದಿಂದ ವಂದಿಸುತ್ತೇನೆ; ಕಿರಿಯರನ್ನು ತುಂಬು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಹಂ. ಪ. ನಾಗರಾಜಯ್ಯ

# ಪರಿವಿಡಿ


ಪುಟ

೧. ಮುನ್ನುಡಿ–ಶ್ರೀ ತ. ಸು. ಶಾಮರಾಯರು ... ೩

೨. ಪ್ರಸ್ತಾವನೆ ... ೯

೩. ಪ್ರಾರ್ಥನೆ ... 1

೪. ಅತ್ತಿಮಬ್ಬೆ ಚರಿತ ... 2

೫. ಕವಿ ಪ್ರತಿಜ್ಞೆ ... 10

೬. ಅಜಿತನಾಥ ಚರಿತಂ :

ಅ) ಪೂರ್ವಭವಾವಳಿ ... 12

ಆ) ಗರ್ಭಾವತರಣ ಕಲ್ಯಾಣಂ ... 19

ಇ) ಜನ್ಮಾಭಿಷೇಕ ಕಲ್ಯಾಣಂ ... 23

ಈ) ಪರಿನಿಷ್ಕ್ರಮಣ ಕಲ್ಯಾಣಂ ... 38

ಉ) ಕೇವಲಜ್ಞಾನ ಕಲ್ಯಾಣಂ ... 51

ಊ) ನಿರ್ವಾಣ ಕಲ್ಯಾಣಂ ... 54

೭. ಚಕ್ರನಾಥ ಚರಿತಂ :

ಅ) ಚಕ್ರಪೂಜಾ ಪರಿಕರ ವಿಧಿಯುಂ ಮಾಡಿದಂ ... 59

ಆ) ಅಪ್ರಿಯುಮಾಗಿಯುಂ ಹಿತಮಪ್ಪುದಂ ನೆಗಟ್ಟಿಂ ... 67

೮ ಉಪಸಂಹಾರಂ :

ಅ) ಕವಿಕಾವ್ಯ ಪ್ರಶಸ್ತಿ ... 80

ಆ) ಮಂಗಳಂ ... 82

೯. ಟಿಪ್ಪಣಿಗಳು ... 83

೧೦. ಗ್ರಂಥ ಋಣ ... 190

# ಪ್ರಸ್ತಾವನೆ

**ಕವಿ:** ಕನ್ನಡ ಸಾಹಿತ್ಯದ ಹೆಮ್ಮೆಯ ಕವಿ ರನ್ನ. 'ಬಹುರತ್ನಾ ವಸುಂಧರಾ' ಎಂಬ ಮಾತನ್ನು ಮಸುಳಿಸಿ, 'ಕವಿರಾಜ, ಕವಿರಾಜಶೇಖರ, ಕವಿ ತಿಲಕ, ಕವಿ ಚತುರ್ಮುಖ, ಕವಿಜನ ಚೂಡಾರತ್ನ, ಕವಿ ಮುಖಚಂದ್ರ, ಕವಿ ಕುಂಜರಾಂಕುಶ, ಕವಿ ಚಕ್ರವರ್ತಿ' ಎಂಬೀ ಬಿರುದುಗಳಿಂದ ಮಾನ್ಯನಾದ ಈತನು ಹುಟ್ಟಿದುದು 'ಬೆಳುಗಲಿಪುಯ್ಯೂಜಿರೊಳ । ಗ್ಗಳಮೆನಿಸುವ ಜಂಬುಖಂಡಿಯೆಪ್ಪತ್ತರ್ಕ್ಕಂ। ತಿಳಕಮೆನೆ ನೆಗಟ್ದ ಮುದುವೊಳಿ'ಲಿನಲ್ಲಿ. ಈಗಿನ ಬೆಳಗಾವಿ ಜಿಲ್ಲೆಯ ಮುಧೋಳವೇ ಈ ಮುದುವೊಳಲು. 'ಜಿನೇಂದ್ರಪಾದ ಕಮಲ ಭ್ರಮರ' ನೆನಿಸಿದ ಜಿನವಲ್ಲಭ ತಂದೆ; 'ಸಂದ ಪತಿವ್ರತಾಗುಣವಿಭೂಷಣದಿಂ ನೆಗಟ್ದೆ' ಅಬ್ಬಲಬ್ಬೆ ತಾಯಿ. ಇವರು ಮತದಲ್ಲಿ ಜೈನರು, 'ವಣಿಕ್ಕುಳಾರ್ಕರು'; ವೃತ್ತಿಯಲ್ಲಿ ಬಳೆಗಾರ (?)ರು. ಈ ದಂಪತಿಗಳ 'ಸುಪುತ್ರನೆನಿಸಿದ' ನಾಲ್ಕನೆಯ ಮಗನೇ ಈ ಕವಿರತ್ನ–ರನ್ನ. ಈತ 'ಸೌಮ್ಯಮುಖ'ನೂ 'ಗುರುವತ್ಸಲ'ನೂ 'ಸರಸ್ವತೀ ರತ್ನಮಂಡನ'ನೂ ಆಗಿದ್ದನು. ಉದಾರಗುಣಗಳೆನಿಸಿದ ದೃಢಬಾಹು, ರೇಚಣ, ಮಾರಮಯ್ಯರೇ ಈತನ ಅಣ್ಣಂದಿರು. 'ಸೌಮ್ಯ ಸಂವತ್ಸರದೊಳ್, ಕರ್ಕಾಟಕ ರಾಶಿಯೊಳ್' (೧೨-೪೯) ತಾನು ಜನಿಸಿದುದಾಗಿ ಹೇಳಿಕೊಂಡಿದ್ದಾನೆ. 'ಇದು ಶಕವರ್ಷ ೮೭೧ರ ಸೌಮ್ಯಸಂವತ್ಸರವಾಗಿದ್ದು, ಕ್ರಿ.ಶ. ೯೪೯ಕ್ಕೆ ಸರಿಹೊಂದುವುದಾಗಿದೆ.' 'ಸಂತತ .ದೇವಭಕ್ತಿ ಪತಿಭಕ್ತಿ ಗುಣಂಗಳೇ ಭೂಷಣಂ'ಗಳಾಗಿ, 'ಧರ್ಮಕುಲೋಚಿತ ಶುದ್ಧವೃತ್ತಿಯಿಂ'ದ 'ಒಳ್ಗುಣಂಬಡೆದ, ಧರ್ಮದ ಪೆರ್ಮೆಗೆ ನೋಂತ' ಜಕ್ಕಿ, ಶಾಂತಿ ಎಂಬ ಇಬ್ಬರು ಪತ್ನಿಯರು; ಇಬ್ಬರು ಮಕ್ಕಳು—ರಾಯನೆಂಬ ಮಗ, ಅತ್ತಿಮಬ್ಬೆಯೆಂಬ ಮಗಳು; ಚಾಮುಂಡರಾಯ, ಅತ್ತಿಮಬ್ಬೆಯರನ್ನು ಸದಾ ನೆನಪಿಸುವ ಹೆಸರುಗಳು. ಇವರು ಹುಟ್ಟಿದಾಗ ರನ್ನನಿಗೆ ಕ್ರಮವಾಗಿ ೪೧ ಮತ್ತು ೪೫ ವರ್ಷಗಳು.

ಮನೆಯ ಕಸಬಿನ ವಾತಾವರಣ ಬಾಲಕನಾದ ರನ್ನನಿಗೆ ಸಹಜವಾಗಿಯೇ ಒಗ್ಗದೆ, ವಿದ್ಯಾಕಾಂಕ್ಷಿಯಾಗಿ ಮನೆಯಿಂದ ಹೊರಬಂದ ಈತ ದಕ್ಷಿಣಾಭಿಮುಖನಾಗಿ ಹೊರಟು, ಗಂಗಮಂಡಲೇಶ್ವರಕ್ಕೆ ಬಂದು, ಚಾವುಂಡರಾಯನ ಆಶ್ರಯವನ್ನು ಪಡೆದು, 'ಸುರಪತಿ ಪೂಜಿತಂ ನೃಪತಿ ಸೇವಿತಮುನ್ನತ ಗಂಗಮಂಡಲೇ

ಶ್ವರ ಮಕುಟಾರ್ಚಿತ' ರೆಂದೂ, 'ಇಂದ್ರಾದಿವಂದ್ಯಾಚರಿತ' ರೆಂದೂ 'ಸಕಲ ಮುನೀಂದ್ರ ವೃಂದ ವೃಂದಾರಕ' ರೆಂದೂ ಪ್ರಸಿದ್ಧರಾದ ಅಜಿತ ಸೇನಾಚಾರ್ಯರನ್ನು ಗುರುಗಳನ್ನಾಗಿ ಹೊಂದಿ ವಿದ್ಯಾಭ್ಯಾಸ ಮಾಡಿದನು. ವಿದ್ಯಾಕಾಂಕ್ಷಿಯಾಗಿಯೇ ಬಂದ ಈತನು ಇಂಥ ಗುರುಗಳ ಶಿಷ್ಯನಾಗಿ 'ಅಭಿಮತ ಜಿನೇಂದ್ರವಚೋವಿಭವ' ನೂ 'ಶಬ್ದಾನುಶಾಸನ ಪ್ರಭವ ವಚೋವಿಭವ 'ನೂ 'ಉಭಯ ವ್ಯಾಕರಣ ಪಂಡಿತ' ನೂ (೧೨-೪೩) ಆದುದು ಸುಯೋಗ್ಯವೇ ಆಗಿದೆ. ಇಷ್ಟಲ್ಲದೆ ಜಿನಸೇನ, ಗುಣಭದ್ರ, ವ್ಯಾಸ, ವಾಲ್ಮೀಕಿ, ಭಾಸ, ಕಾಳಿದಾಸ, ಬಾಣ, ಭಟ್ಟನಾರಾಯಣರ ಸಂಸ್ಕೃತ ಕೃತಿಗಳನ್ನೂ ಶಿವಕೋಟ್ಯಾಚಾರ್ಯ, ಗುಣವರ್ಮ, ಪಂಪ ಪೊನ್ನರ ಕನ್ನಡ ಕೃತಿಗಳನ್ನೂ—ಅಷ್ಟೇಕೆ, ತನ್ನ ಹಿಂದಿನ ಕಾವ್ಯಶಾಸ್ತ್ರ ಗ್ರಂಥಗಳನ್ನೆಲ್ಲವನ್ನೂ—ಆಳವಾಗಿ ಅಭ್ಯಾಸ ಮಾಡಿರಬೇಕು. ಸಂಗೀತಶಾಸ್ತ್ರ, ನಾಟ್ಯಶಾಸ್ತ್ರಗಳಲ್ಲೂ ಆಸಕ್ತನಾಗಿ ಅವುಗಳ ಪರಿಚಯುವನ್ನೂ ಪಡೆದವನಾಗಿರ ಬೇಕು. ಕಲಿಯುವುದೇ ಗುರಿಯಾಗಿ ಮನೆಯನ್ನು ಬಿಟ್ಟು ಬಂದವನು ಚೆನ್ನಾಗಿ ಕಲಿತು 'ಆರಾತೀಯ ಕವೀಶ್ವರರಾ 'ರ್ಗಿಗೂ ಸಾಧ್ಯವಾಗದಿದ್ದ, 'ವಾಗ್ದೇವಿಯ ಭಂಡಾರದ ಮುದ್ರೆಯನೊಡೆದ 'ವನೆಂದು ಹೆಮ್ಮೆಯಿಂದ ಹೇಳಿಕೊಂಡಿರುವುದು ಆತ್ಮವಿಶ್ವಾಸದ ಅತಿರೇಕವಾಗಿರದೆ ವಿಮರ್ಶಕರೂ ಮೆಚ್ಚುವಂತಹುದೇ ಆಗಿದೆ. ಈ ಹಿನ್ನೆಲೆಯಲ್ಲಿ 'ಕವಿರತ್ನನಂತೊಳವುಗುಪ್ಪದು ಮೊಗ್ಗಿಯ್ತೆ ಜಿನಮತಾಂ ಬೋಧಿಯುಮಂ' (೧-೯೪) 'ಜಿನಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು ವರ್ಣಕಂಗಳಿವಱಿಂ ಭವ್ಯಾಂಗಮೇನೊಪ್ಪದೆ' (೧-೯೫) 'ನೆಗಟ್ಚಿದಂ ಕವಿ ಚತುರ್ಮುಖನಾಗಮುವೇದಿಯಪ್ಪುದಂ' (೧೨-೩೩) ಎಂಬ ಪ್ರಶಂಸೆಯ ಮಾತು ಗಳು ಆತನ ಆತ್ಮವಿಶ್ವಾಸದ ಬಿಚ್ಚುನುಡಿಗಳೇ ಆಗಿವೆ. ಫಣಿಪತಿಯ ಫಣಾ ರತ್ನಮುಮಂ ರನ್ನನ ಕೃತಿರತ್ನಮುಮಂ ಪೇಟ್ ಪರೀಕ್ಷಿಪಂಗೆಂಟರ್ದೆಯೆ' (ಗ. ಯು. ೧-೪೪), 'ಏಂ ಮಸುಳಿಸಿದನೋ ಬಹುರತ್ನಾ ವಸುಂಧರಾಯೆಂಬ ವಾಕ್ಯಮಂ' (ಗ. ಯು. ೧-೮೩)—ಈ ಮಾತುಗಳೂ ಕವಿಯ ಆತ್ಮ ಪ್ರತ್ಯಯ ಗಳೇ ಆಗಿವೆಯಲ್ಲದೆ, ಒಣಹೆಮ್ಮೆಯುವಲ್ಲ. ಈ ಆತ್ಮ ಪ್ರಶಂಸೆಯ ಮಾತುಗಳಲ್ಲಿ 'ಮೇರೆವರಿಯದ ಉತ್ಸಾಹವಿದೆ, ಮುಚ್ಚುಮರೆಯಿಲ್ಲದ ಸಿಡಿಲು ನುಡಿಯಿದೆ' ಎಂಬ ಅಭಿಪ್ರಾಯುವಿದೆ.

ರನ್ನ 'ಮೊದಲಿಗೆ ಸಾಮಂತರಲ್ಲಿಯೂ, ಅನಂತರ ಮಂಡಲೇಶ್ವರ ರಲ್ಲಿಯೂ ಆಶ್ರಿತನಾಗಿದ್ದು, ಅಂತಿಮುವಾಗಿ ಚಕ್ರವರ್ತಿಯ ಆಸ್ಥಾನಕ್ಕೆ ಬಂದು

ಸೇರಿದ 'ನು. ಈ ಸಾಮಂತರು ಯಾರೆಂಬ ಬಗ್ಗೆ ವಿದ್ವಾಂಸರಲ್ಲಿ ತೀರ್ಮಾನವಿಲ್ಲ—ಮಂಡಲೇಶ್ವರನಾದರೋ ಗಂಗರಸನಾದ ರಾಚಮಲ್ಲನೇ ಇರಬೇಕು. 'ಇನ್ನು ಆತ ಆಶ್ರಯ ಪಡೆದಿದ್ದ ಚಕ್ರವರ್ತಿಯು ಕಲ್ಯಾಣ ಚಾಲುಕ್ಯರ ರಾಜನಾದ ಆಹವಮಲ್ಲ ತೈಲಪನೆಂಬುದರಲ್ಲಿ ಯಾವ ಅನುಮಾನಕ್ಕೂ ಆಸ್ಪದ 'ವಿಲ್ಲ. 'ನರಪತಿ ಪೂಜ್ಯಂ ಚಳುಕ್ಯ ರಾಜ್ಯದೊಳ್ ನೆಗಟ್ದನುಭಯಕವಿ ಕವಿರತ್ನಂ' (೧೨-೪೨). ತನಗೆ 'ಕವಿ ಚಕ್ರವರ್ತಿ' ಎಂಬ ಬಿರುದು ಬಂದಿರುವುದು ಯಾರೋ ಸಾಮಾನ್ಯನಿಂದಲ್ಲ ಎಂಬುದನ್ನು 'ಪಡೆಯೆಡೆಯ ಕಡೆಯ ಬಡವ ರ್ಕೞಡೆ ಪಡೆದನೊ ಚಕ್ರವರ್ತಿಯೊಳ್ತೈಲಪನೊಳ್ । ಪಡೆದಂ ಮಹಿಮೋನ್ನ ತಿಯಂ । ಪಡೆದಂ ಕವಿ ಚಕ್ರವರ್ತಿವೆಸರಂ ರನ್ನಂ' (ಗ. ಯು. ೧—೩೭) ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಇದಕ್ಕನುಸಾರವಾಗಿ 'ಮದನಾವತಾರಮಂ ಕನಕದಂಡಚಾಮರಮಂ ಉನ್ಮದೇಭಮಂ ಉತ್ತುಂಗದ ಬತ್ತಗಾವೆಯಂ (೧೨-೫೧) ರಾಜಮರ್ಯಾದೆಯಾಗಿ ಪಡೆದನು.* ಇದೆಲ್ಲವನ್ನೂ ಕಂಡ ಅವನ ಅನಂತರದ ಕವಿಗಳಾದ ಎರಡನೆ ನಾಗವರ್ಮ, ಶ್ರೀಧರಾಚಾರ್ಯ, ಶಾಂತಿ ನಾಥ, ನಯಸೇನ, ನಾಗಚಂದ್ರ, ಕರ್ಣಪಾರ್ಯ, ಬ್ರಹ್ಮಶಿವ, ಅಗ್ಗಳ, ಆಂಡಯ್ಯ, ಪಾರ್ಶ್ವಪಂಡಿತ, ಜನ್ನ, ಎರಡನೆ ಗುಣವರ್ಮ——ಈ ಮುಂತಾ ದವರು ಭಕ್ತಿಯಿಂದ ಕೊಂಡಾಡಿದ್ದಾರೆ.

**ಕೃತಿಗಳು :** 'ಕರಮೆಸೆದುವು ರತ್ನತ್ರಯ ಪರಿಕಲ್ಪದೆ ಪರಶುರಾಮ ಚರಿತಂ ಚಕ್ರೇಶ್ವರಚರಿತಮಜಿತತೀರ್ಥೇಶ್ವರ ಚರಿತಂ' (೧೨—೪೪)—ಪರಶು ರಾಮ ಚರಿತ, ಚಕ್ರೇಶ್ವರ ಚರಿತ, ಅಜಿತ ತೀರ್ಥೇಶ್ವರ ಚರಿತಗಳೆಂಬ ಮೂರು ಕೃತಿಗಳನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಸಾಹಸ ಭೀಮ ವಿಜಯ ಅಥವಾ ಗದಾಯುದ್ಧ, ರನ್ನಕಂದಗಳನ್ನು ಇಲ್ಲಿ ಹೇಳಿಲ್ಲ (?) ಮೊದಲ ಎರಡೂ ಈ ತನಕ ದೊರೆತಿಲ್ಲವಾಗಿ ಕೃತಿಸಂಖ್ಯೆಯನ್ನು ಖಚಿತವಾಗಿ ಹೇಳಲಾಗದು; ವಿದ್ವಾಂಸರ ಊಹೆಯನ್ನೇ ಆಧರಿಸಿ ಹೇಳುವುದಾದರೆ 'ಪರಶುರಾಮ ಚರಿತ'ವು ಸಮರ ಪರಶುರಾಮ ಎಂಬ ಬಿರುದುಳ್ಳ ಚಾಮುಂಡರಾಯನೊಡನೆ ಪರಶು

---

* 'ಬಿರುದಿನೊಂದಿಗೆ ಪಲ್ಲಕ್ಕಿ, ಚಾಮರ, ಚಿನ್ನದಕೋಲು, ಆನೆ, ಬತ್ತದ ಗದ್ದೆ—ಇವು ಗಳನ್ನೂ ದಯಪಾಲಿಸಿ ತೈಲಪ ಚಕ್ರವರ್ತಿ ಸನ್ಮಾನ ಮಾಡಿದನು.'

ರಾಮನನ್ನು ಸಮೀಕರಿಸಿ ಹೇಳಿರುವ ಕಾವ್ಯವೆಂದೂ, 'ಕೃತಿ ನೆಗೆಟ್ದಿ ಗದಾ ಯುದ್ಧಂ, ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ' (ಗ, ಯು, ೧-೩೨) ಎಂದಿರುವ ಕಾವ್ಯ ಚಕ್ರೇಶ್ವರ ಚರಿತ ಅಥವಾ ಗದಾಯುದ್ಧವೇ ಆಗಿರಬೇಕೆಂದೂ ವಿವಿಧ ಅಭಿಪ್ರಾಯಗಳಿವೆ.

ಅಜಿತತೀರ್ಥಂಕರ ಪುರಾಣ ತಿಲಕವು ಹನ್ನೆರಡು ಆಶ್ವಾಸಗಳ ಚಿಕ್ಕ ಕೃತಿ ; ಎರಡನೆಯ ತೀರ್ಥಂಕರ ಅಜಿತನಾಥನ ಚರಿತೆಗೆ ಮೀಸಲಾಗಿರುವುದು ಏಳು ಆಶ್ವಾಸಗಳು ಮಾತ್ರ. ಸಾಹಸ ಭೀಮ ವಿಜಯ ಅಥವಾ ಗದಾಯುದ್ಧವು ಹತ್ತು ಆಶ್ವಾಸಗಳ ಚಿಕ್ಕ ಕೃತಿ. ಮಹಾಭಾರತದ ಗದಾ ಸೌಪ್ತಿಕ ಪರ್ವಗಳ ಕಥೆ ಇದಕ್ಕೆ ಆಕರವಾಗಿದೆ; ಪಂಪ ಭಾರತ, ಊರು ಭಂಗಗಳ ಪ್ರಭಾವವೂ ಸ್ಪಷ್ಟ ವಾಗಿದೆ. ರನ್ನಕಂದವು ದೊರೆತಿದ್ದರೂ ಅಪೂರ್ಣವಾಗಿದೆ; ಹನ್ನೊಂದು ಕಂದ ಪದ್ಯಗಳು ಪೂರ್ಣವಾಗಿಯೂ ಒಂದರಲ್ಲಿ ಸ್ವಲ್ಪ ಭಾಗವೂ ಈಗ ದೊರೆತಿವೆ. ಈ ಕೃತಿ ರಚನೆ ತನ್ನದೆಂದು ಈತ ಎಲ್ಲೂ ಹೇಳಿಲ್ಲ; ಬಾಹ್ಯ ಪ್ರಮಾಣಗಳೂ ಇಲ್ಲ, ಆದರೂ 'ಕವಿರತ್ನಾ' ಎಂದು ಈ ಕೆಲ ಪದ್ಯಗಳು ಮುಗಿಯುವುದರಿಂದ ಇದು ರನ್ನನದೇ ಇರಬೇಕೆಂದು ಕವಿಚರಿತೆಕಾರರು ಊಹಿಸಿದ್ದಾರೆ; ಶ್ರೀ ತ. ಸು. ಶಾಮರಾಯರೂ ಇದನ್ನು ಒಪ್ಪುತ್ತಾರೆ. ಶ್ರೀ ಕಲಬುರ್ಗಿಯವರು ಪ್ರಕಟಿಸಿರುವ ಈ ನಿಘಂಟಿನಲ್ಲಿ ೪೫ ಪದ್ಯಗಳಿದ್ದು, ೪೧ ಕಂದ ಪದ್ಯಗಳೂ ೪ ವೃತ್ತಗಳೂ ಇವೆ. ಕೊನೆಗೆ 'ರನ್ನನಿಘಂಟು ಸಮಸ್ತ ಮಂಗಳಮಹಾಶ್ರೀ' ಎಂದಿದೆ.

ಧಾರವಾಡ ಜಿಲ್ಲೆಯ ಲಕ್ಕುಂಡಿಗ್ರಾಮದ ಜೈನ ಬಸದಿಯಲ್ಲಿ ದೊರೆತ ಶಾಸನಗಳಲ್ಲಿ ಒಂದು ಅತ್ತಿಮಬ್ಬೆಯನ್ನು ಕುರಿತುದಾಗಿದ್ದು, ಇದು ಅಜಿತ ಪುರಾಣದ ಅತ್ತಿಮಬ್ಬೆಯ ಪ್ರಶಸ್ತಿಯನ್ನೇ ಬಹುಮಟ್ಟಿಗೆ ಹೋಲುವುದರಿಂದ ಇದನ್ನು ರನ್ನನೇ ರಚಿಸಿರಬಹುದೆಂಬ ಊಹೆಯೊಂದಿದೆ. ಇದಲ್ಲದೆ 'ಅಭಿಮತ ಜೈನೇಂದ್ರ ವಚೋವಿಭವಂ ಶಬ್ದಾನುಶಾಸನ ಪ್ರಭವ ವಚೋವಿಭವದೊಡನೆ ಸೆಯೆ ರಂಜಿಪನುಭಯ ವ್ಯಾಕರಣ ಪಂಡಿತಂ ಕವಿರತ್ನಂ (೧೨-೪೩) ಎಂಬುದರಿಂದ ಪೂಜ್ಯಪಾದರ ಜೈನೇಂದ್ರ ವ್ಯಾಕರಣ, ಶಾಕಟಾಯನರ ಶಬ್ದಾನು ಶಾಸನಗಳಲ್ಲಿ ಪಂಡಿತನಾಗಿದ್ದು, ಜನ್ನನ 'ರನ್ನಂ ವೈಯಾಕರಣಂ' ಎಂಬ ಹೇಳಿಕೆಯಂತೆ ಸ್ವತಃ ಒಂದು ವ್ಯಾಕರಣವನ್ನು ಬರೆದಿರಬಹುದೆಂದೂ ಹೇಳಬಹುದಾಗಿದೆ.

**ಕನ್ನಡದಲ್ಲಿ ಜೈನ ಪುರಾಣಗಳು :** ಸಂಸ್ಕೃತ, ಪ್ರಾಕೃತ, ಅಪಭ್ರಂಶ ಭಾಷೆಗಳಲ್ಲಿ ಧರ್ಮ ಗ್ರಂಥಗಳನ್ನು ರಚಿಸುತ್ತಿದ್ದ ಜೈನಕವಿಗಳು ಕನ್ನಡದ ಧಾರ್ಮಿಕ ಕಾವ್ಯಗಳನ್ನು ರಚಿಸುವಂತಾದುದು ಅಂದಿಗೆ ಬಹುಶಃ ಕ್ರಾಂತಿಕಾರಿಯೆ ಸರಿ. ಧಾರ್ಮಿಕ ಕೃತಿಗಳನ್ನು 'ದೇವಭಾಷೆ ಎನಿಸಿದ' ಸಂಸ್ಕೃತದಲ್ಲಿಯೇ ರಚಿಸಬೇಕೆಂದಿದ್ದ ಭಾವನೆಯನ್ನು ತೊರೆದು ಜೈನಕವಿಗಳು ಕನ್ನಡ ಸಾಹಿತ್ಯ ರಚನೆಗೆ ಆದ್ಯರಾದಂತೆಯೇ ಧಾರ್ಮಿಕ ಗ್ರಂಥಗಳನ್ನು ಕನ್ನಡದಲ್ಲಿ ರಚಿಸುವುದಕ್ಕೂ ಆದ್ಯರೇ ಆದುದು ಒಂದು ವಿಶೇಷವೇ ಸರಿ. ಉಪಲಬ್ಧ ಗ್ರಂಥಗಳಲ್ಲಿ ಪಂಪನ 'ಆದಿಪುರಾಣ'ವೇ ಮೊದಲದಾದರೂ, ಉಪಲಬ್ಧ ಆಧಾರಗಳಿಂದ ಒಂದನೇ ಗುಣವರ್ಮನ 'ಹರಿವಂಶ'ವೇ ಮೊದಲನೆಯದಾಗಿದೆ. ಪೊನ್ನನ 'ಶಾಂತಿ ಪುರಾಣ,' ರನ್ನನ 'ಅಜಿತ ಪುರಾಣ,' ಎರಡನೆ ನಾಗವರ್ಮನ 'ವರ್ಧಮಾನ ಪುರಾಣ,' ನಾಗಚಂದ್ರನ 'ಮಲ್ಲಿನಾಥಪುರಾಣ,' ಕರ್ಣ ಪಾರ್ಯನ 'ನೇಮಿನಾಥ ಪುರಾಣ,' ನೇಮಿಚಂದ್ರನ 'ನೇಮಿನಾಥ ಪುರಾಣ, ಅಗ್ಗಳನ 'ಚಂದ್ರಪ್ರಭ ಪುರಾಣ,' ಆಚಣ್ಣನ 'ವರ್ಧಮಾನ ಪುರಾಣ, ಬಂಧುವರ್ಮನ 'ಹರಿವಂಶಾಭ್ಯುದಯ,' ಪಾರ್ಶ್ವ ಪಂಡಿತನ 'ಪಾರ್ಶ್ವ ನಾಥ ಪುರಾಣ,' ಜನ್ನನ 'ಅನಂತನಾಥ ಪುರಾಣ,' ಎರಡನೆ ಗುಣವರ್ಮನ 'ಪುಷ್ಪದಂತ ಪುರಾಣ, ಕಮಲಭವನ 'ಶಾಂತೀಶ್ವರ ಪುರಾಣ,' ಮಹಾಬಲ ಕವಿಯ 'ನೇಮಿನಾಥ ಪುರಾಣ' ಬಾಹುಬಲಿ ಪಂಡಿತನ 'ಧರ್ಮನಾಥ ಪುರಾಣ, ಮಧುರನ 'ಧರ್ಮನಾಥ ಪುರಾಣ'—ಇವು ಹಳಗನ್ನಡದ ಪ್ರೌಢ ಚಂಪೂ ಕಾವ್ಯಗಳಾದರೆ, ಚಾವುಂಡರಾಯನ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' (ಚಾವುಂಡ ರಾಯ ಪುರಾಣ), ಹಸ್ತಿಮಲ್ಲನ 'ಆದಿಪುರಾಣ'ಗಳು ಹಳಗನ್ನಡದ ಪ್ರೌಢ ಗದ್ಯಕಾವ್ಯಗಳು. ಮೂರನೆ ಮಂಗರಸನ 'ನೇಮಿಜಿನೇಶ ಸಂಗತಿ', ದೊಡ್ಡಯ್ಯನ 'ಚಂದ್ರಪ್ರಭ ಚರಿತ'ಗಳು ಸಾಂಗತ್ಯಕಾವ್ಯಗಳು. ಶಾಂತಿಕೀರ್ತಿ ಮುನಿಯ 'ಶಾಂತಿನಾಥ ಚರಿತ್ರೆ', ಪದ್ಮ ಕವಿಯ 'ವರ್ಧಮಾನ ಚರಿತ್ರೆ', ದೊಡ್ಡಣಾಂಕನ 'ಚಂದ್ರಪ್ರಭ ಷಟ್ಪದಿ' ಇವು ಷಟ್ಪದಿ ಕಾವ್ಯಗಳು.

**ಜೈನ ಪುರಾಣಗಳ ಸಾಮಾನ್ಯ ಸ್ವರೂಪ :** ಧರ್ಮಧರರಾದ ತೀರ್ಥಂಕರರ, ಚಕ್ರಧರರಾದ ಚಕ್ರವರ್ತಿಗಳ, ಅವರವರ ಕಾಲಗಳಲ್ಲಿದ್ದ ನಾರಾಯಣ, ವಾಸುದೇವ, ಪ್ರತಿವಾಸುದೇವರುಗಳ ಚರಿತವೇ ಜೈನಪುರಾಣ'.

ಇವು ತೀರ್ಥಂಕರನ ಭವಾವಳಿಗಳು, ಪಂಚಕಲ್ಯಾಣಗಳನ್ನು ವಿವರಿಸುವುದ ರೊಂದಿಗೇ ಜೈನಧರ್ಮವನ್ನೂ ಬೋಧಿಸುತ್ತವೆ.

ಕರ್ಮಬದ್ಧನಾಗಿ ಚತುರ್ಗತಿರೂಪವಾದ ಸಂಸಾರದಲ್ಲಿ ತೊಳಲುತ್ತಿರುವ ಜೀವನು ತನ್ನ ಪಾಪಗಳ ಫಲವಾಗಿ ಕರ್ಮ ಬಂಧನವನ್ನು ಹೆಚ್ಚಿಸಿಕೊಂಡು ನರಕ ವಾಸಿಯಾಗಿ ಕಷ್ಟವನ್ನನುಭವಿಸುವುದಕ್ಕೂ, ಪುಣ್ಯದ ಫಲವಾಗಿ ಕರ್ಮಬಂಧನ ವನ್ನು ಕಡಿಮೆ ಮಾಡಿಕೊಂಡು ಸ್ವರ್ಗಲೋಕವಾಸಿಯಾಗಿ ಸುಖವನ್ನನುಭವಿಸು ವುದಕ್ಕೂ, ಪುಣ್ಯಪಾಪಗಳೆರಡನ್ನೂ ಕಳೆದುಕೊಂಡು ಜಿನನಾಗುವುದಕ್ಕೂ ಸ್ವತಂತ್ರನು. ಆದರೆ, ಇಹಲೋಕದ ಸುಖಕ್ಕೆ ಸಹಜವಾಗಿ ಮಾರುಹೋಗುವ ಜೀವ ಸಂಸಾರ ಬದ್ಧನಾಗಿ ತೊಳಲುತ್ತಾನೆ. ಧರ್ಮೋಪದೇಶ, ಉತ್ತಮರ ಸಂಸರ್ಗ, ಪುಣ್ಯ ಕಾರ್ಯಗಳಿಂದ ಅಭವ್ಯನಾಗಿದ್ದ ಜೀವನು ದೂರ ಭವ್ಯನಾಗಿ, ಆಸನ್ನಭವ್ಯನಾಗಿ, ಕಡೆಗೆ ಭವ್ಯನಾಗಿ ಆತ್ಮೋದ್ಧಾರದ ಹಾದಿಯನ್ನು ಹಿಡಿಯ ಬಲ್ಲನು. ಹೀಗೆ ಜೀವನು ಕಾಲಲಬ್ಧಿಯಿಂದ ಭವ್ಯನಾಗಿ ಉತ್ತಮ ಜನ್ಮಗಳನ್ನು ಎತ್ತುತ್ತಾ ಮೇಲೆ ಮೇಲೆ ಏರಿಹೋಗಿ, ಕಡೆಗೆ ತೀರ್ಥಂಕರತ್ವವನ್ನು ಪಡೆಯು ವುದೇ ಜೈನ ಪುರಾಣ ಕಥಾವಸ್ತು.

**ವೈಶಿಷ್ಟ್ಯ:** ಅಜಿತ ಪುರಾಣದ ಕಥೆಗೆ ಆಧಾರ—ಪ್ರಥಮಾನುಯೋಗ. "ಜೈನರಿಗೆ ಧರ್ಮಜ್ಞಾನ ಭಂಡಾರವಾದ ಶ್ರುತಸ್ಕಂಧದಲ್ಲಿ ನಾಲ್ಕು ಅನು ಯೋಗಗಳು. ಇವುಗಳಲ್ಲಿ ಮೊದಲನೆಯದಾದ ಪ್ರಥಮಾನುಯೋಗವು ತೀರ್ಥಂಕರ, ಚಕ್ರವರ್ತಿ, ಬಲದೇವ, ವಾಸುದೇವ, ಪ್ರತಿವಾಸುದೇವರೆಂಬ ತ್ರಿಷಷ್ಟಿಶಲಾಕಾ ಪುರುಷರ ಚರಿತೆಯನ್ನು ತಿಳಿಸುತ್ತದೆ; ಎರಡನೆಯ ಕರಣಾನು ಯೋಗವು ಜೈನರ ಲೋಕ ಅಲೋಕಗಳ ಕಲ್ಪನೆಯನ್ನು ಸ್ವರ್ಗಮರ್ತ್ಯ ಪಾತಾಳ ಗಳ ವರ್ಣನೆಯನ್ನು ಒಳಗೊಂಡಿರುತ್ತದೆ; ಮೂರನೆಯ ದ್ರವ್ಯಾನುಯೋಗದಲ್ಲಿ ಜೀವ ಅಜೀವ ದ್ರವ್ಯಗಳ ತಾತ್ವಿಕವಾದ ವಿವೇಚನೆಯಿದೆ; ಕೊನೆಯದಾದ ಚರಣಾನುಯೋಗವು ಜೈನ ಮುನಿಗಳ ಹಾಗೂ ಜೈನ ಗೃಹಸ್ಥರ ಆಚಾರಗಳನ್ನು ತಿಳಿಯಪಡಿಸುತ್ತದೆ. ಮೇಲುನೋಟಕ್ಕೆ ಈ ನಾಲ್ಕು ಅನುಯೋಗಗಳೂ ಬೇರೆಬೇರೆಯಾಗಿ ತೋರಿದರೂ ಇವುಗಳಿಗೆ ಅವಿಭಾಜ್ಯವಾದ ಆಂತರಿಕ ಸಂಬಂಧ ವುಂಟು. ಪ್ರಥಮಾನುಯೋಗದ ಕಥೆಗಳ ಮೂಲಕವಾಗಿ ಮಿಕ್ಕ ಅನು ಯೋಗಗಳ ಜ್ಞಾನವನ್ನು ಉಂಟುಮಾಡುವುದು ಜೈನರ ಮಾರ್ಗ............

ಹೀಗೆ ನಾಲ್ಕು ಅನುಯೋಗಗಳನ್ನು ತನ್ನಲ್ಲಿ ಮೆಯ್ಗೂಡಿಸಿಕೊಳ್ಳುವುದು ಜೈನ ಪುರಾಣಗಳ ಒಂದು ವೈಶಿಷ್ಟ್ಯ.''

**ಭವಾವಳಿ :** ತೀರ್ಥಂಕರರ ಪುರಾಣಗಳಲ್ಲಿ ಭವಾವಳಿಯದು ಒಂದು ಭಾಗವಾದರೆ, ಪಂಚಕಲ್ಯಾಣಗಳದು ಇನ್ನೊಂದು ಭಾಗ. 'ಭವಾವಳಿಯ ನಿರೂಪಣೆಯು ಜೈನಪುರಾಣಗಳಿಗೆ ಪ್ರಸ್ತಾವನೆಯಂತೆ ಇರುವುದು.' ಜೀವನು ವಿಕಾಸ ಹೊಂದುತ್ತಾ ಹೋಗುವ ಜನ್ಮಗಳ ಕಥೆಯೇ "ಭವಾವಳಿ." "ಯಾವ ಭವದಲ್ಲಿ ಕಾಲಲಬ್ಧಿ ದೊರೆಕೊಂಡಿತೋ ಆ ಭವದಿಂದ ಮುಕ್ತಿ ಪಡೆಯುವವರೆಗಿನ ಭವಗಳೇ ಮುಖ್ಯವಾದುದರಿಂದ, ಆ ಭವಗಳಲ್ಲಿಯೇ ಜೀವದ ನಿಜವಾದ ಬೆಳವಣಿಗೆ ಕಾಣುವುದರಿಂದ ಆ ಭವಗಳ ಸಾಲನ್ನು ಮಾತ್ರ ಭವಾವಳಿ ಎಂದು ಗಣಿಸಿ, ಜೈನ ಪುರಾಣಗಳು ವಿಸ್ತರಿಸುತ್ತವೆ. ಈ ಭವಾವಳಿ, ಈ ಜನ್ಮಾಂತರ ಕತೆಗಳ ಮಾಲೆ ತೊಡಕು ತೊಡಕಾಗಿ ಕಾಣಬಹುದು. ಕಾರಣ–ಅದು ಇರುವುದೇ ತೊಡಕು ತೊಡಕಾಗಿ. ಹಾಗೆ ಇರುವುದಕ್ಕೆ ಕಾರಣ–ಅದು ಸಂಸಾರದ ಪ್ರತಿಬಿಂಬ. ಜೀವ ಅನಾದಿಕಾಲದಿಂದ ಅನುಭವಿಸಿದ ತೊಡಕು ಜೈನ ಪುರಾಣಗಳಲ್ಲಿ ಕಾಣುವ ಈ ತೊಡಕಿಗಿಂತ ಅನೇಕ ಪಾಲು ಹೆಚ್ಚು. ಕಾಲಲಬ್ಧಿ ದೊರೆಕೊಂಡ ಮೇಲಿನ ಭವಗಳಿಗೇ ಇಷ್ಟು ಹಿಂಜರಿಯುವುದಾದರೆ, ಜೀವ ಮಿಥ್ಯಾತ್ವದಿಂದ ತಂದುಕೊಳ್ಳುತ್ತಿರುವ ಅಸಂಖ್ಯ ಭವಾವಳಿಗೆ ಎಷ್ಟು ಹಿಂಜರಿಯಬೇಡ ? ಎಷ್ಟು ಬೇಗ ಭವಕ್ಕೆ ಭೀತನಾಗಿ, ಸಮ್ಯಕ್ತ್ವವನ್ನು ಕೈಕೊಂಡು ಮೋಕ್ಷಗಾಮಿಯಾಗಬೇಡ ? ಈ ದೃಷ್ಟಿಯನ್ನು ತರುವುದಕ್ಕಾಗಿಯೇ ಜೈನ ಪುರಾಣಗಳಲ್ಲಿ ಭವಾವಳಿಯ ನಿರೂಪಣೆ '.

ತೀರ್ಥಂಕರರಲ್ಲಿ ಆದಿ ತೀರ್ಥಂಕರ ವೃಷಭನಾಥನು ಕಾಲಲಬ್ಧಿ ಹೊಂದಿದ ಮೇಲೆ ಒಂಬತ್ತು ಜನ್ಮಗಳಲ್ಲಿ ವಿಕಾಸಹೊಂದುತ್ತಾ ಬಂದು, ಹತ್ತನೆಯ ಜನ್ಮದಲ್ಲಿ ವೃಷಭನಾಥನಾಗಿ ಹುಟ್ಟುವನು. ಕಡೆಯ ತೀರ್ಥಂಕರ ಮಹಾವೀರನ ಭವಾವಳಿ ಅತ್ಯಂತ ಹೆಚ್ಚಿನದು. ಆದಿ ಜಿನನ ಕಾಲದಲ್ಲಿಯೇ ಆತನ ಮೊಮ್ಮಗನಾಗಿ ಮರೀಚಿ ಎಂಬ ಹೆಸರಿನಿಂದ ಜನ್ಮ ತಳೆದು, ಆದಿ ತೀರ್ಥಂಕರನು ದೀಕ್ಷೆ ವಹಿಸಿದಾಗ ತಾನೂ ದೀಕ್ಷೆ ವಹಿಸಿ, ಕರ್ಮ ಫಲದಿಂದ ವ್ರತಭಂಗ ಮಾಡಿಕೊಂಡು ಅಷ್ಟು ನಿಡುಗಾಲ ತೊಳಲಾಡಿ ಕಡೆಗೆ ಮಹಾವೀರ ಜನ್ಮವನ್ನು ತಳೆದನು. ಉಳಿದ ತೀರ್ಥಂಕರರುಗಳಲ್ಲಿ ಶಾಂತಿನಾಥನ ಭವಾವಳಿಗಳು ಹನ್ನೊಂದು ; ನೇಮಿ,

ಪಾರ್ಶ್ವರ ಭವಾವಳಿಗಳು ಒಂಬತ್ತು ; ಚಂದ್ರಪ್ರಭ ಜಿನನ ಭವಾವಳಿಗಳು ಆರು ; ಉಳಿದ ಹದಿನೆಂಟು ಜಿನರ ಭವಾವಳಿಗಳು ಎರಡೆರಡು.

**ಪಂಚ ಕಲ್ಯಾಣ :** 'ಸುರಲೋಕಾವತರೋತ್ಸವಂ ಪರಿಕೃತಂ ಜನ್ಮಾಬಿಷೇಕೋತ್ಸವಂ। ಪರಿನಿಷ್ಕ್ರಾಂತಿ ಮಹೋತ್ಸವಂ ಪ್ರವಿಮಲಂ ಕೈವಲ್ಯಬೋಧೋತ್ಸವಂ। ಪರಿನಿರ್ವಾಣ ಮಹೋತ್ಸವಂ ಜಿನ ಕಲ್ಯಾಣಮಯ್ದುಂ ಸವಿಸ್ತರದಿಂ '(ಅ. ಪ್ರ. ೧-೬೫)ದಿರುವುದೇ ತೀರ್ಥೇಶ್ವರ ಚರಿತೆ.

ಮುಂದೆ ತೀರ್ಥಂಕರನಾಗಲಿರುವ ಜೀವ ತನ್ನ ಪುಣ್ಯಫಲದಿಂದ ಸ್ವರ್ಗ ಸುಖವನ್ನನುಭವಿಸುತ್ತಿರುತ್ತಾನೆ. ಅವನು ಭೂಲೋಕಕ್ಕೆ ಅವತರಿಸಿ ಬರಲು ಇನ್ನಾರು ತಿಂಗಳುಗಳಿರುವಾಗ ಇದನ್ನು ತನ್ನ ಜ್ಞಾನಶಕ್ತಿಯಿಂದ ಅರಿತ ದೇವೇಂದ್ರನು ಕುಬೇರನಿಂದ ಯಾವ ರಾಜ ರಾಣಿಯರಲ್ಲಿ ಇವನು ಅವತರಿಸಲಿರುವನೋ ಆ ರಾಜನ ರಾಜ್ಯದಲ್ಲಿ ಆರು ತಿಂಗಳಕಾಲ ಸುವರ್ಣವೃಷ್ಟಿಯನ್ನು ಕರೆಸುತ್ತಾನೆ. ದಿಕ್ಕುಮಾರಿಯರನ್ನೂ ದೇವಸ್ತ್ರೀಯರನ್ನೂ ಕಳುಹಿಸಿ ಆ ರಾಣಿಯ ಗರ್ಭಶೋಧನೆ ಮಾಡಿಸುತ್ತಾನೆ ; ಶುಶ್ರೂಷೆ ಮಾಡಿಸುತ್ತಾನೆ. ತೀರ್ಥಂಕರನಾಗಲಿರುವ ಜೀವ ತಾಯಿಯ ಗರ್ಭಕ್ಕೆ ಅವತರಿಸಿ ಬರುವಂದಿನ ರಾತ್ರಿ ಆ ತಾಯಿ ಹದಿನಾರು ಶುಭಸ್ವಪ್ನಗಳನ್ನು ಕಾಣುತ್ತಾಳೆ ; ಅನಂತರ ಆ ಜೀವ ಆಕೆಯ ಗರ್ಭದಲ್ಲಿ ಅವತರಿಸುತ್ತದೆ. ಇದನ್ನು ತಿಳಿದ ಇಂದ್ರಾದಿಗಳೆಲ್ಲರೂ ಬಂದು ತೀರ್ಥಂಕರನ ತಂದೆ ತಾಯಿಯಾಗಲಿರುವ ರಾಜ-ರಾಣಿಯರಿಗೆ ಮಂಗಲಾಭಿಷೇಕಮಾಡಿ ಗೌರವಿಸುತ್ತಾರೆ. ಇದು 'ಸುರಲೋಕಾವತರೋತ್ಸವ' ಅಥವಾ 'ಗರ್ಭಾವತರಣ ಕಲ್ಯಾಣ.'

ದೇವಲೋಕದ ಸ್ತ್ರೀಯರ ಸಹಯೋಗದಲ್ಲಿ ಸಂತೋಷದಿಂದ ಸುಖವಾಗಿ ಆ ಗರ್ಭಿಣಿ ಒಂಬತ್ತು ತಿಂಗಳು ಕಳೆದ ಮೇಲೆ ತೀರ್ಥಂಕರನಾಗಲಿರುವ ಶಿಶುವಿನ ಜನನವಾಗುತ್ತದೆ. ತನ್ನ ಜ್ಞಾನ ಶಕ್ತಿಯಿಂದ ಇದನ್ನರಿತ ದೇವೇಂದ್ರ, ತನ್ನೆಲ್ಲ ಪರಿವಾರದೊಡನೆ, ತನ್ನ ಪತ್ನಿ ಶಚೀದೇವಿಯೊಂದಿಗೆ ಬರುತ್ತಾನೆ. ಇಂದ್ರನ ಸೂಚನೆಯಂತೆ ಶಚೀದೇವಿ ಜಿನ ಮಾತೆಗೆ ಮಾಯಾ ನಿದ್ರೆಯನ್ನು ಬರಿಸಿ, ಮಾಯಾ ಶಿಶುವನ್ನು ಅವಳ ಮಗ್ಗುಲಲ್ಲಿರಿಸಿ, ಜಿನ ಶಿಶುವನ್ನು ಎತ್ತಿ ತಂದು ಪತಿಯ ಕೈಗೆ ಕೊಡುತ್ತಾಳೆ. ಇಂದ್ರನು ಆ ಮಗುವನ್ನು ಎತ್ತಿಕೊಂಡು ಐರಾವತ ಗಜವನ್ನೇರಿ ತನ್ನೆಲ್ಲ ಪರಿವಾರದೊಂದಿಗೆ ವೈಭವದಿಂದ ಮೇರು ಪರ್ವತಕ್ಕೆ

ಹೋಗಿ, ಅದರ ನೆತ್ತಿಯ ಮೇಲಿರುವ ಪಾಂಡುಕ ಶಿಲೆಯ ಮೇಲೆ ಮಗುವನ್ನು ಪೂರ್ವಾಭಿಮುಖವಾಗಿ ಕೂರಿಸಿ, ಕ್ಷೀರ ಸಮುದ್ರದಿಂದ ದೇವತೆಗಳು ತಂದ ಹಾಲಿನಿಂದ ಅಭಿಷೇಕ ಮಾಡುತ್ತಾನೆ. ಹುಟ್ಟಿನೊಂದಿಗೇ ತ್ರಿಜ್ಞಾನಗಳುಂಟಾಗಿ ರುವ ಆ ಮಗುವನ್ನು ಅಭಿಷೇಕಾನಂತರ ಅದೇ ಪರಿವಾರದೊಂದಿಗೆ ವೈಭವದಿಂದ ಹಿಂದಿರುಗಿ ತಂದು ತಂದೆ ತಾಯಿಯರಿಗೊಪ್ಪಿಸಿ, ನಾಮಕರಣವನ್ನು ಮಾಡಿ ಎಲ್ಲರೂ ಆನಂದ ನೃತ್ಯವನ್ನೆಸಗಿ ಸಂತೋಷದಿಂದ ಹಿಂದಿರುಗುತ್ತಾರೆ. ಇದು 'ಜನ್ಮಾಭಿಷೇಕೋತ್ಸವ' ಅಥವಾ 'ಜನ್ಮಾಭಿಷೇಕ ಕಲ್ಯಾಣ.'

ತೀರ್ಥಂಕರ ಬಾಲಕ ಬೆಳೆದು ಕ್ಷತ್ರಿಯೋಚಿತವಾದ ವಿದ್ಯೆಗಳನ್ನು ಕಲಿತು ಯುವರಾಜನಾಗಿ, ರಾಜನಾಗಿ, ಬಹುಪಟ್ಟಿಗೆ ಬಾಹ್ಯಕಾರಣ ಒಂದರ ನೆಪದಿಂದ ವೈರಾಗ್ಯ ಹೊಂದುತ್ತಾನೆ. ಲೋಕಾಂತಿಕ ದೇವತೆಗಳು ಬಂದು ಧರ್ಮೋಪ ದೇಶಮಾಡಿ ಆ ವೈರಾಗ್ಯವನ್ನು ಬಲ ಪಡಿಸುತ್ತಾರೆ. ಇಂದ್ರಾದಿಗಳು ಬಂದು ಪೂಜಿಸುತ್ತಾರೆ. ರಾಜ್ಯವನ್ನು ಮಗನಿಗೊಪ್ಪಿಸಿ ಎಲ್ಲರನ್ನೂ ತೊರೆದು ದೇವತೆ ಗಳು ತಂದ ಶಿಬಿಕೆಯನ್ನೇರಿ ತಪೋವನಕ್ಕೆ ತೆರಳುತ್ತಾನೆ. ದೀಕ್ಷೆಯನ್ನು ಪಡೆದು ತಪೋನಿರತನಾಗುತ್ತಾನೆ. ಹೀಗೆ ಸಂಸಾರವನ್ನು ತೊರೆದು ದೀಕ್ಷಾಭಿಮುಖನಾಗಿ ಹೋಗುವುದೇ 'ಪರಿನಿಷ್ಕ್ರಾಂತಿ ಮಹೋತ್ಸವ' ಅಥವಾ 'ಪರಿನಿಷ್ಕ್ರಮಣ ಕಲ್ಯಾಣ.'

ತಪಸ್ಸಿನಲ್ಲಿ ದಿನಗಳೆಯುತ್ತಾ ನಾಲ್ಕನೆಯದಾದ ಮನಃ ಪರ್ಯಾಯ ಜ್ಞಾನವನ್ನು ಪಡೆಯುತ್ತಾನೆ. ಧರ್ಮಸಾಧನವಾದ ಶರೀರ ದಾರ್ಢ್ಯತೆಗಾಗಿ ಆಹಾರ ಭಿಕ್ಷೆಯನ್ನು ಸತ್ಪಾತ್ರನಿಂದ ಪಡೆಯುತ್ತಾನೆ. ಈ ಭಿಕ್ಷೆಯನ್ನು ನೀಡುವ ಪುಣ್ಯವೂ ಅಸಾಮಾನ್ಯವಾದುದು. ಭಿಕ್ಷೆಯನ್ನು ಪಡೆಯುವಾಗ ಪಂಚಾಶ್ಚರ್ಯ ಗಳುಂಟಾಗುತ್ತವೆ. ಭಿಕ್ಷೆ ನೀಡಿದವನ ಪುಣ್ಯಕ್ಕೂ ಎಣೆಯಿಲ್ಲ. ಭಿಕ್ಷೆಯನ್ನು ಪಡೆದನಂತರ ಮತ್ತೆ ತಪಸ್ಸಿಗೆ ನಿಂತು ಘಾತಿಕರ್ಮಗಳನ್ನು ನಾಶಗೊಳಿಸಿ, ಐದನೆಯದಾದ ಅತಿಶಯವಾದ ಕೇವಲಜ್ಞಾನವನ್ನು ಪಡೆಯುತ್ತಾನೆ. ತನ್ನ ಜ್ಞಾನಶಕ್ತಿಯಿಂದ ಇದನ್ನರಿತ ದೇವೇಂದ್ರನು ತನ್ನ ಪರಿವಾರದೊಡನೆ ಬಂದು ಈ ಕೇವಲಜ್ಞಾನಿಯನ್ನು ಪೂಜಿಸಿ ಆನಂದೋತ್ಸಾಹದಿಂದ ಹಿಂದಿರುಗುತ್ತಾನೆ. ಹೀಗೆ ಕೇವಲಜ್ಞಾನವನ್ನು ಸಂಪಾದಿಸುವುದೇ 'ಕೈವಲ್ಯಬೋಧೋತ್ಸವ' ಅಥವಾ 'ಕೇವಲಜ್ಞಾನ ಕಲ್ಯಾಣ.'

ಕೇವಲಜ್ಞಾನವನ್ನು ಪಡೆದು ಸರ್ವಜ್ಞನಾಗುತ್ತಾನೆ. ಈತನೇ ಜಿನ;

ಅರಹಂತ. ಸರ್ವಜ್ಞತ್ವವನ್ನು ಪಡೆದ ಈತ ಲೋಕಕಲ್ಯಾಣಾರ್ಥವಾಗಿ ಜನತೆಗೆ ಸಮಸ್ತ ಪ್ರಾಣಿವರ್ಗಕ್ಕೆ ಅದರದರ ಭಾಷೆಯಲ್ಲಿಯೇ ಧರ್ಮಬೋಧೆ ಮಾಡುತ್ತಾನೆ. ಇದಕ್ಕಾಗಿ ಇಂದ್ರನ ಅಪ್ಪಣೆಯಂತೆ ಕುಬೇರನು ಉಪದೇಶಮಂಟಪ—ಸಮವಸರಣವನ್ನು ನಿರ್ಮಿಸಿಕೊಡುತ್ತಾನೆ. ಈ ಪ್ರದೇಶದ ಭವ್ಯತೆ ಎಂಥದೆಂದರೆ ಪ್ರಾಣಿವರ್ಗವು ತಮ್ಮ ಸಹಜವೈರವನ್ನು ಬಿಟ್ಟು ಪ್ರೇಮಮಯಿಯಾಗಿರುತ್ತವೆ,

ಸಾರಂಗೀ ಸಿಂಹಶಾಬಂ ಸ್ಪೃಶತಿ ಸುತಧಿಯಾ ನಂದಿನೀ ವ್ಯಾಘ್ರಪೋತಂ
ಮಾರ್ಜಾರೀ ಹಂಸಬಾಲಂ ಪ್ರಣಯಪರವಶಾ ಕೇಕಿಕಾಂತಾ ಭುಜಂಗಂ।
ವೈರಾಣ್ಯಾಜನ್ಮಜಾತಾನ್ಯಪಿ ಗಲಿತಮದಾ ಜಂತವೋಽನ್ಯೇತ್ಯಜಂತಿ
ಶ್ರಿತ್ವಾ ಸಾಮ್ಯೈಕರೂಢಂ ಪ್ರಶಮಿತಕಲುಷಂ ಯೋಗಿನಂ ಕ್ಷೀಣಮೋಹಂ ॥

[ಶತ್ರು ಮಿತ್ರರಲ್ಲಿಯೂ ಇಷ್ಟಾನಿಷ್ಟ ವಸ್ತುಗಳಲ್ಲಿಯೂ ಸಂಪೂರ್ಣವಾಗಿ ಸಮಭಾವವುಳ್ಳವನೂ ಪಾಪವನ್ನು ಉಪಶಮ ಮಾಡಿದವನೂ ಮೋಹರಹಿತನೂ ಆದ ಯೋಗಿಯ ಸಾನಿಧ್ಯದಲ್ಲಿ ಪ್ರೀತ್ಯತಿಶಯದಿಂದ ಹೆಣ್ಣು ಜಿಂಕೆಯು ಸಿಂಹದ ಮರಿಯನ್ನೂ, ಹಸುವು ಹುಲಿಯ ಮರಿಯನ್ನೂ ಹೆಣ್ಣು ಬೆಕ್ಕು ಹಂಸದ ಮರಿಯನ್ನೂ ಹೆಣ್ಣು ನವಿಲು ಸರ್ಪವನ್ನೂ ಪುತ್ರಪ್ರೇಮದಿಂದ ಸ್ಪರ್ಶಿಸುತ್ತವೆ; ಬೇರೆ ಪ್ರಾಣಿಗಳೂ ಮದರಹಿತಗಳಾಗಿ ಜನ್ಮಸಿದ್ಧವಾದ ತಮ್ಮ ಜಾತಿ ವೈರಗಳನ್ನು ಬಿಡುತ್ತವೆ].

ಉಪದೇಶವಾಣಿ ಸರ್ವಭಾಷಾಮಯಿಯೂ, ವಿಷಯ ಸರ್ವಗ್ರಾಹಿಯೂ ಆಗಿರುತ್ತದೆ. ಹೀಗೆ ಲೋಕಸಂಚಾರ ಮಾಡುತ್ತಾ ಆಯು ತೀರುತ್ತಿರುವುದನ್ನು ಕಂಡುಕೊಂಡು, ಕಡೆಗೆ ಒಂದೆಡೆ ನಿಂತು, ತಪೋನಿರತನಾಗಿ ಉಳಿದಿರುವ ಅಘಾತಿ ಕರ್ಮಗಳನ್ನೂ ನಾಶಮಾಡಿ ಮೋಕ್ಷವನ್ನು ಹೊಂದುತ್ತಾನೆ. ಆಗ ದೇವೇಂದ್ರಾದಿಗಳೆಲ್ಲರೂ ಬಂದು ಪೂಜಿಸುತ್ತಾರೆ. ಅಗ್ನೀಂದ್ರನ ಕಿರೀಟಸ್ಪರ್ಶದಿಂದ ತೀರ್ಥಂಕರನ ದೇಹ ದಹನವಾಗುತ್ತದೆ. ಆ ಭಸ್ಮವನ್ನು ಎಲ್ಲರೂ ಭಕ್ತಿಯಿಂದ ಹಣೆಗಿಟ್ಟುಕೊಂಡು, ಆನಂದೋತ್ಸಾಹದಿಂದ ಕೂಡಿ ನಲಿದು ಹಿಂದಿರುಗುತ್ತಾರೆ. ಇದು 'ಪರಿನಿರ್ವಾಣ ಮಹೋತ್ಸವ' ಅಥವಾ 'ಮೋಕ್ಷ ಕಲ್ಯಾಣ.'

**ಚಕ್ರವರ್ತಿ ಚರಿತ್ರೆ :** ಚಕ್ರವರ್ತಿಗಳ ಕಥೆ ಎಲ್ಲ ತೀರ್ಥಂಕರರ ಪುರಾಣಗಳಲ್ಲಿಯೂ ಬರುವಂತಹುದಲ್ಲ. ಕಾರಣ, ಚಕ್ರವರ್ತಿಗಳು ಹನ್ನೆರಡು ಮಂದಿ

ಮಾತ್ರ. ತೀರ್ಥಂಕರ ಪುರಾಣದಂತೆಯೇ ಚಕ್ರವರ್ತಿ ಚರಿತ್ರೆಯು ಹೊರ ಚೌಕಟ್ಟೊ ಒಂದೇ ಆಗಿದೆ.

ಚಕ್ರವರ್ತಿಯಾಗುವ ಪುಣ್ಯವಂತನಿಗೆ ನವನಿಧಿಗಳೂ ಚತುರ್ದಶ ರತ್ನಗಳೂ ಒದಗಿ ಬರುತ್ತವೆ. ಆಯುಧಾಗಾರದಲ್ಲಿ ಚಕ್ರರತ್ನ ಹುಟ್ಟುತ್ತದೆ. ಚಕ್ರವರ್ತಿ ಅದನ್ನು ಪೂಜಿಸಿ, ಅದನ್ನೇ ಮುಂದಿಟ್ಟುಕೊಂಡು ದಿಗ್ವಿಜಯೋದ್ಯುಕ್ತನಾಗಿ ಪೂರ್ವಾಭಿಮುಖವಾಗಿ ಪ್ರಯಾಣ ಹೊರಡುತ್ತಾನೆ. ಇವನ ಬರವನ್ನು ಕೇಳಿದ ರಾಜರು ಕಪ್ಪಕಾಣಿಕೆಗಳನ್ನೊಪ್ಪಿಸಿ ಶರಣಾಗುತ್ತಾರೆ. ಮಱೆತು ನಿಂತ ಕೆಲವರು ಹಿರಿಯರ ಉಪದೇಶದಿಂದ ಶರಣು ಬರುತ್ತಾರೆ. ಹೀಗೆ ಷಟ್ಖಂಡಗಳನ್ನೂ ಗೆದ್ದು ವೃಷಭಾದ್ರಿಯ ಮೇಲೆ ತನ್ನ ವಿಜಯಪ್ರಶಸ್ತಿಯನ್ನು ಬರೆಸಲು ಬಂದರೆ ಅಲ್ಲಿ ಎಡೆಯೇ ಇರದಷ್ಟು ಇಂಥವೇ ಪ್ರಶಸ್ತಿಗಳು ತುಂಬಿ ಹೋಗಿರುತ್ತವೆ. ಆಗ ಕಿನಿಸಿ, ಅವುಗಳಲ್ಲೊಂದನ್ನು ಅಳಿಸಿ, ತನ್ನ ಪ್ರಶಸ್ತಿಯನ್ನು ಬರೆಸಿ, ದಿಗ್ವಿಜಯವನ್ನು ಮುಗಿಸಿ ರಾಜಧಾನಿಗೆ ಹಿಂದಿರುಗುತ್ತಾನೆ. ಈ ಹೊತ್ತಿಗೆ ಚಕ್ರವರ್ತಿಗೆ ಅಮಿತ ಸಂಪತ್ತೂ, ಅನೇಕ ಕನ್ಯಾರತ್ನಗಳೂ ಕಾಣಿಕೆಯಾಗಿ ದೊರೆತಿರುತ್ತವೆ. ಅಲ್ಲಿ ಚಕ್ರರತ್ನವನ್ನು ಪೂಜಿಸಿ ಜಿನಪೂಜೆಯನ್ನು ಮಾಡಿದ ಬಳಿಕ ಸಮಸ್ತ ಕ್ಷತ್ರಿಯ ರಾಜರೂ ಕೂಡಿ ವೈಭವದಿಂದ ಚಕ್ರವರ್ತಿ ಸೂಚಕವಾಗಿ ಸಾಮ್ರಾಜ್ಯಪಟ್ಟಾಭಿಷೇಕವನ್ನು ಮಾಡಲು ಸುಖವಾಗಿರುತ್ತಾನೆ. ಹೀಗಿರುತ್ತಾ ಕಡೆಗೆ ವೈರಾಗ್ಯ ಹೊಂದಿ, ತಪಸ್ಸಿಗೆ ತೆರಳುತ್ತಾನೆ.

**‘ ಅಜಿತ ತೀರ್ಥಕರ ಪುರಾಣ ತಿಲಕಂ ’ :** ಇದು ಹೆಸರೇ ಸೂಚಿಸುವಂತೆ ಎರಡನೆಯ ತೀರ್ಥಂಕರನಾದ ಅಜಿತನಾಥನ ಜೀವನ ವೃತ್ತಾಂತವನ್ನು ಒಳಗೊಂಡ ಒಂದು ಜೈನ ಪುರಾಣ ಗ್ರಂಥ. ತಾನು ಜಿನಾಗಮ ವೇದಿಗಳಲ್ಲಿ ಅಗ್ರಗಣ್ಯನೆಂದು ಕವಿರತ್ನ ಬಹು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ, ಇದರಲ್ಲಿ, ‘ ನೆಗೞ್ದ ಕವಿ ರತ್ನನಂತೊಳಪುಗುವುದು ಪೊಗ್ಗಾಯ್ತೆ ಜಿನಮತಾಂಬೋಧಿಯುಮಂ ’?–ತಾನು ಜೈನಾಗಮ ಸಮುದ್ರದ ಆಳವನ್ನು ಪ್ರವೇಶಿಸಿ, ಅದರ ಅಖಂಡಜ್ಞಾನವನ್ನು ಪಡೆದವನು, ಈ ವಿಚಾರದಲ್ಲಿ ಪಂಪ ಪೊನ್ನರು ಕೂಡ ತನಗೆ ಸರಿಸಮಾನರಾಗಲಾರರು ; ಅವರ ಪುರಾಣಗಳಲ್ಲಿ ‘‘ ಪರಿಸ್ಫುಟಂ ನೆಜಿಯದಿರ್ದುದುಮಂ ನುಡಿದೆಯ್ದೆ ಬಲ್ಮೆ ’ ಈತನ ಕಾವ್ಯಕ್ಕೆ ಸಲ್ಲಬೇಕು ! ‘ ಎನಿತುಂಟಾಗಮ ವರ್ಣನಂ ಅನಿತುಮನೊಳಕೊಂಡು ಸಕಲ ಭವ್ಯಜನಂಗಳ್ಗೆ ಅನುರಾಗ

ಮನ್ ಒಡರಿಸಿದಪುದು' ಆದ ತನ್ನ ಗ್ರಂಥವು ಬರಿಯ ಪುರಾಣ ಮಾತ್ರವೇ ಅಲ್ಲ, ಪುರಾಣತಿಲಕ. ಇದು ಕವಿ ರನ್ನನ ಚಿಂತನಾಲಹರಿ.

ಅಜಿತ ಪುರಾಣವು ಸುಮಾರು ಎಂಟುನೂರು ಪದ್ಯಗಳನ್ನು ಒಳಗೊಂಡು ಹನ್ನೆರಡು ಆಶ್ವಾಸಗಳಲ್ಲಿ ಹರಡಿರುವ ಒಂದು ಪುಟ್ಟ ಪುರಾಣ ಗ್ರಂಥ. ಇತರ ಎಲ್ಲ ಜೈನ ಪುರಾಣಗಳಂತೆ ಇಲ್ಲಿಯೂ ಜಿನನ–ಎರಡನೆಯ ತೀರ್ಥಂಕರ ಅಜಿತ ನಾಥನ–ಕಥೆ 'ಸುರಲೋಕಾವತರೋತ್ಸವಂ, ಜನ್ಮಾಭಿಷೇಕೋತ್ಸವಂ, ಪರಿನಿಷ್ಕ್ರಾಂತಿ ಮಹೋತ್ಸವಂ, ಕೈವಲ್ಯಬೋಧೋತ್ಸವಂ, ಪರಿನಿರ್ವಾಣ ಮಹೋತ್ಸವಂ' ಎಂಬ ಪಂಚಕಲ್ಯಾಣಗಳ ಹಂದರದ ಮೇಲೆ ಹಬ್ಬಿದೆ. ಆದರೆ ತೀರ್ಥಂಕರನ ಚರಿತ್ರೆಗಾಗಿಯೇ ವಿನಿಯೋಗವಾಗಿರುವುದು ಈ ಗ್ರಂಥದಲ್ಲಿನ ಏಳು ಆಶ್ವಾಸಗಳು ಮಾತ್ರ–ಎರಡರಿಂದ ಎಂಟರವರೆಗೆ; ಮೊದಲ ಮತ್ತು ಕಡೆಯ ಆಶ್ವಾಸಗಳು ದೇವತಾ ಪ್ರಾರ್ಥನೆ, ಅತ್ತಿಮಬ್ಬೆಯ ಪ್ರಶಂಸೆ, ಕವಿಕಾವ್ಯ ಪ್ರಶಸ್ತಿ, ಮಂಗಳಾಶಂಸನಗಳಿಗೆ ಮೀಸಲಾಗಿಹೋಗಿದ್ದರೆ, ಒಂಬತ್ತರಿಂದ ಹನ್ನೊಂದರ ವರಗಿನ ಮೂರು ಆಶ್ವಾಸಗಳನ್ನು ಕಾವ್ಯದ ಉಪನಾಯಕನಂತಿರುವ ಸಗರ ಚಕ್ರವರ್ತಿಯ ಕಥೆಗಾಗಿ ಬಳಸಲಾಗಿದೆ. ಇಷ್ಟೇ ಅಲ್ಲ; ಕಥೆ, ಉಪಕಥೆಗಳೆರಡರಲ್ಲಿಯೂ ಸುಮಾರು ಅರ್ಧಭಾಗದಷ್ಟೆ ಮತ ತತ್ವಗಳ ನಿರೂಪಣೆಯಿಂದ ತುಂಬಿ ಹೋಗಿದೆ. ಸಮವಸರಣದ ವರ್ಣನೆ, ಧ್ಯಾನಯೋಗದ ವರ್ಣನೆ ಇತ್ಯಾದಿ ಭಾಗಗಳಲ್ಲಿ ಮತಪ್ರಕ್ರಿಯೆಗಳಿಂದ ತುಂಬಿದ ವಿಸ್ತೃತ ವಿವರಣೆಗಳು ಬಂದಿರುವುದು ಹಾಗಿರಲಿ; ಕರ್ಮ ಪ್ರಕೃತಿ, ಲೋಕ ವಿಭಾಗ, ಜೀವ ಸ್ವರೂಪಗಳ ವಿವರಣೆಗಾಗಿ ಇಡೀ ಒಂದು ಆಶ್ವಾಸವೇ ಅಖಂಡವಾಗಿ ವಿನಿಯೋಗವಾಗಿದೆ. ಹೂರಣಕ್ಕಿಂತ ಕಣಕವೇ ಹೆಚ್ಚಿನೋ ಎಂಬಂತೆ ಇಲ್ಲಿ ಕಥಾಭಾಗವು ಗೌಣ ಸ್ಥಾನವನ್ನು ಪಡೆದಿದೆ.

ಅಜಿತ ಪುರಾಣದಲ್ಲಿ ಕಾವ್ಯಗುಣಗಳೇ ಇಲ್ಲವೆಂದಲ್ಲ. ಕವಿಯು ತನ್ನ ಹಿರಿಯನಾದ ಪಂಪನಂತೆಯೆ ತಾನೂ ತನ್ನ ಕಾವ್ಯದಲ್ಲಿ ಧರ್ಮ, ಕಾವ್ಯಧರ್ಮಗಳೆರಡನ್ನೂ–ಅಭಿನುತ ಜೈನೇಂದ್ರವಚೋ ವಿಭವಂ, ಶಬ್ದಾನುಶಾಸನ ಪ್ರಭವ ವಚೋ ವಿಭವಂ–ಕಂಡುಕೊಂಡಿರುವುದಾಗಿ ಹೇಳಿರುವನಾದರೂ ಎರಡನೆಯದಕ್ಕಿಂತ ಮೊದಲಿನದೆ ಹೆಚ್ಚಾಗಿ ಹೋಗಿದೆ. ಇದಕ್ಕೆ ಕಾರಣವಿಲ್ಲದೆ ಇಲ್ಲ. ಪಂಪನಂತೆ ರನ್ನನೂ ತನ್ನ ಕಾವ್ಯವಸ್ತುವನ್ನು ಮಹಾಪುರಾಣದಿಂದ ಆರಿಸಿಕೊಂಡಿದ್ದಾನೆ. ಆದರ ಪೂರ್ವಾರ್ಧವಾದ ಪೂರ್ವ ಪುರಾಣದಲ್ಲಿ ಆದಿ ತೀರ್ಥಂಕರನ ಚರಿತ್ರೆ

ವಿಸ್ತಾರವಾಗಿ, ಸಮಗ್ರವಾಗಿ ಬಂದಿದೆ; ಉತ್ತರ ಪುರಾಣವು ಉಳಿದೆಲ್ಲ ಜಿನೇಂದ್ರರ ಕಥೆಗಳನ್ನು ಒಳಗೊಂಡಿದೆ ; ಆದಿ ತೀರ್ಥಂಕರನ ಬಾಳಕಥೆಯನ್ನೇ ಇವೂ ಬಹು ಮಟ್ಟಿಗೆ ಹೋಲುತ್ತಿರುವುದರಿಂದ ಅದರಪ್ಟು ವಿವರಗಳು ಇಲ್ಲಿ ಅಗತ್ಯವಿಲ್ಲ ; ಹೀಗಾಗಿ ಮೂಲದಲ್ಲಿಯೆ ಅಜಿತನಾಥನ ಕಥೆ ಸಾಕಷ್ಟು ಹ್ರಸ್ವವಾಗಿದೆ. ಮುಖ್ಯ ಕಥೆಯಂತೆ ಉಪಕಥೆಯಾದರೂ, ಅದೇ ಕಾರಣಕ್ಕಾಗಿ ಸಂಗ್ರಹವಾಗಿ ಬಂದಿರು ವುದರಿಂದ ರನ್ನಕವಿ ಬರೆಯ ಹೊರಟಿರುವ ಅಜಿತನಾಥನ ಕಥಾಭಾಗವು ಸಾಕಷ್ಟು ಸಂಕೋಚವಾಗಿದೆ. ತನ್ನ ಪ್ರತಿಭೆ ಕಲ್ಪನಾ ಶಕ್ತಿಗಳನ್ನು ಸ್ವತಂತ್ರವಾಗಿ ಹರಿಯ ಬಿಟ್ಟು ಕಥೆಯನ್ನು ಹಿಗ್ಗಲಿಸುವ ಧೈರ್ಯ ಕವಿಗಿಲ್ಲವಾಗಿದೆ. ಮತಧರ್ಮದ ಸಂಕೋಲೆಯನ್ನು ಮುರಿದು ಸ್ವಾತಂತ್ರ್ಯವಹಿಸುವ ದಿಟ್ಟತನ ರನ್ನನಂತಹ ನಿರಂಕುಶಮತಿಗೂ ಸಾಧ್ಯವಿಲ್ಲ. ಸಂಪ್ರದಾಯವಾಗಿ ಬಂದ ಸಂಗತಿಗಳನ್ನು ಅವನು ಹೇಳಲೇಬೇಕು ; ನೀರಸವಾದರೂ ನೀಳವಾಗಿರುವ ಧಾರ್ಮಿಕ ಭಾವನೆ ಗಳನ್ನು ಮತಪ್ರಕ್ರಿಯೆಗಳ ಉದ್ದುದ್ದವಾದ ಪಟ್ಟಿಯನ್ನು ಕೊಡಲೇಬೇಕು. ಇಲ್ಲದಿದ್ದರೆ ಅವನ ಗ್ರಂಥ ಪುರಾಣದ ಪುರಸ್ಕಾರವನ್ನು ಪಡೆಯುವುದಿಲ್ಲ ; ಪೂರ್ತಿಯಾಗುವುದಿಲ್ಲ. ಇದಕ್ಕಾಗಿ ರನ್ನಕವಿಯನ್ನು ಉತ್ತರವಾದಿಯಾಗಿ ನಿಲ್ಲಿಸು ವುದಾಗಲಿ, ಅವನ ಕವಿತಾ ಶಕ್ತಿಯನ್ನು ನಿಂದಿಸುವುದಾಗಲಿ, ಅವನ ಅಭಿರುಚಿ ಯನ್ನು ಖಂಡಿಸುವುದಾಗಲಿ ನ್ಯಾಯವಲ್ಲ.

'ಅಜಿತ ಪುರಾಣದಲ್ಲಿ ಕಾವ್ಯಗುಣವನ್ನು ಬಯಸುವವರು ಕಥೆಯ ಸುತ್ತಲೂ ದಟ್ಟವಾಗಿ ಬೆಳೆದು ಹಬ್ಬಿರುವ ಮತ ತತ್ವಗಳ ಮೆಳೆಯನ್ನು ಸವರಿಕೊಂಡು ಒಳನುಗ್ಗಬೇಕು. ಹಾಗೆ ನುಗ್ಗಿ ಹೋಗುವುದರಲ್ಲಿಯೂ ಒಂದು ಆನಂದವಿದೆ. ಮರುಭೂಮಿಯಲ್ಲಿ ನಡೆದುಹೋಗದವನು ಮರುವನದ ಸುಖವನ್ನೆಂತು ಪಡೆ ಯಬಲ್ಲ ? ಬಿಸಿಲಲ್ಲಿ ನಡೆದು ಬಳಲದವನು ಮರದ ನೆರಳಿನ, ತಂಗಾಳಿಯ ಸುಖ ವನ್ನು ಹೇಗೆ ಅನುಭವಿಸಬಲ್ಲ ? ಅಜಿತಪುರಾಣವನ್ನು ಆಮೂಲಾಗ್ರವಾಗಿ ಓದಿದ ಮೇಲೆ ಅದರ ಹೊರಗಿನ ಚಿಪ್ಪು ಗಟ್ಟಿಯಾಗಿರುವಷ್ಟೆ, ಒಳಗಿನ ತಿರುಳೂ ಸ್ವಾದುವಾಗಿದೆಯೆಂಬುದು ಅರ್ಥವಾಗುತ್ತದೆ.'

**ಅಜಿತ ತೀರ್ಥಕರ ಪುರಾಣಂ :** ಸಂಸ್ಕೃತ ಜೈನ ಸಾಹಿತ್ಯ ಗ್ರಂಥಗಳಲ್ಲಿ ಮಹಾಪುರಾಣಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಇದು ತ್ರಿಷಷ್ಟಿಶಲಾಕಾ ಪುರುಷ

ಮಹಾಪುರಾಣ ಎಂದೂ ಪ್ರಸಿದ್ಧವಾಗಿದೆ. ಇದು ಪೂರ್ವ ಪುರಾಣ ಮತ್ತು ಉತ್ತರ ಪುರಾಣ ಎಂದು ಎರಡು ಭಾಗವಾಗಿದೆ. ಆದಿತೀರ್ಥಂಕರನ ಚರಿತ್ರೆ ಪೂರ್ವ ಪುರಾಣದಲ್ಲೂ ಅಜಿತಾದಿ ಇಪ್ಪತ್ತಮೂರು ತೀರ್ಥಂಕರರ ಚರಿತ್ರೆ ಉತ್ತರ ಪುರಾಣದಲ್ಲೂ ಬಂದಿವೆ. ಪೂರ್ವ ಪುರಾಣವನ್ನು ಜಿನಸೇನಾ ಚಾರ್ಯರೂ ಗುಣಭದ್ರಾಚಾರ್ಯರೂ, ಉತ್ತರ ಪುರಾಣವನ್ನು ಗುಣಭದ್ರಾ ಚಾರ್ಯರೂ ರಚಿಸಿದ್ದಾರೆ. ರನ್ನ ಕವಿಯ 'ಅಜಿತ ತೀರ್ಥಕರ ಪುರಾಣ ತಿಲಕಂ' ಕಾವ್ಯಕ್ಕೆ ಮೂಲವಾಗಿರುವುದು ಗುಣಭದ್ರಾಚಾರ್ಯರ ಉತ್ತರ ಪುರಾಣದಲ್ಲಿ ಬರುವ 'ಅಜಿತ ತೀರ್ಥಕರ ಪುರಾಣಂ'. ಇಲ್ಲಿನ ಕಥಾಸಾರ ಹೀಗಿದೆ—

ಈ ಜಂಬೂ ದ್ವೀಪದ ಪ್ರಸಿದ್ಧವಾದ ಪೂರ್ವ ವಿದೇಹ ಕ್ಷೇತ್ರದಲ್ಲಿ ಸೀತಾ ನದಿಯ ದಕ್ಷಿಣ ದಿಕ್ಕಿನಲ್ಲಿ ದೊಡ್ಡದಾದ ವತ್ಸ ಎಂಬ ದೇಶವಿದೆ. ಆ ದೇಶದಲ್ಲಿ ಧನಧಾನ್ಯಾದಿ ಸಂಪತ್ತಿಯಿಂದ ಸಮೃದ್ಧವಾದ ಸುಸೀಮಾ ನಗರವಿದೆ. ಇದಕ್ಕೆ ವಿಮಲವಾಹನನೆಂಬ ರಾಜನು ದೊರೆ. ಗುಣವಂತನಾದ ಈ ದೊರೆ ಪ್ರಜೆಗಳನ್ನು ತನ್ನ ಮಕ್ಕಳಿಗೆ ಸರಿಸಮಾನರನ್ನಾಗಿ ಕಂಡು ಪರಿಪಾಲಿಸುತ್ತಾ ಜೈನ ಧರ್ಮ ಪರಿಪಾಲಕನಾಗಿದ್ದನು. ಒಮ್ಮೆ ಈತನು ತನ್ನ ಜ್ಞಾನ ಶಕ್ತಿಯ ಫಲವಾಗಿ ವೈರಾಗ್ಯಗೊಂಡು ಆಶಾಪಾಶವನ್ನು ಕತ್ತರಿಸಿ, ದೀಕ್ಷೆಯನ್ನು ತೆಗೆದುಕೊಂಡು, ಬಹುಕಾಲದವರೆಗೆ ಕಠಿನ ತಪಸ್ಸನ್ನು ಮಾಡಿ, ತೀರ್ಥಕರ ಶುಭಕರ್ಮ ಬಂಧ ವನ್ನು ಮಾಡಿಕೊಂಡನು. ತಪಸ್ಸಿನಲ್ಲಿ ದೇಹವನ್ನು ಬಿಟ್ಟು ಮೂವತ್ತಮೂರು ಸಾಗರೋಪಮ ಪರಮಾಯುಷ್ಯವುಳ್ಳವನಾಗಿ ವಿಜಯವೆಂಬ ಅನುತ್ತರ ವಿಮಾನ ದಲ್ಲಿ ಜನಿಸಿದನು. ಅಲ್ಲಿ ಶುಭ ದೇಹವನ್ನು ಹೊಂದಿ ತಿಂಗಳಿಗೊಮ್ಮೆ ಶ್ವಾಸೋ ಚ್ಛ್ವಾಸವನ್ನು ಬಿಡುವವನೂ, ಮೂವತ್ತಮೂರು ಸಹಸ್ರ ವರ್ಷಗಳಿಗೊಮ್ಮೆ ಮನಸ್ಸಿನಿಂದ ಆಹಾರವನ್ನು ತೆಗೆದು ಕೊಳ್ಳುವವನೂ ವಿಕ್ರಿಯಾ ಬಲವುಳ್ಳವನೂ ಆಗಿ ಅಪ್ರವೀಚಾರ (ಸ್ತ್ರೀ ಸಂಸರ್ಗ ಜನ್ಯವಲ್ಲದ) ಸೌಖ್ಯವನ್ನನುಭವಿಸಿದನು.

ಈ ಜಂಬೂದ್ವೀಪದಲ್ಲಿ ಭಾರತ ವರ್ಷದಲ್ಲಿರುವ ಅಯೋಧ್ಯಾನಗರಕ್ಕೆ ಅಧಿಪತಿ ಇಕ್ಷ್ವಾಕುವಂಶದ ಕಾಶ್ಯಪಗೋತ್ರದ ಜಿತಶತ್ರುಮಹಾರಾಜ ; ಈತನ ಮನೋವಲ್ಲಭೆ ವಿಜಯಸೇನಾದೇವಿ, ದೇವೇಂದ್ರನ ಆಜ್ಞೆಯಿಂದ ಆರುತಿಂಗಳ ವರೆಗೆ ಪ್ರತಿದಿವಸ ಕುಬೇರನು ಅವನ ಮನೆಯಮೇಲೆ ರತ್ನದ ಮಳೆಗರೆದನು. ಅಷ್ಟರಲ್ಲಿ ಜ್ಯೇಷ್ಠಮಾಸದ ಅಮಾವಾಸ್ಯೆಯ ದಿನ ರೋಹಿಣಿನಕ್ಷತ್ರದಲ್ಲಿ ಬ್ರಾಹ್ಮಿ ಮುಹೂರ್ತಕ್ಕಿಂತ ಮೊದಲು ರಾಜನಪತ್ನಿ ಹದಿನಾರು ಶುಭಸ್ವಪ್ನಗಳನ್ನೂ,

ಬಳಿಕ ತನ್ನ ಮುಖಕಮಲವನ್ನು ಪ್ರವೇಶಿಸುತ್ತಿರುವ ಮದಗಜವನ್ನೂ ಕಂಡಳು, ಫಲವಾಗಿ ವಿಜಯ ವಿಮಾನದಿಂದ ಬಂದ ದೇವನನ್ನು ಮಾಘಶುದ್ಧ ದಶಮಿ ಯಂದು ಬ್ರಹ್ಮಯೋಗದಲ್ಲಿ ಹೆತ್ತಳು. ಆ ಬಾಲಕನಿಗೆ ದೇವೇಂದ್ರರು ಮಹಾಮೇರು ಪರ್ವತದಲ್ಲಿ ಜನ್ಮಾಭಿಷೇಕ ಕಲ್ಯಾಣವನ್ನು ಮಾಡಿ 'ಅಜಿತ' ಎಂದು ಹೆಸರಿಟ್ಟರು. ಈ ಅಜಿತನಾಥನ ಆಯುಷ್ಯವು ಎಪ್ಪತ್ತೆರಡುಲಕ್ಷಪೂರ್ವ ವರ್ಷಕಾಲ; ಶರೀರವು ನಾಲ್ಕುನೂರಐವತ್ತು ಬಿಲ್ಲುಗಳಷ್ಟು ಉನ್ನತ. ಕೌಮಾರಕಾಲವು ಕಳೆದ ಮೇಲೆ ದೊರೆತನವನ್ನು ಮಾಡಿದನು. ಒಮ್ಮೆ ದೊಡ್ಡದಾದ ಉಲ್ಕಾಪಾತವನ್ನು ನೋಡಿ, ಸಂಪತ್ತಿಯು ಅಸ್ಥಿರವೆಂದು ತಿಳಿದು, ವೈರಾಗ್ಯಹೊಂದಿ ಅಜಿತಸೇನನೆಂಬ ತನ್ನ ಪುತ್ರನಿಗೆ ರಾಜ್ಯವನ್ನು ಕೊಟ್ಟು, ಸುಪ್ರಭೆಯೆಂಬ ಪಲ್ಲಕ್ಕಿಯನ್ನೇರಿ ಮಾಘಶುದ್ಧ ನವಮಿಯ ದಿವಸ ಸಾಯಂಕಾಲ ರೋಹಿಣಿ ನಕ್ಷತ್ರದಲ್ಲಿ ಸಹೇತುಕವೆಂಬ ವನದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಸಂಯಮದಲ್ಲಿದ್ದನು. ಆಹಾರಕ್ಕಾಗಿ ಒಮ್ಮೆ ಅಯೋಧ್ಯಾನಗರವನ್ನು ಪ್ರವೇಶಿ ಸಿದ ಅಜಿತಮುನಿಗೆ ಬ್ರಹ್ಮನೆಂಬ ದೊರೆ ಶಾಸ್ತ್ರೋಕ್ತ ಕ್ರಮದಿಂದ ಆಹಾರ ದಾನಮಾಡಿ ಪುಣ್ಯಕರ್ಮಗಳನ್ನೂ ಪಂಚಾಶ್ಚರ್ಯಗಳನ್ನೂ ಪಡೆದನು. ಛದ್ಮಸ್ಥಾವಸ್ಥೆಯಲ್ಲಿ ಹನ್ನೆರಡು ವರ್ಷಗಳನ್ನು ಕಳೆದು ಪುಷ್ಯಶುದ್ಧ ಏಕಾದಶಿ ಸಾಯಂಕಾಲ ರೋಹಿಣಿ ನಕ್ಷತ್ರದಲ್ಲಿ ಕೇವಲಜ್ಞಾನ ಹೊಂದಿದನು. ಹಲವುಕಾಲ ಧರ್ಮೋಪದೇಶ ಮಾಡುತ್ತಾ ಆರ್ಯಕ್ಷೇತ್ರವನ್ನೆಲ್ಲ ವಿಹರಿಸಿ, ಸಮ್ಮೇದ ಪರ್ವತಕ್ಕೆ ಬಂದು, ಅಲ್ಲೇ ಒಂದು ತಿಂಗಳವರೆಗೆ ಪ್ರತಿಮಾಯೋಗವಲ್ಲಿ ಧ್ಯಾನ ಮಗ್ನನಾಗಿದ್ದು ಚೈತ್ರಶುದ್ಧ ಪಂಚಮಿ ತಿಥಿಯಂದು ಚಂದ್ರನು ರೋಹಿಣಿ ನಕ್ಷತ್ರ ವನ್ನು ಹೊಂದಿದಾಗ ಪ್ರಾತಃಕಾಲದಲ್ಲಿ ಮುಕ್ತಿಯನ್ನು ಹೊಂದಿದನು.

ಈ ಜಂಬೂ ದ್ವೀಪದಲ್ಲಿ ಪೂರ್ವ ವಿದೇಹ ಕ್ಷೇತ್ರದ ಸೀತಾ ನದಿಯ ದಕ್ಷಿಣ ದಿಗ್ಭಾಗಕ್ಕೆ ಭೂಷಣವಾದ ವತ್ಸಕಾವತಿ ಎಂಬ ದೇಶದಲ್ಲಿರುವ ಪೃಥಿವಿ ಎಂಬ ನಗರಕ್ಕೆ ಅಧಿಪತಿ ಜಯಸೇನ. ಈತ ಜಿನಭಕ್ತ. ಈತನ ಪತ್ನಿ ಜಯಸೇನೆ. ಈ ದಂಪತಿಗಳಿಗೆ ರತಿಷೇಣ, ಧೃತಿಷೇಣರೆಂಬ ಇಬ್ಬರು ಪುತ್ರರು, ಏನೋ ಕಾರಣದಿಂದ ರತಿಷೇಣನು ಸತ್ತನು. ಪುತ್ರಶೋಕ ಪತ್ನೀಸಹಿತನಾದ ಜಯ ಸೇನನನ್ನು ಬಾಧಿಸಿತು. ಇದರಿಂದ ವೈರಾಗ್ಯಗೊಂಡ ಜಯಸೇನನು ಧೃತಿಷೇಣ ನನ್ನು ರಾಜ್ಯದಲ್ಲಿರಿಸಿ, ಅನೇಕ ರಾಜರುಗಳೊಡನೆಯೂ ಮಹಾರುತನೆಂಬ ಮೈದುನನೊಡನೆಯೂ ಯಶೋಧರ ಗುರುಗಳಲ್ಲಿ ಮುನಿ ದೀಕ್ಷೆಯನ್ನು

ಹೊಂದಿದನು. ಸಂನ್ಯಾಸ ವಿಧಿಯನ್ನು ಮಾಡಿ ಸತ್ತು ಹದಿನಾರನೆಯದಾದ ಅಚ್ಯುತ ಕಲ್ಪದಲ್ಲಿ ಮಹಾಬಲನೆಂಬ ದೇವನಾಗಿ ಹುಟ್ಟಿದನು. ಮಹಾರುತನೂ ಅದೇ ಕಲ್ಪದಲ್ಲಿ ಮಣಿಕೇತುವೆಂಬ ದೇವನಾಗಿ ಜನಿಸಿದನು. ನಮ್ಮಿಬ್ಬರಲ್ಲಿ ಮೊದಲು ಭೂಲೋಕಕ್ಕಿಳಿಯುವವನಿಗೆ ಮತ್ತೊಬ್ಬನು ಧರ್ಮವನ್ನು ಬೋಧಿಸಿ ಎಚ್ಚರಿಸುವವನಾಗಬೇಕು ಎಂದು ಆ ಸ್ವರ್ಗದಲ್ಲಿ ಅವರೊಳಗೆ ಒಪ್ಪಂದ ವಾಯಿತು. ಮಹಾಬಲದೇವನು ಆ ಸ್ವರ್ಗದಲ್ಲಿ ಇಪ್ಪತ್ತೆರಡು ಸಾಗರೋಪಮ ವರ್ಷಾಯುಷ್ಯಪರ್ಯಂತ ದೇವಸುಖವನ್ನನುಭವಿಸಿ ಬಂದು ಕೋಸಲ ದೇಶದ ಅಯೋಧ್ಯಾನಗರದಲ್ಲಿ ಇಕ್ಷ್ವಾಕು ವಂಶದ ಸಮುದ್ರ ವಿಜಯ ಸುಬಲಾದೇವಿ ಯರೆಂಬ ರಾಜ ದಂಪತಿಗಳಿಗೆ ಸಗರನೆಂಬ ಮಗನಾಗಿ ಜನಿಸಿದನು. ಅವನ ಆಯುಷ್ಯಾವಧಿ ಎಪ್ಪತ್ತು ಲಕ್ಷಪೂರ್ವ ವರ್ಷ ಅವನು ನಾಲ್ಕುನೂರ ಇಪ್ಪತ್ತೈದು ಧನಸ್ಸುಗಳಷ್ಟು ಶರೀರದ ಉತ್ಸೇಧವುಳ್ಳವನೂ ಸರ್ವಲಕ್ಷಣ ಸಂಪನ್ನನೂ ಆಗಿದ್ದನು. ಹದಿನೆಂಟು ಲಕ್ಷಪೂರ್ವ ವರ್ಷ ಕುಮಾರಾವಸ್ಥೆ ಕಳೆದು, ಬಳಿಕ ಹದಿನೆಂಟು ಲಕ್ಷಪೂರ್ವ ವರ್ಷ. ಕಾಲದವರೆಗೆ ಮಹಾಮಂಡಲಿಕ ರಾಜನಾಗಿದ್ದನು. ಅವನಿಗೆ ಚಕ್ರವರ್ತಿ ಸೂಚಕವಾದ ಚಕ್ರರತ್ನ ಪ್ರಾಪ್ತ ವಾಯಿತು. ದಿಗ್ವಿಜಯವನ್ನು ಮಾಡಿ ಷಟ್ಖಂಡ ಭೂ ಮಂಡಲವನ್ನು ಗೆದ್ದು, ಅಯೋಧ್ಯೆಗೆ ಹಿಂದಿರುಗಿ ಬಂದು ಸುಖವಾಗಿದ್ದನು. ಪುಣ್ಯಶಾಲಿಯಾದ ಆ ಸಗರನಿಗೆ ಅರವತ್ತುಸಾವಿರ ಮಂದಿ ಪುತ್ರರಾದರು. ಆ ಹೊತ್ತಿಗೆ ಅದೇ ನಗರದ ಸಿದ್ಧವನದಲ್ಲಿ ಶ್ರೀಧರ ಮುನಿಗಳಿಗೆ ಕೇವಲಜ್ಞಾನ ಉಂಟಾಯಿತು. ಆ ಕಲ್ಯಾಣಕ್ಕೆ ದೇವೇಂದ್ರರೊಡನೆ ಮಣಿಕೇತು ದೇವನೂ ಬಂದನು. ಅವನು ಅವಧಿಜ್ಞಾನ ಶಕ್ತಿಯಿಂದ ಹಿಂದೆ ಮಹಾಬಲನಾಗಿದ್ದವನೇ ಈ ಸಗರ ಚಕ್ರವರ್ತಿಯೆಂದು ತಿಳಿದು ಅವನನ್ನು ಕಂಡು ತಮ್ಮ ಪೂರ್ವ ಒಪ್ಪಂದದ ನೆನಪಿದೆಯೆ ಎಂದು ಕೇಳಿ, ಮುಕ್ತಿ ವಿಷಯದಲ್ಲಿ ಪ್ರಯತ್ನಪರನಾಗುವಂತೆ ಹೇಳಿ ದನು. ಆದರೆ ಸಗರನು ಇದಕ್ಕೆ ವಿಮುಖನಾದನು. ಮಣಿಕೇತು ಅಷ್ಟಕ್ಕೇ ಬಿಡದೆ ಮತ್ತೊಂದುಪಾಯವನ್ನು ಯೋಚಿಸಿ, ಭೂಮಿಗಿಳಿದು, ಚಾರಣ ಮುನಿ ವೇಷವನ್ನು ಹೊಂದಿ ಸಗರ ಚಕ್ರವರ್ತಿಯ ಜಿನಾಲಯದಲ್ಲಿದ್ದನು. ಭಕ್ತಿಯಿಂದ ಅವನನ್ನು ವಂದಿಸಿದ ಸಗರನು ಉಪದೇಶದಿಂದ ಸಂಸಾರದ ಬಗ್ಗೆ ಕಂಪಿತ ನಾದರೂ ಪುತ್ರವ್ಯಾಮೋಹದಿಂದ ಮೋಕ್ಷ ಮಾರ್ಗವನ್ನು ಹೊಂದಲಿಲ್ಲ. ಅಚ್ಯುತ ಸ್ವರ್ಗದ ಸಂಪತ್ತಿಯನ್ನೂ ಮರೆತನು. ಸುಖಲೋಲುಪ್ತಿಯಿಂದ ಬೇಸರ

ಗೊಂಡ ಅವನ ಮಕ್ಕಳು 'ನಮಗೆ ಸಾಹಸವನ್ನುಂಟುಮಾಡುವ ಕೆಲಸವನ್ನು ಆಜ್ಞಾಪಿಸು' ಎಂದು ಒತ್ತಾಯ ಪಡಿಸಲು, 'ಎಲೈ ಪುತ್ರರೆ, ಎಲ್ಲವೂ ಚಕ್ರ ರತ್ನದಿಂದ ಸಾಧಿಸಲ್ಪಟ್ಟಿದೆ. ಈ ರಾಜ್ಯ ಸಂಪತ್ತಿಯನ್ನು ಯಥೋಚಿತವಾಗಿ ಅನುಭವಿಸಿರಿ' ಎಂದು ಉತ್ತರಿಸಿದನು. ಮತ್ತೆ ಕೆಲದಿನಗಳ ನಂತರ ಅವರು ತಂದೆಯನ್ನು ಕಂಡು 'ಸೇವೆಯಿಲ್ಲದಿದ್ದರೆ ನಾವು ಭೋಜನ ಮಾಡುವುದಿಲ್ಲ' ಎಂದು ಹೇಳಲು, 'ಕೈಲಾಸ ಪರ್ವತದಲ್ಲಿ ಭರತೇಶ್ವರನು ಇಪ್ಪತ್ತನಾಲ್ಕು ಮಂದಿ ಅರ್ಹಂತರ ಮಂದಿರಗಳನ್ನು ಮಾಡಿಸಿದ್ದಾನೆ. ನೀವು ಆ ಪರ್ವತದ ಸುತ್ತಲೂ ಗಂಗಾ ನದಿಯನ್ನು ಕಂದಕವನ್ನಾಗಿ ಮಾಡಿರಿ' ಎಂದು ಆಜ್ಞಾಪಿಸಿ ದನು. ಸಂತೋಷದಿಂದ ಅವರು ದಂಡರತ್ನದಿಂದ ಕಾರ್ಯನಿರತರಾಗಿದ್ದರು. ಮಣಿಕೇತು ದೇವನು ಸಗರ ಚಕ್ರವರ್ತಿಯ ಹಿತದಿಂದ ಪ್ರೇರಿತನಾಗಿ ಕೈಲಾಸ ಪರ್ವತಕ್ಕೆ ಬಂದು ಕ್ರೂರ ಸರ್ಪಾಕಾರವುಳ್ಳವನಾಗಿ ಭಗೀರಥನೊಬ್ಬನನ್ನು ಉಳಿಸಿ ಉಳಿದೆಲ್ಲರನ್ನೂ ಬೂದಿಯ ರಾಶಿಯಂತೆ ಮಾಡಿದನು. ಅನಂತರ ಬ್ರಾಹ್ಮಣರೂಪದಿಂದ ಸಗರನ ಸಮೀಪಕ್ಕೆ ಬಂದು ಬಹಳ ಶೋಕದಿಂದ 'ರಾಜಾಧಿರಾಜನಾದ ನೀನು ಭೂಮಂಡಲವನ್ನು ರಕ್ಷಿಸುತ್ತಿರಲಾಗಿ ನಮಗೆ ಕ್ಷೇಮವಿದೆ. ಆದರೆ, ಯಮನು ನನ್ನ ಒಬ್ಬನೇ ಮಗನನ್ನು ಅಕಾಲದಲ್ಲಿ ಅಪಹರಿಸಿದನು. ನೀನು ಅವನನ್ನು ಉಳಿಸಿಕೊಡದಿದ್ದಲ್ಲಿ ನಿನ್ನಿದಿರಿನಲ್ಲಿ ನಾನೂ ಆತ್ಮಘಾತ ಮಾಡಿಕೊಳ್ಳುವೆನು' ಎಂದನು. ಈ ಮಾತನ್ನು ಕೇಳಿ ನಕ್ಕು ಸಗರನು 'ಬ್ರಾಹ್ಮಣನೆ! ಯಮನು ಸಿದ್ಧರಿಂದಲೇ ತಡೆಯಲ್ಪಡತಕ್ಕವನಲ್ಲದೆ ಬೇರೆಯವ ರಿಂದಲ್ಲ. ಅವನು ಎಲ್ಲರನ್ನೂ ಸಂಹರಿಸುತ್ತಾನೆ. ಶೋಕವನ್ನು ಬಿಟ್ಟು ಮೋಕ್ಷ ಮಾರ್ಗವಾದ ದೀಕ್ಷೆಯನ್ನು ಪರಿಗ್ರಹಿಸು' ಎಂದನು. ಕೂಡಲೆ ಬ್ರಾಹ್ಮಣನು 'ದೇವಾ! ಯಮನಿಗಿಂತ ಬಲಿಷ್ಠನಿಲ್ಲವೆಂಬುದು ಸತ್ಯವೋ? ಅವನು ನಿನ್ನ ಎಲ್ಲಾ ಪುತ್ರರನ್ನೂ ತನ್ನ ಬಳಿಗೆ ಒಯ್ದನು. ನೀನು ಹೇಳಿದ ಮಾರ್ಗವನ್ನು ನೀನೇ ಹಿಡಿ' ಎಂದನು. ಆ ಮಾತಿನಿಂದ ಪ್ರಾಣಹೋದವನಂತೆ ನಿಶ್ಚಲನಾದ ಸಗರನು ಮತ್ತೆ ಎಚ್ಚೆತ್ತು ವೈರಾಗ್ಯಗೊಂಡು ಆ ಹೊತ್ತಿಗೆ ದುಃಖತಪ್ತನಾಗಿ ಅಲ್ಲಿಗೆ ಬಂದಿದ್ದ ಭಗೀರಥನಿಗೆ ರಾಜ್ಯವನ್ನು ವಹಿಸಿ, ತಾನು ದೃಢಧರ್ಮರೆಂಬ ಜಿನರ ಬಳಿಯಲ್ಲಿ ದೀಕ್ಷೆಗೊಂಡನು. ಮಣಿಕೇತುವು ಮಾಯಾಭಸ್ಮದಿಂದ ಮುಚ್ಚ ಲ್ಪಟ್ಟಿದ್ದ ಸಗರ ಪುತ್ರರಲ್ಲಿಗೆ ಹೋಗಿ ತಂದೆಯ ಸುದ್ದಿಯನ್ನು ತಿಳಿಸಲು, ಕೂಡಲೆ ಅವರೂ ಅದೇ ಜಿನರ ಬಳಿಯಲ್ಲಿ ದೀಕ್ಷೆಗೊಂಡರು. ಭಗೀರಥನೂ ಆ

ತಪಸ್ವಿಗಳ ಬಳಿಗೆ ಹೋಗಿ ಧರ್ಮೋಪದೇಶವನ್ನು ಕೇಳಿ ಶ್ರಾವಕವ್ರತವನ್ನು ತೆಗೆದುಕೊಂಡನು. ಈಗ ಮಣಿಕೇತುವು ನಿಜರೂಪದಿಂದ ಸಗರಾದಿ ಮುನಿಗಳಲ್ಲಿಗೆ ಬಂದು 'ಕ್ಷಮಿಸಬೇಕು' ಎನ್ನಲು, ಅವರು 'ನಿನ್ನ ತಪ್ಪೇನು ? ನೀನು ನಮಗೆ ಪ್ರಿಯವೂ ಹಿತವೂ ಆದ ಈ ಕಾರ್ಯವನ್ನು ಮಾಡಿದೆ' ಎಂದು ಒಳ್ಳೆಯ ಮಾತಿನಿಂದ ಆ ದೇವನನ್ನು ಸಮಾಧಾನ ಪಡಿಸಿದರು. ಅವರೆಲ್ಲ ಉತ್ತಮ ತಪಸ್ಸನ್ನು ಮಾಡಿ, ಸಮ್ಮೇದ ಪರ್ವತದಲ್ಲಿ ಮುಕ್ತಿಯನ್ನು ಹೊಂದಿದರು. ಇದನ್ನು ಕೇಳಿದ ಭಗೀರಥನೂ ತನ್ನ ಮಗ ವರದತ್ತನಿಗೆ ರಾಜ್ಯ ಸಂಪತ್ತಿಯನ್ನು ಕೊಟ್ಟು ಕೈಲಾಸ ಪರ್ವತದಲ್ಲಿ ಶಿವಗುಪ್ತ ಮಹಾಮುನಿಯಿಂದ ದೀಕ್ಷೆಯನ್ನು ತೆಗೆದುಕೊಂಡು ಗಂಗಾ ನದೀ ತೀರದಲ್ಲಿ ಧ್ಯಾನಾರೂಢನಾದನು. ದೇವೇಂದ್ರನು ಆ ಮುನಿಯ ಪಾದಗಳಿಗೆ ಕ್ಷೀರ ಸಮುದ್ರದ ಜಲದಿಂದ ಅಭಿಷೇಕವನ್ನು ಮಾಡಿದುದರಿಂದ ಆ ಪ್ರವಾಹದ ಸಂಗಮವು ಗಂಗೆಯೊಡನೆ ಆಗಿ ಅಂದಿನಿಂದ ಅದೂ ತೀರ್ಥತ್ವವನ್ನು ಹೊಂದಿತು, ಭಗೀರಥ ಮುನಿಯೂ ಉತ್ಕೃಷ್ಟ ತಪಸ್ಸಿನಿಂದ ಕೈವಲ್ಯವನ್ನು ಹೊಂದಿದನು.

**ಕಥಾಸಾರ :** ರನ್ನ ಕವಿಯ 'ಅಜಿತ ತೀರ್ಥಕರ ಪುರಾಣ ತಿಲಕಂ' ಕಾವ್ಯದ ಕಥಾಸಾರ ಹೀಗಿದೆ :

ಈ ಜಂಬೂದ್ವೀಪದ ನಟ್ಟನಡುವೆ ಮಂದರಪರ್ವತವು ರಮಣೀಯವಾಗಿದೆ. ಇದರ ದಕ್ಷಿಣ ದಿಗ್ಭಾಗದಲ್ಲಿ ಇರುವುದೇ ಪವಿತ್ರವಾದ ಭರತಕ್ಷೇತ್ರ. ಇದರ ರಾಜಧಾನಿಯಾದ ಅಯೋಧ್ಯಾನಗರವು ಅನಾದಿಕಾಲದಿಂದಲೂ ಇಕ್ಷ್ವಾಕು ವಂಶದವರ ರಾಜಧಾನಿಯಾಗಿ ಸಂಪತ್ಸಮೃದ್ಧವಾಗಿತ್ತು. ಈ ಪಟ್ಟಣದಲ್ಲಿ ಜಿತಶತ್ರುವೆಂಬ ಅನ್ವರ್ಥನಾಮನಾದ ಮಹಾರಾಜನು ಧರ್ಮದಿಂದ ರಾಜ್ಯವಾಳುತ್ತಿದ್ದನು. ಆತನ ಮನೋವಲ್ಲಭೆಯಾದ ವಿಜಯಸೇನಾದೇವಿ ಸುರಸುಂದರಿಯಾಗಿದ್ದಳು. ಇವರ ಅನುರೂಪ ದಾಂಪತ್ಯ ಯಾರೂ ಕರುಬುವಂತಹುದಾಗಿದ್ದಿತು ; ತುಂಬು ಬಾಳನ್ನು ಬಾಳುತ್ತಿದ್ದರು.

ಪೂರ್ವ ವಿದೇಹದ ಸೀತಾನದಿಯ ದಕ್ಷಿಣದ ವತ್ಸಕಾವತಿದೇಶದ ರಾಜಧಾನಿ ಸುಸೀಮಾನಗರ. ಅದನ್ನು ವಿಮಲವಾಹನನೆಂಬ ಮಹಾರಾಜನು ವೈಭವದಿಂದ ರಾಜ್ಯವಾಳುತ್ತಿದ್ದನು. ಆತನು ಒಂದು ದಿನ ತನ್ನ ಕೆನ್ನೆಯಲ್ಲಿ ನರೆಗೂದಲನ್ನು ಕಂಡು ವೈರಾಗ್ಯಪರನಾಗಿ ಇಹಸುಖವನ್ನು ಹಳಿದು, ಜಿನಧರ್ಮದ ಮಹಿಮೆಯನ್ನು ತಿಳಿದು, ಮಂತ್ರಿ ಪ್ರಮುಖರನ್ನು ಕರೆಸಿ, ಮಗನಿಗೆ ರಾಜ್ಯಭಾರ

ವನ್ನು ವಹಿಸಿ ತಪಸ್ಸಿಗೆ ಹೋದನು. ಕಾಲಾಂತರದಲ್ಲಿ ಸಮಾಧಿ ಮರಣದಿಂದ ದೇಹತ್ಯಾಗ ಮಾಡಿ ಪಂಚಾಣುತ್ತರಗಳೊಳಗಿನ ವಿಜಯ ಎಂಬ ವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟಿ, ಅಣಿಮಾದಿ ಅಷ್ಟಸಿದ್ಧಿಗಳಿಂದ ಸ್ವಾತ್ಮಾರಾಮ ಸುಖ ದಲ್ಲಿದ್ದನು. ಈ ಅಹಮಿಂದ್ರನೇ ವಿಜಯಸೇನಾದೇವಿಯ ಗರ್ಭಕ್ಕೆ ಅವತರಿಸುವ ನೆಂಬುದನ್ನು ತನ್ನ ಜ್ಞಾನ ಶಕ್ತಿಯಿಂದ ತಿಳಿದ ದೇವೇಂದ್ರನು ಕುಬೇರನನ್ನು ಕರೆದು ಜಿತಶತ್ರುಮಹಾರಾಜನ ಅರಮನೆಯಮೇಲೆ ಚಿನ್ನದ ಮಳೆಗರೆಸು ವಂತೆಯೂ, ದಿಕ್ಕನ್ನಿಕೆಯರೇ ಮೊದಲಾದ ದೇವಸ್ತ್ರೀಯರನ್ನು ವಿಜಯಸೇನಾ ದೇವಿಯ ಗರ್ಭಶೋಧನೆ ಮಾಡಿ ಅವಳ ಸೇವಾಕಾರ್ಯ ನಿರತರಾಗಿರು ವಂತೆಯೂ ಆಜ್ಞಾಪಿಸಿದನು. ಈ ಎಲ್ಲರೊಂಗಿಗೆ ಸಂತೋಷದಿಂದಿದ್ದ ವಿಜಯ ಸೇನಾದೇವಿಗೆ ಜ್ಯೇಷ್ಠಮಾಸದ ಅಮಾವಾಸ್ಯೆಯ ದಿನ ಬೆಳಗಿನಜಾವ ರೋಹಿಣಿ ನಕ್ಷತ್ರದಲ್ಲಿ ಷೊಡಶ ಶುಭ ಸ್ವಪ್ನಗಳಾಗಿ, ಕೊನೆಗೆ ಗಜರಾಜನು ತನ್ನ ವದನ ಕಮಲದಲ್ಲಿ ಪ್ರವೇಶಿಸಿದಂತಾಯಿತು. ಇದರಿಂದ ಅತ್ಯಂತ ಸಂತೋಷದಿಂದಿದ್ದ ವಿಜಯಸೇನಾದೇವಿಯು ಬೆಳಗಿನ ಶ್ರಾವಕ ಕರ್ಮಗಳನ್ನು ಮುಗಿಸಿ, ತನ್ನ ಪತಿಯ ಬಳಿಗೆ ಬಂದು ತನ್ನ ಕನಸಿನ ವೃತ್ತಾಂತವನ್ನು ಬಿನ್ನವಿಸಿದಳು. ಅದನ್ನು ಕೇಳಿ ಅತ್ಯಂತ ಸಂತೋಷಗೊಂಡ ರಾಜನು ಸ್ವಪ್ನಫಲಗಳನ್ನು ತಿಳಿಸಿ, ರಾಜ ಕುಮಾರನು ಮಗನಾಗುವನೆಂದು ಹೇಳಿದಾಗ, ರಾಣಿಯು ಆಗಲೇ ತನಗೆ ಪುತ್ರೋತ್ಸವವಾದಂತೆ ಸಂತೋಷಪಟ್ಟಳು. ಅಹಮಿಂದ್ರನು ವಿಜಯಸೇನಾ ದೇವಿಯ ಗರ್ಭದಲ್ಲಿ ಬೆಳೆಯುತ್ತಾ ಇದ್ದರೂ ಗರ್ಭವಿಕಾರಗಳಾವುವೂ ಕಾಣಿಸಿ ಕೊಳ್ಳಲಿಲ್ಲ; ಗರ್ಭಬಾಧೆ ಉಂಟಾಗಲಿಲ್ಲ. ಈ ಗರ್ಭಿಣಿಯ ಬಯಕೆಗಳೂ ಶುಭಕಾರಕಗಳೇ ಆಗಿದ್ದುವು. ತೀರ್ಥಂಕರನಿಗೆ ಜನ್ಮಕೊಡುವ ಆ ವಿಜಯ ಸೇನಾದೇವಿ ಸಂತೋಷಚಿತ್ತಳಾಗಿ ದಿನಗಳೆಯುತ್ತಿರಲು ಒಂಬತ್ತು ತಿಂಗಳು ತುಂಬಿ ಮಾಘಶುದ್ಧ ದಶಮಿಯ ದಿನ ಬೆಳಗಿನ ಜಾವದಲ್ಲಿ ಪ್ರಜಾಪತಿಯೋಗವು ನೆರೆದ ರೋಹಿಣಿ ನಕ್ಷತ್ರದಲ್ಲಿ ಸುಖಪ್ರಸವವಾಯಿತು. ತ್ರಿಲೋಕ ಸ್ವಾಮಿಯ ಉದಯ ದೊಂದಿಗೆ ಮೂರು ಲೋಕಗಳೂ ಆನಂದ ಪಟ್ಟುವು. ಜಿನಶಿಶುವಿನ ಉದಯ ವನ್ನು ತನ್ನ ಜ್ಞಾನಶಕ್ತಿಯಿಂದ ತಿಳಿದ ಸೌಧರ್ಮೇಂದ್ರನು ದೇವಗಣದೊಡನೆ ಪತ್ನಿ ಶಚೀ ಸಮೇತನಾಗಿ ಆಯೋಧ್ಯೆಗೆ ಬಂದನು. ಪತಿಯ ಸೂಚನೆಯಂತೆ ಶಚೀದೇವಿಯು ಸೂತಿಕಾ ಗೃಹವನ್ನು ಪ್ರವೇಶಿಸಿ ಜಿನ ಶಿಶುವಿಗೆ ವಂದಿಸಿ, ಎಲ್ಲರಿಗೆ ಮಾಯಾ ನಿದ್ರೆಯನ್ನು ಬರಿಸಿ, ಮಾಯಾ ಶಿಶುವೊಂದನ್ನು ತಾಯಿಯ

ಮಗ್ಗುಲಲ್ಲಿಟ್ಟು, ಜಿನಶಿಶುವನ್ನು ಎತ್ತಿತಂದು ಪತಿಯ ಕೈಗಿತ್ತಳು. ಆತನು ಆ ಶಿಶುವಿಗೆ ಭಕ್ತಿಯಿಂದ ವಂದಿಸಿ, ಎತ್ತಿಕೊಂಡು ತನ್ನೆಲ್ಲ ಪರಿವಾರದೊಂದಿಗ ವೈಭವದಿಂದ ಐರಾವತಗಜವನ್ನೇರಿ ಕ್ಷೀರಸಮುದ್ರಾಭಿಮುಖನಾದನು. ಜಿನಶಿಶುವನ್ನು ಹೊತ್ತ ಐರಾವತವೂ ತನ್ನ ವಿಕ್ರಿಯಾ ಬಲದಿಂದ ವಿಗುರ್ವಿಸಿತು. ಇಂದ್ರರುಗಳೇ ಮಗುವಿಗೆ ಕೊಡೆ ಹಿಡಿದರು, ಚಾಮರವಿಕ್ಕಿದರು. ದೇವತೆಗಳು ಧ್ವಜಗಳನ್ನು ಹಿಡಿದರು. ಎಲ್ಲರೂ ಸಡಗರದಿಂದ ಮಂದರ ಪರ್ವತಕ್ಕೆ ಬಂದರು ಪರ್ವತಾಗ್ರದಲ್ಲಿ ಪಾಂಡುಕ ಶಿಲೆಯ ಮೇಲೆ ಪೂರ್ವಾಭಿಮುಖವಾಗಿ ಶಿಶುವನ್ನು ಕುಳ್ಳಿರಿಸಿಕೊಂಡು. ದೇವತೆಗಳೂ ದೇವೇಂದ್ರರೂ ಕ್ಷೀರಸಮುದ್ರದಿಂದ ಸಾಲುಗಟ್ಟಿ ನಿಂತು ಕನಕ ಕಲಶಗಳಲ್ಲಿ, ತುಂಬಿ ಕೊಡುತ್ತಿದ್ದ ಕ್ಷೀರದಿಂದ ಸಂತೋಷದಿಂದ ಜಯಜಯ ಧ್ವನಿ ಮಾಡುತ್ತಾ ಅಭಿಷೇಕ ಮಾಡಿದರು. ಪರ್ವತದ ಎಲ್ಲೆಡ ಹರಿಯುತ್ತಿರುವ ಹಾಲಿನಿಂದ ಬೆಳುದಿಂಗಳು ಚೆಲ್ಲಿದಂತೆ ಕಾಣಿಸಿತು. ಜನ್ಮಾಭಿಷೇಕೋತ್ಸವವನ್ನು ನೆರವೇರಿಸಿ, ಪೂಜಿಸಿ, ಅಯೋಧ್ಯೆಗೆ ಹಿಂದಿರುಗಿ ತಂದೆತಾಯಿಯರಿಗೆ ಆನಂದದಿಂದ ಶಿಶುವನ್ನೊಪ್ಪಿಸಿ, 'ಅಜಿತ'ನೆಂದು ನಾಮಕರಣಮಾಡಿ, ದೇವೇಂದ್ರನು ತನ್ನೆಲ್ಲರೊಂದಿಗೆ ಆನಂದ ನೃತ್ಯವನ್ನು ಮಾಡಿ, ಒಲ್ಲದ ಮನಸ್ಸಿನಿಂದ ಕರ್ತವ್ಯಮುಖನಾಗಿ ದೇವಲೋಕಕ್ಕೆ ಹಿಂದಿರುಗಿದನು.

ಅಜಿತಕುಮಾರನು ಬೆಳೆಯುತ್ತಾ ಯೌವನದಲ್ಲಿ ಕಾಲಿಟ್ಟನು. ತಂದೆಯ ಸೂಚನೆಯಂತೆ ಮದುವೆಗೆ ಒಪ್ಪಿದನು. ಮಹಾರಾಜನು ತುಂಬು ಸಂತೋಷದಿಂದ ಸುರಸುಂದರಿಯರಾದ ಸಾವಿರಮಂದಿ ರಾಜಕುಮಾರಿಯರನ್ನು ತಂದು ವೈಭವದಿಂದ ವಿವಾಹ ಮಾಡಿದನು. ಈ ಸಂತೋಷವೇ ಸಾಲದೆಂಬಂತೆ ಪ್ರಶಸ್ತ ಲಗ್ನದಲ್ಲಿ ಮಗನಿಗೆ ಪಟ್ಟಾಭಿಷೇಕ ಮಾಡಿ ಸಿಂಹಾಸನವನ್ನೇರಿಸಿ, ಕೃತಕೃತ್ಯನಾದನು. ಹೀಗಿರಲು ವಸಂತಕಾಲವು ಪ್ರಾಪ್ತವಾದ ಆ ಹೊತ್ತಿಗೇ ಅಜಿತನಿಗೆ ಪುತ್ರೋತ್ಸವವಾಯಿತು. ಇದರಿಂದ ಸಂತೋಷಗೊಂಡ ಜಿತಶತ್ರು ಮಹಾರಾಜನು ಮಗುವಿಗೆ ಅಜಿತಸೇನನೆಂದು ಹೆಸರಿಟ್ಟನು. ಅಜಿತ ಮಹಾರಾಜನು ಒಮ್ಮೆ ವಿದ್ಯಾಧರರ ಒಡ್ಡೋಲಗವನ್ನು ನಡೆಸುತ್ತಾ ದಿಗವ ಲೋಕನವನ್ನು ಮಾಡುತ್ತಿರುವಾಗ ಉಲ್ಕಾಪಾತವಾದುದನ್ನು ಕಂಡು, ವೈರಾಗ್ಯ ಹೊಂದಿದನು. ಇದನ್ನು ತಿಳಿದ ಲೋಕಾಂತಿಕ ದೇವತೆಗಳು ಬಂದು ಆತನನ್ನು ಪೂಜಿಸಿ, ಪ್ರತಿಬೋಧಿಸಿದರು. ಒಡನೆಯೇ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ, ಅಯೋಧ್ಯೆಯನ್ನು ಬಿಟ್ಟು ಹೊರಟನು. ರಾಜ ಮಹಾರಾಜರು ತನ್ನನ್ನು ಹಿಂಬಾಲಿಸಿ

ಬರುತ್ತಿರಲು ಅಜಿತನಾಥನು ಸುಪ್ರಭೆಯೆಂಬ ಸಿವಿಗೆಯನ್ನೇರಿ ತಪೋವನಕ್ಕೆ ತೆರಳಿದನು. ಇತ್ತ ಅರಮನೆಯೇ ದುಃಖಿತಪ್ತವಾಗಿ ತಂದೆ ತಾಯಿ ಪತ್ನಿಯರು ಮಗ ಎಲ್ಲರೂ ಹಿಂಬಾಲಿಸುತ್ತಿದ್ದುದನ್ನು ಹಿರಿಯರಾದ ಕಂಚುಕಿಗಳು ತಡೆದು ನಿಲ್ಲಿಸಿದರು. ಸಹೇತುಕ ವನದಲ್ಲಿ ಚಂದ್ರಶಿಲಾತಲದಲ್ಲಿ ಪೂರ್ವಾಭಿಮುಖನಾಗಿ ಪದ್ಮಾಸನದಲ್ಲಿ ಕುಳಿತು " ನಮ ಸಿದ್ಧೇಭ್ಯಃ " ಎಂದುಸುರಿ, ಕರ್ಮದ ಬೇರುಗಳನ್ನು ಕೀಳುವಂತೆ ತನ್ನ ತಲೆಗೂದಲನ್ನು ಕಿತ್ತುಹಾಕಿದನು. ದೇವತೆಗಳು ಆ ಕೂದಲನ್ನು ಭಕ್ತಿಯಿಂದ ಕೊಂಡೊಯ್ದು ಸಮುದ್ರದಲ್ಲಿ ಹಾಕಿದರು. ಇಂದ್ರಾದಿಗಳು ಅಜಿತಮುನಿಗೆ ಪರಿನಿಷ್ಕ್ರಮಣ ಪೂಜೆಯನ್ನು ಮಾಡಿ ಹಿಂದಿರುಗಿದರು,

ಭವ್ಯಜನ ಕಲ್ಪತರುವಾದ ಅಜಿತಸ್ವಾಮಿಯು ಒಂದು ದಿನವೆಲ್ಲ ಚಂದ್ರಶಿಲಾತಲದಲ್ಲಿಯೇ ಕುಳಿತಿದ್ದು, ಮರುದಿನ ದಾನಧರ್ಮ ಪ್ರಕಾಶನವನ್ನು ಮಾಡಲೆಂದು ಚರಿಗೆಗೆ ಹೊರಟು ಅಯೋಧ್ಯೆಯ ಅರಸನಾದ ಬ್ರಹ್ಮನ ಅರಮನೆಗೆ ಬಂದನು. ಆತನು ಅಜಿತ ಸ್ವಾಮಿಯನ್ನು ಪರಮಾದರದಿಂದ ಇದಿರುಗೊಂಡು ಕನಕಪಾತ್ರೆಯಲ್ಲಿ ತುಂಬಿದ ಇಕ್ಷುರಸವನ್ನೂ ಪಯೋರಸವನ್ನೂ ಭಕ್ತಿಯಿಂದ ಆತನಿಗೆ ಅರ್ಪಿಸಿದನು. ಕೂಡಲೆ ಪಂಚಾಶ್ಚರ್ಯಗಳಾದುವು. ಸ್ವಾಮಿಯು 'ಅಕ್ಷಯ ದಾನಮಕ್ಕೆ' ಎಂದು ಹರಸಿ, ಹೊರಟನು. ಧರ್ಮೋಪದೇಶದಿಂದ ಸಂಚರಿಸುತ್ತಾ ತಪಸ್ಸಿನಲ್ಲಿ ಹನ್ನೆರಡು ವರ್ಷಗಳನ್ನು ಕಳೆದನು. ಶುಕ್ಲ ಧ್ಯಾನದಿಂದ ಘಾತಿ ಕರ್ಮಗಳನ್ನು ನಾಶಮಾಡಿ, ಪುಷ್ಯಮಾಸದ ಶುಕ್ಲ ಏಕಾದಶಿ ಅಪರಾಹ್ನದಂದು ರೋಹಿಣಿ ನಕ್ಷತ್ರದಲ್ಲಿ ಕೇವಲ ಜ್ಞಾನವನ್ನು ಪಡೆದನು. ಕೂಡಲೇ ಅಲ್ಲಿಗೆ ತನ್ನ ಪರಿವಾರದೊಡನೆ ಬಂದ ದೇವೇಂದ್ರನು ಅಜಿತ ಸ್ವಾಮಿಯನ್ನು ಪ್ರದಕ್ಷಿಣೆ ಬಂದು, ಪೂಜಿಸಿ ಸ್ತುತಿಸುತ್ತಾ ನಮಸ್ಕರಿಸಿ ಹಿಂದಿರುಗಿದನು.

ಕೇವಲ ಜ್ಞಾನ ಪೂಜೆಯನ್ನು ಮುಗಿಸಿದ ದೇವೇಂದ್ರನು ಅಜಿತ ಜಿನನಿಗಾಗಿ ಉಪದೇಶ ಸಭಾಮಂಟಪವೊಂದನ್ನು ನಿರ್ಮಿಸಿ ಕೊಡುವಂತೆ ಕುಬೇರನಿಗೆ ಅಪ್ಪಣೆ ಮಾಡಿದನು. ಅದರಂತೆ ಅವನು ದಿವ್ಯವಾದ ಸಮವಸರಣ ಮಂಟಪವನ್ನು ನಿರ್ಮಿಸಿಕೊಟ್ಟನು. ಅಜಿತ ಜಿನನು ಶ್ರಾವಕ ಶ್ರಾವಕಿಯರು, ದೇವದೇವಿಯರು, ಮತ್ತು ತಿರ್ಯಗ್ಜಾತಿಯೊಡನೆ ಕೂಡಿದವನಾಗಿ ಧರ್ಮಕ್ಷೇತ್ರಗಳಲ್ಲಿ ಭವ್ಯ ಸಮಿತಿಗೆ ಧರ್ಮೋಪದೇಶವನ್ನು ಮಾಡುತ್ತಾ ಭೂಮಂಡಲವನ್ನೆಲ್ಲ ಸಂಚರಿಸಿ ಸಮ್ಮೇದ ಪರ್ವತಕ್ಕೆ ಬಂದು ನಿಂತನು. ಅಲ್ಲಿ ಒಂದು ತಿಂಗಳ ಕಾಲ ನಿಂತು ಧ್ಯಾನವಿಧಿ

ಯಿಂದ ಅಘಾತಿ ಕರ್ಮಗಳನ್ನೆಲ್ಲ ಕೆಡಿಸಿ ಚೈತ್ರ ಶುಕ್ಲ ಪಂಚಮಿಯ ಪೂರ್ವಾಹ್ಣದಲ್ಲಿ ಮೋಕ್ಷವನ್ನು ಹೊಂದಿದನು. ಒಡನೆಯೆ ದೇವೇಂದ್ರನು ಬಂದು ಜಿನಮೋಕ್ಷ ಕಲ್ಯಾಣ ಪೂಜೆಯನ್ನು ಮಾಡಿ ಆನಂದ ನೃತ್ಯವನ್ನೆಸಗಿದನು.

ಎರಡನೆಯ ತೀರ್ಥಂಕರನಾದ ಅಜಿತನಾಥನ ಕಥೆಯ ಕೊನೆಯಲ್ಲಿ ಎರಡನೆಯ ಚಕ್ರವರ್ತಿ ಸಗರನ ಕಥೆ ಬರುತ್ತದೆ. ಜಂಬೂದ್ವೀಪದ ಪೂರ್ವವಿದೇಹದಲ್ಲಿ ಸೀತಾನದಿಯ ದಂಡೆಯ ಮೇಲೆ ವತ್ಸಕಾವತಿ ಎಂಬ ರಾಜ್ಯ. ಪೃಥ್ವೀನಗರ ಅದರ ರಾಜಧಾನಿ. ಅಲ್ಲಿನ ದೊರೆ ಜಯಸೇನ ; ವಿಜಯ ಸೇನೆ ಆತನ ಪಟ್ಟದರಸಿ. ಈ ದಂಪತಿಗಳಿಗೆ ರತಿಷೇಣ, ಧೃತಿಷೇಣ ಎಂಬ ಇಬ್ಬರು ಮಕ್ಕಳು. ಇವರಲ್ಲಿ ಹಿರಿಯನಾದ ರತಿಷೇಣ ಅಕಾಲ ಮರಣಕ್ಕೆ ತುತ್ತಾದನು. ತಂದೆ ಪುತ್ರಶೋಕದಿಂದ ಗೋಳಿಡುತ್ತಿರಲು, ಆತನ ಮೈದುನನಾದ ಮಹಾರುತನು ಆತನನ್ನು ಸಂತೈಸುತ್ತಾ ವಿವೇಕದ ಮಾತುಗಳನ್ನಾಡಿದನು. ಇದರಿಂದ ಮನಶ್ಶಾಂತಿಗೊಂಡು, ಧೃತಿಷೇಣನಿಗೆ ರಾಜ್ಯಭಾರವನ್ನು ವಹಿಸಿ, ಯಶೋಧರ ಋಷಿಗಳ ಸನ್ನಿಧಿಯಲ್ಲಿ ಜಿನ ದೀಕ್ಷೆಯನ್ನು ಪಡೆದನು. ತಪೋಮಗ್ನನಾದ ಈ ಮುನಿ ತನ್ನ ಆಯುಷ್ಯಾವಸಾನವನ್ನು ಕಂಡುಕೊಂಡು, ಸಲ್ಲೇಖನ ವಿಧಿಯಿಂದ ಅಸುವನ್ನು ನೀಗಿದನು. ಹೀಗೆ ಶುಭ ಪರಿಣಾಮದಿಂದ ಸತ್ತ ಜಯಸೇನನು ಮಹಾಬಲನೆಂಬ ದೇವನಾಗಿ ಹುಟ್ಟಿ, ದೇವಲೋಕ ಸುಖವನ್ನನುಭವಿಸುತ್ತಿದ್ದನು. ಹಿಂದಿನ ಭವದಲ್ಲಿ ಆತನ ಮೈದುನನಾಗಿದ್ದ ಮಹಾರುತನೂ ಅದೇ ಸ್ವರ್ಗದಲ್ಲಿ ಮಣಿಕೇತುವೆಂಬ ಹೆಸರಿನಿಂದ ಹುಟ್ಟಿ ಸ್ವರ್ಗ ಸುಖವನ್ನನುಭವಿಸುತ್ತಿದ್ದನು. ಅವರಿಬ್ಬರೂ ಒಮ್ಮೆ ಸೇರಿದಾಗ ತಮ್ಮಿಬ್ಬರಲ್ಲಿ ಮೊದಲು ಮನುಷ್ಯ ಲೋಕದಲ್ಲಿ ಹುಟ್ಟಿದವರನ್ನು ಸ್ವರ್ಗದಲ್ಲಿರುವವರು ಪ್ರತಿಬೋಧಿಸಿ, ವಿಷಯ ವಿಮುಖರನ್ನಾಗಿ ಮಾಡಬೇಕೆಂದು ಗೊತ್ತುಮಾಡಿಕೊಂಡರು. ಇದಾದ ಕೆಲವು ದಿನಗಳಲ್ಲಿ ಮಹಾಬಲನು ಸ್ವರ್ಗಚ್ಯುತನಾಗಿ ಭರತ ಕ್ಷೇತ್ರದ ಕೋಸಲ ದೇಶದಲ್ಲಿ ರಾಜನಾಗಿದ್ದ ಸಮುದ್ರವಿಜಯ, ಆತನ ರಾಣಿ ಸುವೇಲಾದೇವಿಯರಿಗೆ ಸಗರನೆಂಬ ಹೆಸರಿನಿಂದ ಹುಟ್ಟಿದನು. ಎಪ್ಪತ್ತು ಲಕ್ಷ ಪೂರ್ವಗಳಷ್ಟು ದೀರ್ಘಾಯುಷಿಯಾದ ಈತನು ಹದಿನೆಂಟು ಲಕ್ಷ ಪೂರ್ವಗಳಷ್ಟು ಬಾಲ್ಯಕಾಲವನ್ನು ಕಳೆದಮೇಲೆ ಪಟ್ಟಾಭಿಷಿಕ್ತನಾದನು. ಹದಿನೆಂಟು ಲಕ್ಷ ಪೂರ್ವವರ್ಷ ರಾಜ್ಯಭಾರಮಾಡಿದ ಮೇಲೆ ಆತನ ಆಯುಧಾಗಾರದಲ್ಲಿ ಚಕ್ರವರ್ತಿ ಸೂಚಕವಾದ ಚಕ್ರರತ್ನ ಹುಟ್ಟಿತು. ಈ ಚಕ್ರರತ್ನವನ್ನು ಪೂಜಿಸಿ, ಅರವತ್ತು ಸಹಸ್ರವರ್ಷ ದಿಗ್ವಿಜಯವನ್ನು ಮಾಡಿ

ವೃಷಭಾಚಲಕ್ಕೆ ಬಂದು ಅಲ್ಲಿ ತನ್ನ ವಿಜಯ ಪ್ರಶಸ್ತಿಯನ್ನು ಬರೆಸ ಬಯಸಿ, ಎಡೆಯೇ ಇಲ್ಲದಿರುವುದನ್ನು ಕಂಡು ಕಿನಿಸಿ, ಅವುಗಳಲ್ಲೊಂದನ್ನು ಅಳಿಸಿ, ತನ್ನ ಪ್ರಶಸ್ತಿಯನ್ನು ಬರೆಸಿ, ಷಟ್ಖಂಡಗಳ ಚಕ್ರವರ್ತಿಯಾಗಿ ಹಿಂದಿರುಗಿದನು. ಊರಿಗೆ ತಲಪುವ ಮುನ್ನ ಸಮ್ಮೇದ ಪರ್ವತಕ್ಕೆ ಹೋಗಿ ಅಜಿತನಾಥನ ಪರಿನಿರ್ವಾಣ ಕ್ಷೇತ್ರವನ್ನು ವಂದಿಸಿ, ಅಲ್ಲಿ ಅನೇಕ ಚೈತ್ಯಾಲಯಗಳನ್ನು ಕಟ್ಟಿಸಿ ಅಯೋಧ್ಯೆಗೆ ಹಿಂದಿರುಗಿದನು.

ಹೀಗೆ ಸಗರನು ಚಕ್ರವರ್ತಿ ಸುಖದಿಂದಿರಲು, ಒಂದು ದಿನ ಅಯೋಧ್ಯೆಯ ಸಿದ್ಧವನದಲ್ಲಿ ಶ್ರೀ ಭಟ್ಟಾರಕರು ಕೇವಲಜ್ಞಾನಿಗಳಾದರೆಂಬುದಾಗಿ ವನಪಾಲಕ ನಿಂದ ತಿಳಿದು, ಒಡನೆಯೇ ಸತಿಸುತರೊಡನೆಯೂ ಸಾಮಂತಾದಿ ಸಕಲ ಪರಿವಾರ ದೊಡನೆಯೂ ಅಲ್ಲಿಗೆ ಹೋಗಿ, ಅಲ್ಲಿಗೆ ಆ ಹೊತ್ತಿಗಾಗಲೆ ಬಂದಿದ್ದ ದೇವತೆ ಗಳೊಡನೆ ಭಟ್ಟಾರಕರನ್ನು ಭಕ್ತಿಯಿಂದ ಪೂಜೆ ಮಾಡಿದನು. ಸಗರನ ಪೂರ್ವ ಜನ್ಮದ ಸ್ನೇಹಿತನಾದ ಮಣಿಕೇತುವೂ ಅಲ್ಲಿಗೆ ಬಂದಿದ್ದು, ಮಹಾಬಲನೇ ಈ ಸಗರನೆಂಬುದನ್ನು ತಿಳಿದು, ಅವನನ್ನು ಕಂಡು ತಾವು ಸ್ವರ್ಗದಲ್ಲಿದ್ದಾಗ ಮಾಡಿ ಕೊಂಡಿದ್ದ ಒಪ್ಪಂದವನ್ನು ನೆನಪಿಸಿದನು. ಸಗರನಿಗೆ ಆ ಹಿಂದಿನದೆಲ್ಲ ನೆನಪಾಯಿ ತಾದರೂ ಪತ್ನೀ ಪುತ್ರಮೋಹ ರಾಜ್ಯಮೋಹಗಳಿಂದ ಅದಕ್ಕೆ ಮನಗೊಡದು ದನ್ನು ಕಂಡು, ಆತನು ತನ್ನ ಪ್ರಯತ್ನದಲ್ಲಿ ವಿಫಲನಾಗಿ ಹಿಂದಿರುಗಿದನು.

ಹಲವಾರು ವರ್ಷಗಳು ಕಳೆದುವು. ಮಣಿಕೇತುವಿಗಾದರೋ ಸಗರನನ್ನು ಮತ್ತೆ ಎಚ್ಚರಿಸುವ ಬಯಕೆ ಹೆಚ್ಚಿತು. ಆತನು ಚಾರಣಋಷಿಯ ರೂಪಿನಿಂದ ಅಯೋಧ್ಯೆಗೆ ಬಂದು ಅಲ್ಲಿನ ಜಿನಾಲಯದಲ್ಲಿ ತಂಗಿದನು. ಇದನ್ನು ಕೇಳಿದ ಸಗರನು ಆತನಲ್ಲಿಗೆ ಬಂದು ಭಕ್ತಿಯಿಂದ ಪೂಜಿಸಿ, ಅವರು ತಪಸ್ವಿಯಾದುದಕ್ಕೆ ಕಾರಣವನ್ನು ಕೇಳಿದಾಗ ಋಷಿಯು ತನ್ನ ವೈರಾಗ್ಯ ಕಾರಣವನ್ನು ತಿಳಿಸಿ, ಸ್ವಸ್ವರೂಪವನ್ನು ತೋರಿಸಿ, ಮತ್ತೊಮ್ಮೆ ತಮ್ಮ ಸಂಕೇತವನ್ನು ನೆನಪು ಮಾಡಿ ದನು. ಈಗಲೂ ಆತನ ಪ್ರಯತ್ನ ಸಗರನ ಮೋಹರಾಜ್ಯದ ಮುಂದೆ ಫಲಿಸ ಲಿಲ್ಲ. ಮಣಿಕೇತು ಮಿತ್ರನ ಹಿತದಿಂದ ತುಂಬ ಯೋಚಿಸಿ, ಹಿಂದೆ ಸಗರನು ಜಯಸೇನನಾಗಿದ್ದ ಭವದಲ್ಲಿ ಸುತನ ವಿರಹದಿಂದ ವೈರಾಗ್ಯಗೊಂಡಿದ್ದುದನ್ನು ನೆನೆದು, ಈಗಲೂ ಅದೇ ಉಪಾಯ ಸುಯೋಗ್ಯವೆಂದು ಮನಗಂಡು ಸಂತಸ ಗೊಂಡನು.

ಸಗರನ ಅರವತ್ತು ಸಾವಿರ ಮಕ್ಕಳೂ ಉದ್ಯೋಗವಿಲ್ಲದೆ ಊಟ ಮಾಡು

ವುದು ಸಹಿಸದೆ, ಏನಾದರೊಂದು ಉದ್ಯೋಗವನ್ನೊದಗಿಸುವಂತೆ ತಂದೆಗೆ ಒತ್ತಾಯಿಸಿ, ಕಡೆಗೆ ಇಚ್ಛೆಯಿಲ್ಲದಿದ್ದರೂ ಮಕ್ಕಳ ಒತ್ತಾಯಕ್ಕೆ ಮಣಿದು, ಕೈಲಾಸಪರ್ವತದಲ್ಲಿ ಭರತೇಶ್ವರನು ಸ್ಥಾಪಿಸಿರುವ ಜಿನಪ್ರತಿಮೆಗಳು ಭೂಗೋಚರವಾಗದಂತೆ ರಕ್ಷಣೆಯನ್ನು ನಿರ್ಮಿಸುವಂತೆ ಹೇಳಲು, ಅವರು ಸಂತೋಷದಿಂದ ಅತ್ತ ಧಾವಿಸಿದರು.

ಸಗರ ಪುತ್ರರು ಕೈಲಾಸಪರ್ವತದ ಸುತ್ತ ದೊಡ್ಡ ಕಂದಕವನ್ನು ನಿರ್ಮಿಸ ತೊಡಗಿದರು. ತನಗೆ ಸುಸಮಯವೊದಗಿತೆಂದು ಭಾವಿಸಿದ ಮಣಿಕೇತುವು ವಿಷ ದೃಷ್ಟಿ ವಿಷೋರಗದ ಸ್ವರೂಪದಿಂದ ಅಲ್ಲಿಗೆ ಬಂದು ಭಗೀರಥನೊಬ್ಬನನ್ನುಳಿದು ಉಳಿದೆಲ್ಲರನ್ನೂ ಕೃತಕವಾಗಿ ಭಸ್ಮಾವಲೇಪನರನ್ನಾಗಿ ಮಾಡಿದನು. ಅನಂತರ ಮಣಿಕೇತುವು ವೃದ್ಧಬ್ರಾಹ್ಮಣವೇಷಧಾರಿಯಾಗಿ ಸಗರನ ಅರಮನೆಯ ಬಾಗಿಲಲ್ಲಿ ನಿಂತು ಗಟ್ಟಿಯಾಗಿ ಹುಯ್ಯಲಿಟ್ಟನು. ಕಪಟ ಬ್ರಾಹ್ಮಣನ ಗೋಳನ್ನು ಕೇಳಿದ ಸಗರನು, ಆ ಬ್ರಾಹ್ಮಣನನ್ನು ಕರೆಸಿ ವಿಚಾರಿಸಲು ಸತ್ತಿರುವ ಅವನ ಮಗನನು ಬದುಕಿಸಿಕೊಟ್ಟು ಬ್ರಾಹ್ಮಣನ ರಕ್ಷಣೆಮಾಡಬೇಕೆಂದೂ ಇಲ್ಲವಾದರೇ ಅವನು ಅಲ್ಲಿಯೇ ಸಾಯಲಿರುವುದಾಗಿಯೂ ತಿಳಿಯಿತು. ಇದು ತನ್ನ ಪರಾಕ್ರಮಕ್ಕೆ ಸವಾಲಾಗಿರುವುದನ್ನು ಕಂಡು ಉಪಾಯವೇನೆಂದು ಚಿಂತಿಸಿದನು. ಇದನ್ನು ಕಂಡ ಬುದ್ಧಿಸಾಗರನೆಂಬ ಪುರೋಹಿತನು ದೊರೆಯ ಸಹಾಯಕ್ಕೆ ಬಂದು, ಒಬ್ಬರೂ ಸಾಯದ ಮನೆಯಿಂದ ಹುಲ್ಲನ್ನೂ ಕಿಚ್ಚನ್ನೂ ಅವನು ತಂದಲ್ಲಿ ಆ ಮಗನನ್ನು ಬದುಕಿಸಲು ಸಾಧ್ಯವೆಂದು ಹೇಳಿ ಕಳುಹಿಸಿದನು. ಇದು ಅಸಾಧ್ಯವೆಂದು ಅರಿತೂ ಹಾಗೆ ಹೋಗಿ ಹೀಗೆ ಬಂದ ಆ ಕಪಟ ಬ್ರಾಹ್ಮಣನು ಅಂತಹ ಮನೆ ಒಂದೂ ಸಿಕ್ಕಲಿಲ್ಲವೆಂದು ಬಿನ್ನವಿಸಿದನು. ಆಗ ಪುರೋಹಿತನು ಅವನಿಗೆ ವಿವೇಕವನ್ನು ಉಪದೇಶಿಸಲು, ಅದೆಲ್ಲವನ್ನೂ ಮೌನ ವಾಗಿ ಕುಳಿತು ಕೇಳಿದ ಬ್ರಾಹ್ಮಣನು ಅವರನ್ನು ಅವರ ಉಪದೇಶದಿಂದಲೇ ಕಟ್ಟಿಹಾಕುವ ನಿಶ್ಚಯದಿಂದ ಇದು ತನಗೆ ಮಾತ್ರವೊ ಇಲ್ಲವೆ ಎಲ್ಲರಿಗೂ ಅನ್ವಯಿಸುವುದೊ ಎಂದು ಕೇಳಿದನು. ಅದಕ್ಕೆ ಸಗರನು ನಕ್ಕು ಅದು ತನಗೂ ಉಂಟೆನ್ನಲು, ಅದೇ ಸರಿಯಾದ ಸಮಯವೆಂದು ನಿಶ್ಚಯಿಸಿದ ಬ್ರಾಹ್ಮಣನು ಅವನ ಮಕ್ಕಳ ಸಾವಿನ ಸುದ್ದಿಯನ್ನು ತಿಳಿಸಿದನು, ಅದೇ ಹೊತ್ತಿಗೆ ಭಗೀರಥನೂ ಗೋಳಿಡುತ್ತಾ ಓಡಿ ಬಂದು ಅಣ್ಣಂದಿರ ಸಾವಿನ ಸುದ್ದಿಯನ್ನು ನಿವೇದಿಸಲು ಇದರಿಂದ ಅಲ್ಲಿದ್ದವರೆಲ್ಲ ಗರಬಡಿದಂತಾದರು. ಕ್ಷಣಾರ್ಧದಲ್ಲಿ

ಗೋಳಾಟ–ಚೀರಾಟ ಅರಮನೆಯನ್ನೆಲ್ಲ ಹಬ್ಬಿತು. ಸಗರನಿಗೆ ಒಂದು ಕಡೆ ಪುತ್ರಶೋಕ, ಮತ್ತೊಂದು ಕಡೆ ಮಡದಿಯರ ಸೊಸೆಯರ ದುಃಖ ಬಾಧಿಸಿ ತಾದರೂ ಧೈರ್ಯವನ್ನು ತಂದುಕೊಂಡು ಗಂಭೀರನಾಗಿ ಆ ಬಡಬ್ರಾಹ್ಮಣ ನಂತೆಯೇ ಇವರೂ ಆದುದನ್ನು ಕಂಡು ಚಿಂತಿಸಿದ. ಆತನ ಧೀರ ಗಂಭೀರಭಾವ ವನ್ನು ತಿಳಿಯಲಾರದ ಜನ ಆತನನ್ನು ಕಲ್ಲೆದೆಯವನೆಂದು ನಿಂದಿಸಿದರು. ಇದನ್ನು ಕಂಡ ಬುದ್ಧಿಸಾಗರ ಮಂತ್ರಿಯು ಚಕ್ರವರ್ತಿಯ ದುಃಖ ಎಷ್ಟು ತೀವ್ರತರವಾದು ದೆಂಬುದನ್ನು ತೋರಿಸುವುದಕ್ಕಾಗಿ ಒಂದು ಹಿಡಿ ಬಿಳಿ ಸಾಸುವೆಯನ್ನು ತಂದು ಆತನ ಮೇಲೆ ಸುರಿದನು. ಅವು ಕಾದ ಬಾಣಲೆಯಲ್ಲಿ ಸುರಿದ ಕಾಳಿನಂತೆ ಅರಳಾಗಿ ಛಿಳಿಛಿಟಿಲ್ ಎಂದು ದಿಕ್ಕುದಿಕ್ಕಿಗೂ ಹಾರಿದವು. ಚಕ್ರವರ್ತಿಯ ದುಃಖಾಧಿಕ್ಯ ಎಷ್ಟೆಂಬುದು ಎಲ್ಲರಿಗೆ ಮನವರಿಕೆಯಾಯಿತು. ಸಗರನು ವೈರಾಗ್ಯ ಗೊಂಡು, ಭಗೀರಥನಿಗೆ ರಾಜ್ಯವನ್ನೊಪ್ಪಿಸಿ, ನೇರವಾಗಿ ದೃಢಧರ್ಮ ಕೇವಲಿ ಗಳ ಬಳಿಗೆ ಬಂದು ಅವರಿಂದ ದೀಕ್ಷೆಯನ್ನು ಪಡೆದನು.

ಈಗಲಾದರೂ ತನ್ನ ಪ್ರಯತ್ನ ಫಲಿಸಿದುದನ್ನು ಕಂಡ ಮಣಿಕೇತುವು ಕೈಲಾಸಪರ್ವತಕ್ಕೆ ಬಂದು ಭಸ್ಮಾವಲೇಪನರಾಗಿದ್ದ ಸಗರ ಪುತ್ರರನ್ನು ಎಬ್ಬಿಸಿ ಸಗರನು ಸಂನ್ಯಾಸಿಯಾದುದನ್ನು ತಿಳಿಸಿದನು. ಅದರಿಂದ ಕೂಡಲೆ ವೈರಾಗ್ಯ ಗೊಂಡ ಅವರೂ ಅದೇ ಕೇವಲಿಗಳ ಬಳಿಯೇ ದೀಕ್ಷೆಯನ್ನು ಸ್ವೀಕರಿಸಿದರು. ಇದನ್ನು ಕೇಳಿದ ಭಗೀರಥನು ತಾನೂ ಆ ಕೇವಲಿಗಳಲ್ಲಿಗೆ ಹೋಗಿ ಭಕ್ತಿಯಿಂದ ನಮಸ್ಕರಿಸಿ, ಉಪದೇಶವನ್ನು ಪಡೆದು ಅನೇಕ ಜೈನವ್ರತ್ರಗಳನ್ನು ಕೈಗೊಂಡನು.

ಸಗರ ಮುನಿಯೂ ಮುನಿಕುಮಾರರೂ ತಮ್ಮ ಶ್ರೇಯಸ್ಸಿಗಾಗಿ ಮಣಿ ಕೇತು ಮಾಡಿದ ಉಪಾಯವನ್ನು ಕೃತಜ್ಞತೆಯಿಂದ ಹೊಗಳಿದರು. ಈ ಮುನಿ ಗಳೆಲ್ಲರೂ ಸಮ್ಮೇದ ಪರ್ವತದ ಮೇಲೆ ಉಗ್ರೋಗ್ರ ತಪಸ್ಸನ್ನಾಚರಿಸಿ, ಪರಮ ಗತಿಯನ್ನು ಹೊಂದಿದರು. ಇದನ್ನು ಕೇಳಿದ ಭಗೀರಥನೂ ವೈರಾಗ್ಯಗೊಂಡು ತನ್ನ ಮಗನಾದ ವರದತ್ತನಿಗೆ ರಾಜ್ಯಭಾರವನ್ನು ವಹಿಸಿ, ಶಿವಗುಪ್ತ ಮುನಿ ಗಳಿಂದ ದೀಕ್ಷೆಯನ್ನು ಪಡೆದು, ತಪಸ್ಸನ್ನಾಚರಿಸಿ, ಮೋಕ್ಷವನ್ನು ಪಡೆದನು. ಇತ್ತ ವರದತ್ತ ಮಹಾರಾಜನೂ ತನ್ನ ಹಿರಿಯರಂತೆ ವಂಶೋಚಿತವಾದ ದಾನ ಧರ್ಮಕಾರ್ಯಗಳನ್ನು ಮಾಡಿ 'ದಾನ ಚಿಂತಾಮಣಿ' ಎಂಬ ಕೀರ್ತಿಯಿಂದ ವಿಖ್ಯಾತನಾಗಿ ರಾಜ್ಯಭಾರ ಮಾಡುತ್ತಿದ್ದನು. ಸಗರನ ವೈರಾಗ್ಯ ಪ್ರಸಂಗದ ಈ 'ಇಡೀ ಕಥೆಯು ಒಂದು ರಸಘಟ್ಟಿಯಂತಿದೆ.'

**ಕಥಾ ವ್ಯತ್ಯಾಸಗಳು:** ಭಗವತ್ ಜಿನಸೇನಾಚಾರ್ಯರು ಮತ್ತು ಅವರ ಶಿಷ್ಯ ಗುಣಭದ್ರಾಚಾರ್ಯರಿಂದ ರಚಿತವಾದ "ಮಹಾಪುರಾಣ"ವು ಜೈನರ ನಾಲ್ಕೂ ಅನುಯೋಗ (ವೇದ) ಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟು ಪರಮ ಪೂಜ್ಯ ಗ್ರಂಥವಾಗಿದೆ. ಇಂಥ ಕೃತಿಯೊಂದನ್ನು ಕನ್ನಡದಲ್ಲಿ ಕೊಡುವಾಗ ಎಂತಹ 'ಕವಿ'ಯೇ ಆದರೂ ಕಥಾಂಶಗಳ ಮಾರ್ಪಾಟಿಗೆ ಮನಗೊಡಲಾರ, 'ವಿಕ್ರಮಾರ್ಜುನ ವಿಜಯ'ದಲ್ಲಿ ಹಲವು ಮಾರ್ಪಾಟುಗಳನ್ನು ಅಳವಡಿಸಿಕೊಂಡಿರುವ ಪಂಪನೂ ತನ್ನ 'ಆದಿಪುರಾಣ'ದಲ್ಲಿ ಯಥಾವತ್ತಾಗಿ ಮೂಲವನ್ನು ಕನ್ನಡಿಸಿರುವಾಗ, ರನ್ನ ಯಾವ ಮಾರ್ಪಾಟನ್ನಾದರೂ ಯೋಚಿಸಲಾದೀತೆ ? ಆದರೂ ತನ್ನ 'ಎಂಟೆರ್ದೆತನ'ದಿಂದಲೇನೊ ಮೂಲದೃಷ್ಟಿಗೆ ಭಂಗ ಬರದ ರೀತಿಯಲ್ಲಿ ಕೆಲವು ವ್ಯತ್ಯಾಸಗಳನ್ನು ಅಳವಡಿಸಿಕೊಂಡಿರುವುದನ್ನು ಗುರುತಿಸಬಹುದಾಗಿದೆ.

೧: ಗುಣಭದ್ರಾಚಾರ್ಯರ ಉತ್ತರ ಪುರಾಣದಲ್ಲಿ ವಿಮಲವಾಹನನಿಗೆ ವೈರಾಗ್ಯವುಂಟಾಗುವುದಕ್ಕೆ ಯಾವ ಬಾಹ್ಯ ಕಾರಣವೂ ಇಲ್ಲ. ಅಜಿತ ಪುರಾಣದಲ್ಲಿ 'ಪಳನಾಳ ದರ್ಪಣತಳ ಪ್ರತಿ ದರ್ಪಣ ಬಿಂಬಿತ ಕಪೋಲಮೂಲೋದ್ಗತ ಪಳಿತಾಂಕುರಾವಳೋಕನದೆ'—ತನ್ನ ಕೆನ್ನೆಯಲ್ಲಿ ನರೆತ ಕೂದಲೊಂದನ್ನು ಕನ್ನಡಿಯಲ್ಲಿ ಕಂಡುದರಿಂದ ಪರಮವೈರಾಗ್ಯಪರನಾಗುತ್ತಾನೆ. ಈ ಮಾರ್ಪಾಟು ಸಮಾಂಜಸವಾಗಿದೆ.

೨: ಉತ್ತರ ಪುರಾಣದಲ್ಲಿ ಸಗರನು ಹಿಂದೆ ಜಯಸೇನನಾಗಿದ್ದ ಭವದಲ್ಲಿ ತನ್ನ ಮಗನಾದ ರತಿಷೇಣನ ಅಕಾಲ ಮರಣದಿಂದ ವೈರಾಗ್ಯಗೊಂಡರೆ, ಅಜಿತ ಪುರಾಣದಲ್ಲಿ ರತಿಷೇಣನ ಅಕಾಲ ಮರಣದಿಂದ—ಪುತ್ರಶೋಕದಿಂದ ದುಃಖಿತನಾಗಿರುವಾಗ ಮೈದುನನಾದ ಮಹಾರುತನ ಬೋಧೆಯಿಂದ ವೈರಾಗ್ಯ ಮೂಡುತ್ತದೆ. ಈ ಮಾರ್ಪಾಟು ಎಷ್ಟು ಯೋಗ್ಯ ?

೩: ಉತ್ತರ ಪುರಾಣದಲ್ಲಿ ಸಗರನ ಅಯೋಧ್ಯಾನಗರದ ಸಿದ್ಧವನದಲ್ಲಿ ಶ್ರೀಧರ ಮುನಿಗೆ ಕೇವಲ ಜ್ಞಾನ ಉಂಟಾದಾಗ ಆ ಕಲ್ಯಾಣಕ್ಕೆ ಬಂದಿದ್ದ ಮಣಿಕೇತು ತನ್ನ ಅವಧಿ ಜ್ಞಾನದಿಂದ ಮಹಾಬಲನು ಸಗರನಾಗಿ ಹುಟ್ಟಿ ಸುಖಲೋಲುಪ್ತನಾಗಿರುವುದನ್ನು ತಿಳಿಯುತ್ತಾನೆ. ಅಜಿತ ಪುರಾಣದಲ್ಲಿ ಇದು ಶ್ರೀಧರ ಮುನಿಗಳಿಂದ ತಿಳಿಯಿತೆಂದಿದೆ. ಈ ಮಾರ್ಪಾಟು ಅವನ ದೇವತ್ವಕ್ಕೇ ಒಂದು ಸವಾಲಾಗಿದ್ದು, ಸಮಂಜಸವೆನಿಸದು.

೪ : ಉತ್ತರ ಪುರಾಣದಲ್ಲಿ ಸಗರನು ತನ್ನ ಅರವತ್ತು ಸಾವಿರ ಮಕ್ಕಳಿಗೆ ಅವರ ಒತ್ತಾಯದಿಂದ 'ಕೈಲಾಸ ಪರ್ವತದಲ್ಲಿ ಭರತೇಶ್ವರನು ಇಪ್ಪತ್ತನಾಲ್ಕು ಮಂದಿ ಅರಹಂತರ ಮಂದಿರಗಳನ್ನು ಮಾಡಿಸಿದ್ದಾನೆ. ನೀವು ಆ ಪರ್ವತದ ಸುತ್ತಲೂ ಗಂಗಾನದಿಯನ್ನು ಕಂದಕವನ್ನಾಗಿ ಮಾಡಿರಿ' ಎಂದು ಆಜ್ಞಾಪಿಸು ತ್ತಾನೆ. ಅಜಿತ ಪುರಾಣದಲ್ಲಿ 'ಕೈಲಾಸ ಪರ್ವತದಲ್ಲಿ ಭರತೇಶ್ವರನು ಅನೇಕ ರತ್ನಮಯ ಪ್ರತಿಮೆಗಳನ್ನು ಮಾಡಿಸಿದ್ದಾನೆ. ಅವು ಭೂಮಿಗೆ ಗೋಚರವಾಗ ದಂತೆ, ನಿಮಗೆ ತಿಳಿದಂತೆ ಮಾಡಿರಿ' ಎನ್ನುತ್ತಾನೆ.

೫ : ಉತ್ತರ ಪುರಾಣದಲ್ಲಿ ಸಗರ ಪುತ್ರರ ಜೊತೆಯಲ್ಲಿ ಹೋಗಿದ್ದ ಮಂತ್ರಿಗಳು ವಿಷದೃಷ್ಟಿ ವಿಷೋರಗನಿಂದ ಭಸ್ಮೀಭೂತರಾಗದೆ ಉಳಿದರೂ ಅವರು ಭಯದಿಂದಲೋ ಚಿಂತೆಯಿಂದಲೋ ಆ ದುಃಖವಾರ್ತೆಯನ್ನು ಸಗರನಿಗೆ ತಿಳಿಸುವುದಿಲ್ಲ. ಅಜಿತ ಪುರಾಣದಲ್ಲಿ ಮಂತ್ರಿಗಳು ಸಗರ ಪುತ್ರರ ಜೊತೆಗೆ ಹೋಗುವುದಿಲ್ಲ. ಆ ದುಃಖವಾರ್ತೆಯನ್ನು ತಿಳಿಸಲೆಂದೇ ಭಗೀರಥನೊಬ್ಬನು ಉಳಿದಿದ್ದಾನೆ. ಈ ವ್ಯತ್ಯಾಸ ಸರಿಯಾಗಿದೆ.

೬ : ಉತ್ತರ ಪುರಾಣದಲ್ಲಿ ಕಪಟ ಬ್ರಾಹ್ಮಣ ವೇಷಿಯಾದ ಮಣಿಕೇತು ವಿಗೆ ಧರ್ಮೋಪದೇಶವನ್ನು ಮಾಡುವವನು ಸಗರನೇ. ಅಜಿತ ಪುರಾಣದಲ್ಲಿ ಈ ಉಪದೇಶವನ್ನು ಬುದ್ಧಿ ಸಾಗರನೆಂಬ ಪುರೋಹಿತನಿಂದ ಮಾಡಿಸಿರುವುದು ಯೋಗ್ಯವಾಗಿದ್ದರೂ, ' ಈ ನಿನ್ನ ಪೇಟ್ದ ಧರ್ಮಮಿದೇನೆನಗೆಯೊ ನಿನಗ ಮುಂಟೊ' (೧೦-೩೧) ಎಂದು ಕಪಟ ಬ್ರಾಹ್ಮಣನು ಕೇಳುವುದೂ, ಅದಕ್ಕೆ ಸಗರನೇ ' ಎನಗದು ಮುನ್ನಂ' (೧೦-೩೧) ಎನ್ನುವುದೂ ಒಂದು ಬಗೆಯ ತೊಡಕಿಗಿಟ್ಟುಕೊಂಡಿದೆ. ಮೂಲವೇ ಔಚಿತ್ಯಪೂರ್ಣವಾಗಿದೆಯಲ್ಲವೆ ?

೭ : ಸಗರನ ಕಥೆ ವೈದಿಕ ಸಂಪ್ರದಾಯದಲ್ಲಿಯೇ ಬೇರ ಬೇರೆ ರೂಪ ಗಳಿಂದ ಕೂಡಿರುವಂತೆ, ಜೈನ ಸಂಪ್ರದಾಯದಲ್ಲೂ ವಿವಿಧ ರೂಪಗಳಿಂದ ಕೂಡಿದೆ. ' ವೈದಿಕ ಧರ್ಮದ ಪ್ರಸಿದ್ಧ ಕಥೆಗಳನ್ನು ಜೈನ ಬೌದ್ಧ ಧರ್ಮಗಳು ತಮ್ಮ ಪುರಾಣಗಳಲ್ಲಿ ಸೇರಿಸಿಕೊಂಡಿವೆ ; ತಮಗೆ ಸರಿತೋರಿದಂತೆ ಮಾರ್ಪಾಟು ಮಾಡಿಕೊಂಡಿವೆ' ಎಂಬುದು ತುಂಬ ಹಗುರವಾದ ಹೇಳಿಕೆಯಾಗಿದ್ದು ಸಮರ್ಥ ನೀಯವೆನಿಸದು.

## ಪಾತ್ರ ಪರಿಚಯ

**ಸಗರ :** ಚರಮ ದೇಹಿ. ರಾಗಾದಿಗಳನ್ನೂ ಪುತ್ರವ್ಯಾಮೋಹವನ್ನೂ ಗೆದ್ದು ತಪೋಮುಖನಾಗಿ ಮುಕ್ತಿಗೆ ಹೋಗುತ್ತಾನೆ. ಈ ಪುತ್ರ ವ್ಯಾಮೋಹ ಜಯಸೇನನಾಗಿದ್ದ ಭವದಿಂದಲೂ ಬೆನ್ನಟ್ಟಿ ಬಂದುದು. ಅಲ್ಲಿ ತನ್ನ ಹಿರಿಯ ಮಗ ರತಿಷೇಣನ ಅಕಾಲ ಮರಣದಿಂದ ಸಹಜವಾಗಿಯೇ ದುಃಖಿತನಾಗಿ ಮೈದುನ ಮಹಾರುತನ ಧರ್ಮೋಪದೇಶದಿಂದ ವಿವೇಕಹೊಂದಿ, ಧೈರ್ಯ ಗೊಂಡು ಜಿನದೀಕ್ಷೆಯನ್ನು ಸ್ವೀಕರಿಸಿ ಸಮಾಧಿಮರಣದಿಂದ ದೇವನಾಗಿ ಹುಟ್ಟು ತ್ತಾನೆ. ಇಹದಲ್ಲಿಳಿದಾಗ ಹಿಂದಿನ ಭವದಲ್ಲಿ ತನಗೂ ಮಹಾರುತನಿಗೂ ಆಗಿದ್ದ ಒಪ್ಪಂದವನ್ನೇ ಮರೆತು ಮೋಹರಾಜನ ವಶವರ್ತಿಯಾಗಿರುತ್ತಾನೆ. ಇದನ್ನು ಕಂಡುಕೊಂಡ ಮಣಿಕೇತು ಅವನನ್ನು ಪ್ರತಿಬೋಧಿಸುತ್ತಾನೆ. ಸಗರನಿಗೆ ಹಿಂದಿನದು ನೆನಪಾದರೂ '....ನೆನೆದುಮಾಱನೆ ಷಷ್ಟಿಸಹಸ್ರ ಪುತ್ರ ಮೋಹದೆ ನಿಜರಾಜ್ಯಮುಂ ತೊಱೆಯಲಾರ್ ಗೆಲಲಾರ್ಪರೊ ಮೋಹರಾಜನಂ' (೧೦-೪) ಎಂದು ಒಡಂಬಡದೆ ಇರುತ್ತಾನೆ. ಮಣಿಕೇತು ಮತ್ತೆ ಚಾರಣಋಷಿರೂಪದಲ್ಲಿ ಬಂದು ಎಚ್ಚರಿಸುತ್ತಾನೆ. ಆದರೂ ರಾಜ್ಯಮೋಹ ಪುತ್ರಸ್ನೇಹಗಳಲ್ಲಿ ಸಿಲುಕಿ ಒಡಂಬಡುವುದೇ ಇಲ್ಲ. ತನ್ನ ಅರವತ್ತು ಸಾವಿರ ಮಕ್ಕಳೂ ದೃಷ್ಟಿ ವಿಷೋರಗ ನಿಂದ ಭಸ್ಮಾವಶೇಷರಾದರೆಂಬುದನ್ನು ಕೇಳಿಯೂ ನಂಬದಷ್ಟು ಮಟ್ಟಿಗೆ ಇದು ಗಾಢವಾಗಿತ್ತು. ಮಾನವ ಸಹಜವಾದ ಈ ಮೋಹ ಸ್ನೇಹಗಳು ಈತನಲ್ಲಿ ಸ್ವಲ್ಪ ಹೆಚ್ಚಾಗಿಯೇ ಇದ್ದುವು. ಆದರೆ ಮಗನೇ–ಭಗೀರಥನೇ ಅಸಹ್ಯ ಶೋಕಾ ಕುಲಿತಚಿತ್ತನಾಗಿ ಬಂದು ತಿಳಿಸಿದಾಗ ಆತನು ಸಿಡಿಲೇ ಎರಗಿದಂತಾದನು. ಅಂತಃಪುರದಲ್ಲಿ ಹಾಹಾಕ್ರಂದನವೆದ್ದಿತು. ಸಭಾ ಜನರೆಲ್ಲ ದಿಙ್ಮೂಢರಾದರು. ಇಷ್ಟಾದರೂ ಆತನು ಮಹಾಸತ್ವನೂ ಧೈರ್ಯಾಂಬುರಾಶಿಯೂ ಆಗಿರುವುದ ರಿಂದ ವಿಚಲಿತನಾಗದೆ ಸ್ಥೈರ್ಯದಿಂದಿದ್ದನು. 'ಸಗರನ ಮನಮುಂ ಸಾಗರದ ಗುಣ್ಪನೆಱೆವರುಮೊಳರೆ' (೧೦-೪೭) ಎಂಬುದು ಕವಿಯ ಉದ್ಗಾರ. ಆದರೆ ಇದನ್ನರಿಯಲಾರದ ಜನ ದೊರೆ ಎಂತಹ ಕಲ್ಲೆದೆಯವನೊ ಎಂದು ಮುಂತಾಗಿ ಆಡಿಕೊಳ್ಳುತ್ತಿರುವುದನ್ನು ಕೇಳಿದ ಆ ಬುದ್ಧಿಸಾಗರನೇ ಈತನ ಚಿಂತಾಭರವನ್ನು ಪ್ರಕಟ ಪಡಿಸಲು ಈತನ ಮೇಲೆ ಬಿಳಿಸಾಸವೆಯನ್ನೆರಚಲು ಅವು ಅರಳಾಗಿ ಸಿಡಿದು ಚೆಲ್ಲಾಡಿದುವಂತೆ ! ಕಡೆಗೆ ಪುತ್ರಶೋಕವನ್ನು ತಾಳಲಾರದೆ ಅಂತಃಪುರದ ಪತ್ನಿಯರಿಗೂ ಸೊಸೆಯರಿಗೂ ಉತ್ತರಿಸಲಾಗದೆ ವೈರಾಗ್ಯಗೊಂಡು 'ಪೋಪೆ

ನೀಗಳ್ ತಪಂ ಬಡಲೆಂದು' (೧೦–೫೪) ನಿಶ್ಚಯಿಸಿ ನಿಲ್ಲದೆ ಹೋದನು. ದೃಢಧರ್ಮ ಕೇವಲಿಗಳಲ್ಲಿ ದೃಢಚಿತ್ತನಾಗಿ ದೀಕ್ಷಾಗ್ರಹಣ ಮಾಡಿದನು. ಚರಮ ದೇಹಿಯಾದುದರಿಂದ ಅದೇ ಭವದಲ್ಲಿಯೇ 'ಪರಮಗತಿಯನೆ' ಯ್ದಿದನು; ಮುಕ್ತಿಗೆ ಸಂದನು.

**ಮಣಿಕೇತು :** ಆದರ್ಶ ಮೈತ್ರಿ ನಿಷ್ಠೆಗೆ ನಿದರ್ಶನವಾಗಿ ತೊಳಬೆಳಗು ತ್ತಿರುವ ವ್ಯಕ್ತಿತ್ವ ಈ ಮಣಿಕೇತುವಿನದು. ಪಣತೊಟ್ಟು ಸಗರನನ್ನು ಉದ್ಧಾರದ ಹಾದಿ ಹಿಡಿಸಿದ ಜೀವ ಇದು. ಸಗರನ ಪಾತ್ರದುದ್ದಕ್ಕೂ ಕಂಡುಬರುವ ಪಾತ್ರ ಇದು. ಜಯಸೇನ ಮಹಾರುತ ಜನ್ಮಗಳ ನಂಟನ್ನು, ಪರಸ್ಪರ ಅಂದು ಆಗಿದ್ದ ಒಪ್ಪಂದವನ್ನು ಮರೆಯದೆ ಸಗರನನ್ನು ಪ್ರತಿಬೋಧಿಸುತ್ತಾನೆ. ಅವನನ್ನು ಸಂಸಾರ ವಿಮುಖನನ್ನಾಗಿ ಮಾಡಲು ವಿಫಲನಾದಾಗಲೂ ಸೋಲನ್ನೊಪ್ಪಿ ಕೈಬಿಡದೆ, ಮತ್ತೆಮತ್ತೆ ಪ್ರಯತ್ನಶೀಲನಾಗುತ್ತಾನೆ. ಕಡೆಗೂ ಸಫಲನಾಗುತ್ತಾನೆ. ನಿಜವಾದ ಸ್ನೇಹ ಎಂದರೆ ಇದು. ಇಲ್ಲಿ ಮಣಿಕೇತುವಿನದು ವ್ಯಾಮೋಹವಲ್ಲ; ಜೀವನೊಬ್ಬನ ಉದ್ಧಾರ ಪ್ರಯತ್ನ; ಪರೋಪಕಾರ ಬುದ್ಧಿ–'ಇಷ್ಟಂ ಧರ್ಮೇಣ ಯೋಜಯೇತ್' ಎಂಬಂತೆ. 'ಆತನಂತು ನಮಗೆ ಪರೋಪಕಾರಿ ಗಳಾರುಮಿಲ್ಲ' ಎಂದು ಸಗರಾದಿಗಳೂ ಸ್ಮರಿಸುವಂತಹ ಉಪಕಾರಿ. ತನ್ನ ಪ್ರಯತ್ನ ಸಫಲವಾದಾಗಲೇ ಆ ಜೀವಕ್ಕೆ ಸಮಾಧಾನ; 'ನಿಜ ನಿವಾಸಕ್ಕೆಪೋ' ದುದು. 'ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಮಿತ್ರನಂತೆ ಹಿತವನ್ನು ಮಾಡುವ ಬಂಧು ಬೇರೆ ಯಾರೂ ಇಲ್ಲ. ಈ ವಿಷಯದಲ್ಲಿ ಮಣಿಕೇತು ದೇವನೇ ಸ್ಫುಟವಾದ ದೃಷ್ಟಾಂತ' (೪೮–೧೪೨) ಎಂಬ ಗುಣಭದ್ರಾಚಾರ್ಯರ ಪ್ರಶಂಸೆ ಸತ್ಯಸ್ಯಸತ್ಯ.

* * *

**ಅತ್ತಿಮಬ್ಬೆ :** ಅತ್ತಿಮಬ್ಬೆ ಪುರಾಣ ಪಾತ್ರವಲ್ಲ. ಆದರೆ, ಜೈನ ಸಾಹಿತ್ಯ ದಲ್ಲೇ ಮರೆಯಲಾಗದ ಹೆಸರು. ಈಕೆಯಿಂದಲೇ ಈ ಪುರಾಣ ರಚನೆಗೆ ಪ್ರೇರಣೆ; ಪ್ರೋತ್ಸಾಹ! ಈಕೆ ಲೌಕಿಕ ವ್ಯಕ್ತಿ; ಆದರೆ, ಅಲೌಕಿಕವಾದ ವ್ಯಕ್ತಿತ್ವ!

ಆಹವಮಲ್ಲದೇವನ ಭುಜಾದಂಡನೆನಿಸಿದ ಮಹಾಮಂತ್ರಿ ಧಲ್ಲಪನ ಹಿರಿಯ ಮಗ 'ಒಜಟರ ಮಲ್ಲ'ನೆನಿಸಿದ ನಾಗದೇವ; ಸ್ವಾಮಿ ಸೇವಾ ಧುರಂ ಧರ. ಈತನು ಅನೇಕ ಯುದ್ಧಗಳಲ್ಲಿ ವಿಜಯವನ್ನು ಸೂರೆಮಾಡಿ ಒಡೆಯನ

ಮೆಚ್ಚುಗೆಯೊಂದಿಗೇ ಸೇನಾಪತಿ ಪದವಿಯನ್ನು ಗಳಿಸಿದವನು. ಈತನ ಪತ್ನಿಯರೇ ಅತ್ತಿಮಬ್ಬೆ ಗುಂಡಮಬ್ಬೆಯರೆಂಬ ಸೋದರಿಯರು. ಸುಖ ಸಂಸಾರದ ಮೊದ ಮೊದಲಲ್ಲೇ ನಾಗದೇವನು ದೇವಲೋಕಕ್ಕೆ ಹೋದನು. ಇತ್ತ ತಂಗಿ ಗುಂಡ ಮಬ್ಬೆ ಅಕ್ಕ ಅತ್ತಿಮಬ್ಬೆಯಲ್ಲಿಗೆ ಬಂದು ತಾನು ಪತಿಯೊಡನೆ ಚಿತೆಯೇರಲು ಅನುಮತಿ ಬೇಡಿದಳು. ತಂಗಿಯ ಕೋರಿಕೆಯಂತೆ ಮಗನ ಪಾಲನೆಗಾಗಿ ಉಳಿದ ಅತ್ತಿಮಬ್ಬೆ ತಾನು ಹಿರಿಯಳಾದುದರಿಂದ ಹಿರಿದಾದ ದಾರುಣವ್ರತವನ್ನು ಕೈಕೊಂಡು ದೇಹವನ್ನು ಶೋಷಿಸಿ ಕೃಶವಾಗಿಸತೊಡಗಿದಳು—'ಆತನು ವಿರೋಧಮುಂ ತನುವಿರೋಧಮುಮಂ ಒಪ್ಪುಗುಂ ಅತ್ತಿಮಬ್ಬೆಯೊಳ್' (೧–೪೯). ತನ್ನ ಒಡಲನ್ನು ಉಪವಾಸದಿಂದಲೂ, ತನ್ನ ಒಡಮೆಯನ್ನು ಅನವರತದಾನ ದಿಂದಲೂ ತವಿಸಿ ಯಶಸ್ಸನ್ನು ಪಡೆದಳು. ಇವಳು ಧರ್ಮವಿರೋಧಿ ಜನಕ್ಕೆ ಅಸಿಲತೆಯಾದರೆ, ಧರ್ಮದಿಂದ ಶೋಭಿಸುವ ಜನಕ್ಕೆ ಕಲ್ಪಲತೆಯಾದಳು ; ಜಿನ ಧರ್ಮ ಪತಾಕೆಯೆನಿಸಿದಳು. ಇವಳನ್ನು ಹೆಸರಿಸುವುದು ಬಾಲೆಯರಿಗೆ ಮಹಾ ಪುಣ್ಯ ; ಇವಳ ಮಹಾಸತೀತ್ವ ಅವರಿಗೆ ಯಾವ ಕಳಂಕವೂ ತಟ್ಟದಂತೆ ಕಾಪಾಡು ತ್ತದೆ! ಮಾತ್ರವಲ್ಲ, 'ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ/ಬೆಳೆವುದು ಬೇಡಿದಂತೆ ಮಳೆಗೊಟ್ಟುದೆನಿಪ್ಪ ಜಸಕ್ಕೆ ನೋಂತ ಭೂ/ ತಿಲಕ ಪವಿತ್ರೆಯುಂ ಗುಣಪವಿತ್ರೆಯುನಾ ಸತಿಯುಂ ಮಹಾಸತೀ/ತಿಲಕೆಯುನತ್ತಿ ಮಬ್ಬರಸಿಯುಂ ಪೆಸರ್ಗೊಳ್ವುದು ಪುಣ್ಯಕಾರಣಂ' (೧–೭೫) [ಈ ಮಹಾಸತಿ ಇದ್ದ ನಾಡಿನಲ್ಲಿ ಕಿಚ್ಚು ಹಬ್ಬುವುದಿಲ್ಲ. ವಿಷಸರ್ಪ ಮುಟ್ಟುವುದಿಲ್ಲ. (ಭೂ) ರಾಜ್ಯ ವಿಸ್ತರಿಸುತ್ತಾ ಹೋಗುತ್ತದೆ. ಬೇಡಿದಂತೆ ಮಳೆಯಾಗುತ್ತದೆ. ಇಂತಹ ಕೀರ್ತಿಗೆ ಪಾತ್ರಳಾಗಿ ಭೂತಿಲಕ ಪವಿತ್ರೆಯೂ ಗುಣ ಪವಿತ್ರೆಯೂ ಮಹಾಸತೀ ತಿಲಕೆಯೂ ಆದ ಅತ್ತಿಮಬ್ಬೆಯ ನಾಮ ಸ್ಮರಣೆ ಪುಣ್ಯಕಾರಣವಾದುದು.]

'ಅತ್ತಿಮಬ್ಬೆಯ ಶುಭ್ರಶೀಲವನ್ನು ಉಪಮಿಸುವ ಈ ಪದ್ಯವಂತೂ ಧವಳೋಜ್ವಲ ಮೌಕ್ತಿಕ' 'ಬಿಳಿಯರಳೆಯಂತೆ ಗಂಗಾ। ಜಳದಂತೆಸೆವಜಿತ ಸೇನ ಮುನಿಪತಿಯ ಗುಣಾ-। ವಳಿಯಂತೆ ನೆಗಟ್ದ ಕೊಪಣಾ-। ಚಳದಂತೆ ಪವಿತ್ರ ಮತ್ತಿಮಬ್ಬೆಯ ಚರಿತಂ' (೧೨–೬) – [ಅತ್ತಿಮಬ್ಬೆಯ ಚರಿತವು ಬಿಳಿಯ ಹತ್ತಿಯಂತೆ, ಗಂಗಾ ಜಲದಂತೆ, ಅಜಿತಸೇನ ಮುನಿಪತಿಯ ಗುಣಾ ವಳಿಯಂತೆ, ಪ್ರಸಿದ್ಧವಾದ ಕೊಪಣ ಪರ್ವತದಂತೆ ಪವಿತ್ರವಾದುದು]. ಈಕೆಯ ಧರ್ಮಗುಣಕ್ಕೂ ದಾನಗುಣಕ್ಕೂ ಸಾಕ್ಷಿಯಾಗಿದೆ ರನ್ನನಿಂದ ಅಜಿತತೀರ್ಥಕರ

ಪುರಾಣವನ್ನು ಹೇಳಿಸಿದ್ದು. ಇಷ್ಟಲ್ಲದೆ, ಮಣಿಕನಕ ಖಚಿತವಾದ ಒಂದು ಸಾವಿರದ ಐದುನೂರು ಜಿನ ಪ್ರತಿಮೆಗಳನ್ನು ಮಾಡಿಸಿ, ಒಂದೊಂದಕ್ಕೂ ಮಣಿಯ ಘಂಟೆ, ಮೇಲ್ಕಟ್ಟು, ದೀಪಮಾಲೆ, ರತ್ನತೋರಣ ಮೊದಲಾದ ಶ್ರೇಷ್ಠ ಪರಿಕರಗಳೊಂದಿಗೆ ದಾನ ಮಾಡಿದಳಂತೆ! ಶಾಸ್ತ್ರದಂತೆ 'ಒಂದು ಸಾವಿರ ಪ್ರತಿಮೆಗಳನ್ನು ಮಾಡಿಸಿದ್ದರೇ ಸಾಕಾಗಿತ್ತು.' ಆದರೆ ಇನ್ನು ಐದುನೂರನ್ನು ಅಧಿಕವಾಗಿ ಮಾಡಿಸಿದುದು ಆಕೆಯ ಧರ್ಮಾನುರಾಗಕ್ಕೆ ಸಾಕ್ಷಿ. ಇಂತಹ ಅತ್ತಿಮಬ್ಬೆ ಶ್ರವಣಬೆಳಗೊಳದಲ್ಲಿ ಚಾವುಂಡರಾಯನು ಆಗತಾನೇ ಕಡೆಸಿ, ಪ್ರತಿಷ್ಠಾಪಿಸಿದ್ದ ಗೊಮ್ಮಟೇಶ್ವರನನ್ನು ದರ್ಶನ ಮಾಡಲು ಬಂದಾಗ ಈ ಒಂದು ಪವಾಡವೇ ನಡೆದುಹೋಯಿತಂತೆ! 'ಉನ್ನತ ಕುಕ್ಕುಟೇಶ್ವರಜಿನೇಶ್ವರನಂ ಜಿನಭಕ್ತಿ ಪೋಗಿ ಕಾ–।ಣ್ಬನ್ನೆಗಮನ್ನಮಂ ಬಿಸುಟು ಪರ್ವತಮಂ ಪರಿದೇಱಿ ತಜ್ಜಿನಾ–। ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾಱಲಕಾಲ ವೃಷ್ಟಿಯಾ। ಯ್ತೆನ್ನದೊದೇವ ಭಕ್ತಿಗದ ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ (೧-೯೦)–ಮೂರ್ತಿಯನ್ನು ದರ್ಶನ ಮಾಡುವವರೆಗೆ ಅನ್ನವನ್ನು ಮುಟ್ಟುವುದಿಲ್ಲವೆಂಬ ಕಠಿನ ವ್ರತವನ್ನು ಹಿಡಿದು ದೂರದ ಉತ್ತರದ ಚಾಳುಕ್ಯರಾಜಧಾನಿಯಿಂದ ದಕ್ಷಿಣದ ಶ್ರವಣ ಬೆಳ್ಗೊಳಕ್ಕೆ ಪ್ರಯಾಣ ಮಾಡಿ ಬಂದು, ಬೆಟ್ಟವನ್ನೇರಿ ಗೊಮ್ಮಟೇಶ್ವರನ ಸನ್ನಿಧಿಯಲ್ಲಿ ನಿಂತಾಗ ಅಕಾಲವಾದರೂ ಈಕೆಯ ಆಯಾಸ ಪರಿಹಾರಕ್ಕಾಗಿ ಮಳೆ ಕರೆಯಿತು! ದೇವಭಕ್ತಿಯ ವಿಷಯದಲ್ಲಿ ಇದೊಂದು ಆಶ್ಚರ್ಯವೆ? ಪುಷ್ಪವೃಷ್ಟಿಗಳಾಗಲಾರವೆ?

'ಧರ್ಮದುನ್ನತಿಯಂ ಪೆರ್ಚಿಸುವಂದು ನೀನೆ ಪಿರಿಯೈ ಶ್ರೀ ದಾನ ಚಿಂತಾಮಣೀ'!! (೧೨–೮)

ಶೈಲಿ: ಶೈಲಿ ಎಂಬ ಮಾತು ಭಾರತೀಯ ಕಾವ್ಯಮೀಮಾಂಸೆಗೆ ಹೊಸತು ಅಥವಾ ಹೊರತಾದುದು. ಆದರೆ ಇದರ ಭಾವನೆ ನಮ್ಮವರಿಗೆ ಇದ್ದಿಲ್ಲವೆಂತಲ್ಲ. ಇದನ್ನು ಇವರು 'ಮಾರ್ಗ', 'ರೀತಿ' ಎಂಬ ಬೇರೆಬೇರೆ ಮಾತುಗಳಿಂದ ಗುರುತಿಸಿರುವಂತಿದೆ. 'ರೀತಿರಾತ್ಮಾ ಕಾವ್ಯಸ್ಯ' (ರೀತಿಯೇ ಕಾವ್ಯದ ಆತ್ಮ) ಎಂದ ವಾಮನನ ಮಾತಿನಲ್ಲಿ ಇದರ ಮಹತ್ವವನ್ನು ಕಾಣಬಹುದಾದರೂ, ನಮ್ಮ ಆಲಂಕಾರಿಕರು ಅಲಂಕಾರ, ರಸ, ಧ್ವನಿ, ಔಚಿತ್ಯ ಎಂಬ ಬೇರೆಬೇರೆ ಅಭಿಪ್ರಾಯಗಳನ್ನು ವಿಚಾರಮಾಡಿ ಮಂಡಿಸಿರುವುದುಂಟು.

ಪಾಶ್ಚಾತ್ಯರ ದೃಷ್ಟಿಯಲ್ಲಿ 'ಶೈಲಿಯು ಕವಿಯ ಚಿಂತನೆಗಳ ಉಡುಪು' 'ಶೈಲಿಯು ಕವಿಯ ಚಿಂತನೆಗಳ ಚರ್ಮ'–ಈ ಮುಂತಾದ ಮಾತುಗಳ ಮಥನದಿಂದ ಬಂದಿರುವ 'ಶೈಲಿಯು ಕವಿಯ ಚಿತ್ತವೃತ್ತಿಯ ಪ್ರತಿಬಿಂಬ' ಎಂಬ ಮಾತನ್ನು ಒಪ್ಪಬಹುದಾಗಿದೆ.

ರನ್ನ ಪಂಡಿತ ಕವಿ. ತನ್ನ ಕಾಲದ ಸಂಪ್ರದಾಯವನ್ನು ಮುರಿಯದೆ, ತನ್ನ ತನವನ್ನೂ ಕಾಯ್ದುಕೊಂಡಿರುವ ಧೀಮಂತ ಕವಿ. ಅವನ ಶೈಲಿಯ ಮಾತುಗಳನ್ನು ಅವನ ಮಾತುಗಳಿಂದಲೇ ಗುರುತಿಸಬಹುದಾಗಿದೆ. "ಕವಿಮಾರ್ಗದೊಳೊಳಪೊಕ್ಕುಂ। ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸ। ತ್ಕವಿಯೆನಿಕುಂ ಗೂಡಾರದ। ಕವಿಯಂತಿರೆ ಮುಚ್ಚಿಪೊದೆ ಕವಿಯುಂ ಕವಿಯೆ" (೧–೪೭)–ನವರಸಗಳನ್ನು ತೆರೆದು ತೋರಬೇಕು; ಮಾತಿನಲ್ಲಿ ಅಸ್ಪಷ್ಟತೆಯಿರಬಾರದು. 'ರಸಾಂತರಂಗಳಂ ಮುಟ್ಟೆನುಡಿದು ರಂಜಿ'ಸುವ, 'ಎನಿತೊಳವು ಮನದ ಸಂದೆಯಮನಿತುಮಸಂಧಿಗ್ಧಂ' ಎನಿಸುವ 'ಶ್ರುತರಮಣೀಯವಾದ' ಪರಿಣಾಮಕಾರಿ ಶೈಲಿ ರನ್ನನದು. ಈ ಹಿನ್ನೆಲೆಯಲ್ಲಿ 'ಎಲ್ಲ ಸಂದರ್ಭಗಳಲ್ಲಿಯೂ ವರ್ಣನೆ ಅಗತ್ಯಕ್ಕಿಂತ ಹೆಚ್ಚಾದ ಹಾಗೆಯೇ ಕಾಣುತ್ತದೆ. ಪುರಾಣ ಗ್ರಂಥಗಳಲ್ಲಿ ಎಷ್ಟು ವಿವರಗಳನ್ನು ಕೊಡಬಹುದೊ ಅಷ್ಟನ್ನೂ ಹೇಳಬೇಕೆಂಬ ಉತ್ಸಾಹ ಇರುವಹಾಗೆ ಕಾಣುತ್ತದೆ ಕವಿಗೆ–ತನಗೆ ಇವುಗಳೆಲ್ಲ ತಿಳಿದಿವೆ, ಹೇಳುತ್ತೇನೆ ಕೇಳಿ ಎಂಬಂತೆ.' ಈ ಬಗೆಯ ತಿಳಿವಳಿಕೆ ತನಗಿತ್ತು ಎಂದು ತೋರಿಸುವ ಚಪಲವಿರಬೇಕು ಕವಿಗೆ' ಎಂಬೆಲ್ಲ ಮಾತುಗಳೂ ಸಹೃದಯ ದೂರವಾಗುತ್ತವೆ. 'ಆಯಾ ಅಭಿರುಚಿಗೆ ತಕ್ಕಂತೆಪಕ್ಷ ಪಾತ, ಪ್ರೀತಿ ಹೊಮ್ಮೀತು.' ಅಲ್ಲದೆ ಕಾಲಧರ್ಮವನ್ನು ಮರೆಯಲಾದೀತೆ ?

ಸರಸತಿಯನಬಲೆಯಂ ಗೋ–
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ–
ಕ್ಕರಿಗನೆ ಪಾತಕನಾತನೆ
ಸರಸ್ವತೀ ದ್ರೋಹನವನನಾರ್ ಮುಟ್ಟುವರೊ ? (೧–೯೦)

ಅರ್ಥಕ್ಕಾಗಿ ಕುದಿದು ಶಬ್ದಶಕ್ತಿಯನ್ನು ಕಳೆದು ಬಳಸುವುದು ಸರಸ್ವತಿಗೆ ಎಸಗುವ ದ್ರೋಹ. ಆತನು ಅಕ್ಕರಿಗನಲ್ಲ ; ಪಾತಕಿ, ದ್ರೋಹಿ.'

ರಸಮುಂ ಭಾವಮುಮಂ ಕಾ–
ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ

ಪೊಸದೇಸೆಯ ನುಡಿಗಳೊಳಂ
ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿ ರನ್ನಂ (ಗ.ಯು. ೧–೩೯).

ರಸ, ಭಾವ, ಕಾಳಸ (ನೃತ್ಯ ಗತಿಯಂತಹ ನಡೆ), ಕುಣಿಕೆ (ವಿಶೇಷ ರೀತಿಯ ಬಂಧ)ಗಳನ್ನು ತಿಳಿದು ಹೊಸ ಹೊಸ ಸುಂದರ ಪದಗಳನ್ನು 'ಪೊಸಯಿಪ ಬಲ್ಮೆ' ಇರಬೇಕು.

ಕವಿಯ ವರ್ಣನೆಗಳೆಂದರೆ ಸಹಜ, ಸುಂದರ—

ಬಂದಿರೆ ಮಾಮರಂಗಳಿರ ಮಲ್ಲಿಗೆ ಬಂದಿರೆ ಕೋಕಿಲಾಳಿನೀ
ವೃಂದಮೆ ಬನ್ನಿ ಮಿತ್ತ ಶುಕ ನೀಂ ಸೋಕಮೆ ರಜನೀಂದ್ರ ಚಂದ್ರ ಸ್ಯ-
ಪಿಂದಮೆ ಭಂದಿರೇ ಕುಶಲಮೇ ನಿಮಗೆಂದು ಮಧು ಪ್ರವೇಶದೊಳ್
ಬಂದು ಮನೋಜನೇನನಿತುಮಂ ಪೆಸರ್ಗೊಂಡನೊ ಕೂಡಿಕೊಂಡನೊ ॥
(೬–೧೪)

—ಇದು ವಸಂತಾಗಮದ ವರ್ಣನೆ. ವಸಂತದ ಮೋಹಕತೆಗೆ ಅನುಗುಣವಾದ ಉಚಿತೋಕ್ತಿ. ಶಬ್ದ ಗುಣಗಳಾದ ಸಮತೆ, ಮಾಧುರ್ಯ, ಸೌಕುಮಾರ್ಯ ಗಳನ್ನು ಇಲ್ಲಿ ಕಾಣಬಹುದಾಗಿದೆ.

ಮುಗಿಲಂ ಮುಟ್ಟಿತ್ತು ಸೇನಾರಜದೊಡನೆ ಜಯೇಭಧ್ವಜ ಶ್ರೇಣಿ, ದಿಗ್ಭಿ
ತ್ತಿಗಳಂ ಮುಟ್ಟಿತ್ತು ತೂರ್ಯಾರಾವದೊಡನೆ ಬಲಕ್ಷೋಭಶಬ್ದಂ, ಪಯೋರಾ
ಶಿಗಳಂ ಮುಟ್ಟಿತ್ತು ದಾನಪ್ಲವದೊಡನೆ ಪರಕ್ಷೋಣಿಪಾಲಾಂಗನಾದೃ-
ಗ್ವಿಗಳದ್ಬಾಷ್ಪಾಂಬುಧಾರಾ ಪ್ರಸರಮೆನೆ ನೃಪಂ ದಿಗ್ವಿಜಯೋದ್ಯುಕ್ತ
ನಾದಂ ॥ (೯–೧೭)

—ಇದು ದಿಗ್ವಿಜಯೋದ್ಯುಕ್ತನಾದ ಸಗರ ಚಕ್ರವರ್ತಿಯ ಸೇನಾ ಪ್ರಯಾಣದ ವರ್ಣನೆ. ಸೇನೆ ಎಬ್ಬಿಸಿದ ಧೂಳು, ಸೇನೆಯ ಕಲಕಲ ಧ್ವನಿ ಮುಂತಾದುವು ಕಣ್ಣೆದುರಿಗೆ ಚಿತ್ರಿತವಾಗಿವೆ. ಶಬ್ದಗುಣವಾದ ಓಜಸ್ಸು, ಅರ್ಥಗುಣವಾದ ಮಾಧುರ್ಯಗಳು ಸುಂದರವಾಗಿ ಕೂಡಿಬಂದಿವೆ. ಸಹೋಕ್ತಿ ಅಲಂಕಾರವೂ ಸುಂದರವಾಗಿದೆ.

ಮೊಲೆವೆತ್ತ ತೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ (೧-೬೫)

ಎಂಬಲ್ಲಿ ದೇಸಿಯ ಸೊಗಸನ್ನು ಕಾಣಬಹುದಾಗಿದೆ. ಅಂದಿನ ವೀರಯುಗದ ಆಡುನುಡಿ ಬಹುಶಃ ಕಂದಪದ್ಯವಾಗಿ ರೂಪುಗೊಂಡಿದೆ.

ಈ ನಾಟ್ಯದ ಕೆಲದೊಳ್ ನಾ
ಮೇನಂ ರಂಜಿಸುವೆವೆಂದು ನೆಗಟ್ಟೂರ್ವಶಿಯುಂ ।
ಮೇನಕೆಯುಂ ರಂಭೆಯುಮಿನಿ
ಸಾನತ ಮುಖಿಯರ್ಕಳಾಗಿ ಬೆಱಗಾಗಿರ್ದರ್ ॥ (೫-೧೬)

ಎಂಬಲ್ಲಿನ ಪದಲಾಲಿತ್ಯ, ಸ್ಪಷ್ಟತೆ. ಭಾಷಾಸರಳತೆಗಳನ್ನು ಗಮನಿಸಬೇಕು. ಅವಧಾರಣೆ (ಒತ್ತಿ ಹೇಳುವುದು) ಎಂದರೆ ಕವಿಗೆ ತುಂಬ ಪ್ರಿಯ–

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶಾರೀರ ಮಾನಸಾಗಂತುಕ ದುಃ ।
ಖಂಗಳನೆ ಮಾಟ್ಟುವದಱಿಂ
ಪಿಂಗುವೆನಿನ್ನೆನಗೆ ಜಿನನ ಚರಣಂ ಶರಣಂ ॥ (೨-೮೦)

ಅಜಿತ ಪುರಾಣವು ಧರ್ಮ, ಭಕ್ತಿಪ್ರಧಾನವಾದ ಪುರಾಣಕಾವ್ಯ. ಆದರೂ ಪ್ರಸಂಗವಶದಿಂದ ಶೃಂಗಾರ, ಕರುಣ, ಶಾಂತ, ವೀರ ರಸಗಳನ್ನೂ ಭಕ್ತಿ ವಾತ್ಸಲ್ಯಭಾವಗಳನ್ನೂ ಕಾಣಬಹುದಾಗಿದೆ.

ಶೃಂಗಾರ ರಸಕ್ಕೆ–

ಮಸೆದ ಮದನ ಬಾಣಾಟೋಪಮಂ ಕಣ್ಣ ಬೆಳ್ಪೇ–
ಟಿಸಿದ ಮದನ ಚಾಪಾಟೋಪಮಂ ಪುರ್ಬುಗಳ್ ಪೋ–
ಲ್ತೆಸೆಯೆ ವಿಜಯಚಿಹ್ನಂ ಚಿತ್ತಜಂಗೆಂಬಿನಂ ರಂ–
ಜಿಸುವ ವಿಜಯಸೇನಾದೇವಿ ಕಣ್ಗೊಪ್ಪಿ ಬಂದಳ್ ॥ (೩-೧೩)

–ವಿಜಯಸೇನಾದೇವಿ ತಾನು ಕಂಡ ಹದಿನಾರು ಕನಸುಗಳನ್ನೂ ಪತಿಗೆ ಬಿನ್ನವಿಸಿ ಸ್ವಪ್ನ ಫಲವನ್ನು ತಿಳಿಯುವ ಬಯಕೆಯಿಂದ ಬರುತ್ತಿರುವಾಗ ಪತಿಯಾದ ಜಿತಶತ್ರು ಮಹಾರಾಜನ ಕಣ್ಗೊಪ್ಪಿಬಂದ ದೃಶ್ಯ ಇದು.

ಕರುಣರಸಕ್ಕೆ :

ಬಡವರ ಬಂಟನಾವೆಡೆ ದಯಾಪರನಾವೆಡೆ ಧರ್ಮಚಿತ್ರನಾ–
ವೆಡೆ ಶುಭವೃತ್ತನಾವೆಡೆ ಮಹೋದಯನಾವೆಡೆ ಪುಣ್ಯ ಭಾಜನಾ–

ವೆಡೆ ಜನನಾಥನಾವೆಡೆ ಶುಭಾಕರನಾವೆಡೆ ಸತ್ಯವಾಕ್ಯನಾ-
ವೆಡೆ ಗುಣಸಿಂಧುವಾವೆಡೆ ಮನೋರಮನಾವೆಡೆ ಪೇಟಲಾಗದೇ ॥
(೬-೧೨೦)

-ಅಜಿತನಾಥನು ಲೋಕಾಂತಿಕ ದೇವರಿಂದ ಪ್ರತಿಬೋಧಿಸಲ್ಪಟ್ಟು ಚಿತ್ತಶುದ್ಧನಾಗಿ ದೀಕ್ಷೆಯನ್ನು ತೆಗೆದುಕೊಳ್ಳಲು ಆಯೋಧ್ಯಾಪಟ್ಟಣದಿಂದ ಹೊರಹೋದ ಸುದ್ದಿಯನ್ನು ಕೇಳಿದಾಗ, ಆತನ ಅಂತಃಪುರದ ಸಹಸ್ರಾಂಗನೆಯರು ವಿವೇಕ ವಿಕಳೆಯರಾಗಿ ವಲ್ಲಭನನ್ನು ನೆನೆನೆನೆದು ಪ್ರಲಾಪಿಸುತ್ತಿರುವ ಚಿತ್ರ ಇದು.

ಶಾಂತ ರಸಕ್ಕೆ :

ಕರಿಕಲಭಂಗಳ್ ಕರಿಕೇ-
ಸರಿಗಳ್ ವೈರಮನೆ ಬಗೆಯದಹಿನಕುಲಂಗಳ್ ।
ಹರಿಣಚಮೂರಂಗಳ್ ಶಾಂ-
ತರೂಪದಿಂದಿರ್ದುವಜಿತನಾಥನ ಕೆಲದೊಳ್ ॥ (೭-೬)
ವನಮೂಷಕಮಾರ್ಜಾಲಂ
ವನಾಶ್ವಮಹಿಷಂ ವನಾಶ್ವಸೂಕರಮನಿತುಂ ।
ಮುನಿಸಂ ಪರಿಹರಿಸಿರ್ದುವು
ಮುನಿನಾಥಾಂಕಿತದೊಳಂದಿತ ಶಾಂತರಸಂಗಳ್ ॥ (೭-೭)

-ಅಜಿತನಾಥನ ತಪೋಭೂಮಿಯಲ್ಲಿದ್ದ ಕ್ರೂರಜಂತುಗಳೆಲ್ಲ ಆ ಮಹಾನುಭಾವನ ತಪಃ ಪ್ರಭಾವದಿಂದ ತಮ್ಮ ತಮ್ಮ ಜಾತಿವೈರವನ್ನು ತೊರೆದು ಶಾಂತ ರೂಪದಿಂದಿದ್ದುವಂತೆ !

ವೀರ ರಸಕ್ಕೆ :

ಮದಕುಂಭೀರಕುಳ ಪ್ರಚಾರವಿಚಳದ್ವಾಚಾಳವೀಚೀಚಯಾ—
ಸ್ಪದಮಂ ತುಂಗತರಂಗಸಂಗತತರಡ್ಡಿಂಡೀರ ಪಿಂಡಪ್ರಭಾ-
ಸ್ಪದಮಂ ಕೌತುಕದಿಂದೆ ಚಕ್ರಪತಿ ತೀರೋಪಾಂತದೊಳ್ ನಿಂದು ನೋ-
ಡಿದನಾ ಘೂರ್ಣಿತ ದಕ್ಷಿಣಾರ್ಣವಮನಕ್ಷೀಣಾಪದಕ್ಷೀಣಮಂ ॥ (೯-೧೯)

-ಸಗರ ಚಕ್ರವರ್ತಿಯ ದಿಗ್ವಿಜಯ ಪ್ರಸಂಗದಲ್ಲಿ ಶತ್ರುರಾಜರನ್ನು ಎರಗಿಸಿಕೊಂಡು ಬರುತ್ತಾ, ಮುಂದಿನ ಶತ್ರುರಾಜನಾರೆಂದು ನೋಡುತ್ತಿರುವ ದೃಶ್ಯ ಇದು.

ಭಕ್ತಿ ಭಾವಕ್ಕೆ :

ಎರಡನೆಯ ತೀರ್ಥಂಕರನಂ
ಪರಮೇಶ್ವರನಂ ತ್ರಿಲೋಕಚೂಡಾಮಣಿಯಂ ।
ಸುರರೆಲ್ಲಂ ಚೂಡಾಮಣಿ
ಕಿರಣದಿನವನತಕಿರೀಟರಭ್ಯರ್ಚಿಸಿದರ್ (೫–೪)

–ದ್ವಿತೀಯ ತೀರ್ಥಕರ ಕುಮಾರನಿಗೆ ಸಾಧರ್ಮೇಂದ್ರಾದಿ ದೇವೇಂದ್ರರೆಲ್ಲರೂ ಭಕ್ತಿಯಿಂದ ಅಭ್ಯರ್ಚಿಸಿದ ಚಿತ್ರ ಇದು.

ವಾತ್ಸಲ್ಯಭಾವಕ್ಕೆ :

ಉಂಗುಟಮನೆಳವಿ ಕರಚರ
ಣಂಗಳನಿನಿಸೆಳವಿ ಮೆಲ್ಲಮೆಲ್ಲನೆ ಲೀಲಾ
ಪಾಂಗದೊಳೆ ನೋಡಿದಳ್ ರಾ
ಜಾಂಗನೆ ನೃಪಸುತನ ವದನಚಂದ್ರಾಕೃತಿಯಂ ॥ (೫-೫೫)
ಸುತ್ತಣ ಸಭೆ ಕಣ್ಣೆಱಕಮೆ
ಗೆತ್ತು ಪಲರ್ ನೆಱೆದು ನೋಡೆ ನೃಪಸತಿ ಮನದೊಳ್
ಕೂರ್ತು [ಪಿರಿಯಲ್] ಬಗೆದು ಜಿ
ನೋತ್ತಮನೆಂದಂಜಿ ಮಾಣ್ದಳಾಸ್ಥಾಯಿಕೆಯೊಳ್ ॥ (೫-೫೬)

–ತಾಯಿ ಮಗನ ಉಂಗುಟ ಕೈಕಾಲುಗಳನ್ನು ನೇವರಿಸುತ್ತಾ ಮೆಲ್ಲಮೆಲ್ಲನೆ ಸಂತಸದ ಕಡೆಗಣ್ಣೋಟದಿಂದ ಮಗನ ಮುಖ ಚಂದ್ರನನ್ನು ನೋಡಿದಳು. ಸುತ್ತಣ ಸಭೆಯಲ್ಲವೂ ಮಗುವನ್ನು ನೋಡುತ್ತಿರುವುದನ್ನು ಕಂಡು, ತಾಯ ಕರುಳು ಮಗವಿಗೆ ದೃಷ್ಟಿಯಾಗದಿರಲೆಂದು ನಟಿಕೆ ಮುರಿಯಲೆಳಸುತ್ತದೆ. ಕೂಡಲೆ ಜಿನಶಿಶುವಲ್ಲವೆ ಎಂಬ ಎಚ್ಚರ ಬಂದು ಸುಮ್ಮನಾಗುತ್ತಾಳೆ, ತಾಯ್ತನದ ಎಂತಹ ಸುಂದರ ಚಿತ್ರ ಇದು !

ರನ್ನನ ವೈರಾಗ್ಯ ಬೋಧೆ ಹೀಗಿದೆ–

ಮತಿಗೆಟ್ಟು, ಜೀವ ಧರ್ಮಾ–
ಮೃತಮಂ ಸೇವಿಸದಧರ್ಮವಿಷಮಂ ಸೇವಿಸಿ ದು–
ರ್ಗತಿಗಿಳಿದೀ ಜೀವನೆಂಬಱ
ಸಿ ತಿಂಬ ದೈವಕ್ಕೆ ಪೋಗಿ ಪಾಳಂಬಡುವೈ (೨-೫೮)

—ಎಲೈ ಜೀವನೆ, ನೀನು ಧರ್ಮಾಮೃತವನ್ನು ಸೇವಿಸದೆ ಮತಿಗೆಟ್ಟು ಅಧರ್ಮವನ್ನು ಸೇವಿಸುತ್ತಾ ದುರ್ಗತಿಗೆ ಇಳಿದು ಯಮನೆಂಬ ಹುಡುಕಿ ತಿನ್ನುವ ದೈವಕ್ಕೆ ಆಹುತಿಯಯಗಿ ಹೋಗುವೆಯಲ್ಲಾ !

ಎನಿತೆನಿತು ಕಳಿದ ಭವಮಂ
ನೆನೆದಪೆ ? ಯೆನಿತೆನಿತು ಭವದ ಬಂಧುಗಳಂ ನೀ
ನೆನೆದಪೆ ? ಯೆನಿತೆನಿತೊಡಲಂ
ನೆನೆದಪೆ ಯೆಲೆಜೀವ ? ನೀನೆ ಪೇಳ್ ಪವಣೊಳವೆ ? (೨-೬೦)

—ಎಲೈ ಜೀವವೆ, ನೀನು ಕಳೆದು ಬಂದಿರುವ ಎಷ್ಟು ಜನ್ಮಗಳನ್ನು ನೆನೆಯುತ್ತಿ ? ಎಷ್ಟು ಜನ್ಮದ ಬಂಧುಗಳನ್ನು ನೆನೆದುಕೊಳ್ಳುತ್ತಿ ? ಎಷ್ಟು ದೇಹಗಳನ್ನು ಸ್ಮರಿಸಿಕೊಳ್ಳುತ್ತಿ ? ನಿನಗೆ ಸಾಧ್ಯವೆ ನೀನು ಹೇಳು ?

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶರೀರ ಮಾನಸಾಗಂತುಕ ದುಃ
ಖಂಗಳನೆ ಮಾಳ್ಪವದಱಿಂ
ಪಿಂಗುವೆನಿನ್ನೆನಗೆ ಜಿನನ ಚರಣಂ ಶರಣಂ (೨-೮೦)

—ಯಾವುವು ಮನ್ಮಥನ ಸುಖ ಸಾಮ್ರಾಜ್ಯವೆಂಬ ಸುಖಸಾಧನಗಳೊ ಅವು ಶರೀರ ಮತ್ತು ಮನಸ್ಸುಗಳ ದುಃಖಗಳನ್ನೇ ತರುತ್ತವೆ. ಆದ್ದರಿಂದ ಅವುಗಳನ್ನು ತ್ಯಜಿಸುತ್ತೇನೆ. ಭಗವಂತನ ಚರಣವೇ ನನಗೆ ಶರಣ.

ಕವಿಯ ಚೇತನ ಎಷ್ಟು ಸುಸಂಸ್ಕೃತವಾದುದು ! ಎಂತಹ ವೇದನೆಯನ್ನು ಅನುಭವಿಸುತ್ತಾ ಕವಿ ಬರೆಯುತ್ತಿದ್ದಾನೆ ! ಹೇಗೆ ನಮ್ಮ ಮನಸ್ಸನ್ನು ಸೆರೆಹಿಡಿದು ವಶವರ್ತಿಯಾಗಿ ಮಾಡಿಕೊಳ್ಳುತ್ತಿದ್ದಾನೆ ! ಇಡೀ ಕನ್ನಡ ಸಾಹಿತ್ಯದಲ್ಲಿಯೇ ಇಂತಹ ವರ್ಣನೆ ಅತ್ಯಪೂರ್ವ. ಕವಿಯ ಆತ್ಮರೋದನವೇ ಇಲ್ಲಿ ಹೆಪ್ಪುಗಟ್ಟಿ ಕುಳಿತಿದೆ.

ಅಲಂಕಾರಗಳನ್ನು ಉದ್ದೇಶಪೂರ್ವಕವಾಗಿ ತಂದುಕೊಳ್ಳುವ ಚಪಲ ರನ್ನನಿಗಿಲ್ಲ. ಇವನಲ್ಲಿ ಕಾಣುವ ಅಲಂಕಾರಗಳೆಲ್ಲವೂ ಸಹಜವಾಗಿ ಮೂಡಿ ಬಂದಂತಹವು. ಮಧುಮಾಸವನ್ನು ಕೇಸರಿಗೆ ರೂಪಣ ಮಾಡಿರುವುದನ್ನು ನೋಡಿ—

ಎಳವೆಱು ದಾಡೆ ಕೆಂದಳಿರೆ ನಾಲಗೆ ಮಾಮರನಳ್ಳಿಗೊಂಬಿನೊಳ್
ಮಿಳಿರ್ವೆಳವಳ್ಳಿ ಬಾಲಮಲರ್ಗೊಂಚಲೆ ಕೇಸರಮೆಂಬಿನಂ ಮನಂ
ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
ಗೊಳಿಸಿದುದುತ್ಕರ ಕೀರಮದಕೋಕಿಲಗರ್ಜಿತತರ್ಜಿತಂಗಳಿಂ ॥ (೬-೨೩)

–ಮಧುಮಾಸವೆಂಬ ಕೇಸರಿಯು ವಿಯೋಗಿಗಳೆಂಬ ಮೃಗಂಗಳಿಗೆ ಹೇಗೆ ಭಯವನ್ನುಂಟು ಮಾಡಿತೆಂದು ಸುಂದರವಾಗಿ ನಿರೂಪಿಸಲಾಗಿದೆ.

'ಸ್ವಭಾವೋಕ್ತಿ—ಕವಿಗೆ ತುಂಬ ಮೋಹಕ'—

ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂ–
ಡಲಯುಗ ಮುತ್ತು ಕಾಲ್ಗಡಗಮುಂದುಗೆ ಕಂಕಣ ಕಿಂಕಿಣೀಗಣಂ
ಕಲಮಣಿನೂಪುರಂ ತನಗೊಡಂಬಡೆ ಗಾಡಿಗೆ ಲೋಳೆವಾಯ್ ಮನಂ
ಗೊಳೆ ಭುವನೈಕಮಂಡನನೊಳೇನೆಸೆದಿರ್ದುದೊ ಬಾಲ ಮಂಡನಂ ॥ (೫–೬೨)

ಒಂದೆರಡು ಅಕ್ಷರವನ್ನೊ ಒಂದು ಪದವನ್ನೊ ಪುನಃ ಹೇಳುವ ಯಮಕ–ಪರ್ಯಾರ ರನ್ನನಲ್ಲಿ ಬಹು ಸ್ವಾರಸ್ಯದಿಂದ ಕೂಡಿದೆ—

ನೃಪವನಿತಯ ರೂಪವರ್ಗಾಪಾಶ್ಚರ್ಯ ರೂಪಂ ; ಆತ್ಮನಂತೆ ಪೇಟ್ ಆತ್ಮ ವಂಚಕರ್ ಪೆಱರೊಳರೇ ; ನಂದನಂದ ಜಯಜಯ ರವಂಗಳತಿ ಮಧುರಂಗಳ್ ;

ದಾರಕರೂಪದೆ ಜಿನಪ್ಪಂ
ದಾರಕನೊಡನೊಡನೆ ಬಾಲಕೇಳಿಗಳಂ ಪ್ರಿಂ–
ದಾರಕರೆ ಮಾಡಿ ದುರಿತವಿ–
ದಾರಕನ ಮನಕ್ಕೆ ಮಾಡಿದರ್ ಸಂತಸಮಂ ॥ (೫–೭೨)

'ಸಮಾನ ಶೀಲ ವ್ಯಸನೇಷು ಸಖ್ಯಂ' (೧೦–೫೨ವ) 'ತನ್ನಷ್ಟಂ ಯನ್ನ–ದೀಯತೇ' (೧–೬೪) ಎಂಬೀ ಸಂಸ್ಕೃತ ವಾಕ್ಯವೇಷ್ಟನಗಳನ್ನು ಬಳಸಿರುವುದನ್ನೂ ಪ್ರಸಂಗಾನುಗುಣವಾಗಿ ಔಚಿತ್ಯ ಪೂರ್ಣವಾಗಿ ಶೈಲಿ ಸಂಸ್ಕೃತ ಭೂಯಿಷ್ಟವಾಗಿರುವುದನ್ನೂ ಕಾಣಬಹುದಾಗಿದೆ. ಇದನ್ನು ದೋಷವೆಂದು ಬಗೆಯಲಾಗದು.

ಧರ್ಮಾಪೇಕಾಗಸಂ, ಬಾಲೆಯರಂ ಖಳಕಲಂಕಮೇಂ ಪೊರ್ದುಗುಮೇ, ಪಿಕ್ಕುವೊಡತ್ತಿಯ ಪಣ್ಣಿತ್ತಿಮಬ್ಬೆಯಲ್ಲದರ ಗುಣಂ—ಈ ಮುಂತಾದ ಅವನ ಮಾತುಗಳು ಗಾದೆ ಮಾತುಗಳಂತೆ ಭಾವಿಸಲು ಯೋಗ್ಯವಾಗಿವೆ.

ರನ್ನನು ಪಂಪನ ಪ್ರಭಾವಕ್ಕೆ ಒಳಪಟ್ಟವನು ; ಆತನ ಪರಂಪರೆಯನ್ನು ಅತ್ಯಂತ ಶಕ್ತವಾಗಿ ಮುಂದುವರಿಸಿದವನು.

ಲಲಿತಲತಾಲಯಂಗಳಿರಾ ! ಸುಂದರಕಾನನಚಂದನದ್ರುಮಂ
ಗಳಿರ ! ತಳಿರ್ತಶೋಕೆಗಳಿರ ! ಸಹಕಾರತಮಾಲಭೂರುಹಂ
ಗಳಿರ ! ವಿಯೋಗಮಾದುದೆಮಗಂ ನಿಮಗಂ ಬೆಸಕೆಯ್ವೆಮೆಂದು ವಿ-
ಹ್ವಳೆಯರಗಲ್ಕೆಯೊಳ್ ನೆಗಸಿದರ್ ಬಸಮಲ್ಲದ ಬಾಷ್ಪವಾರಿಯಂ ॥

(ಅ. ೬-೧೧೧)

ಎಂಬ ಅಜಿತನ ಅಂತಃಪುರದ ಸೆಸಸ್ತ್ರಾಂಗನೆಯರು ವ್ಯಾಕುಳೆಯರಾಗಿ, ವಿವೇಕ ವಿಕಳೆಯರಾಗಿ ಪ್ರಲಾಪಿಸುತ್ತಿರುವ ಪದ್ಯ ಪಂಪನ

ಸುರತರು ನಂದನಂಗಳಿರ ! ರತ್ನಪಿನದ್ಧ ವಿಮಾನ ಕೂಟ್ಟಿಮಾಂ-
ತರ ಸುರತಾಲಯಂಗಳಿರ ! ಚಾರು ವಿಲೋಲ ಕಟಾಕ್ಷಪಾತ ಸೌಂ-
ದರ ಪರಿವಾರ ದೇವಿಯರಿರಾ ! ಕಡುಕಯ್ದು ಕೃತಾಂತನಿಂತು ನಿ_
ರ್ನೆರಮೆಟಿಿದುಯ್ಯೆ ಬಾರಿಸದೆ ಕಿಮ್ಮನುಪೇಕ್ಷಿಸಿ ನೋಡುತಿರ್ಪಿರೇ ॥

(ಆ. ಪು. ೨-೬೪)

ಎಂಬ ಲಲಿತಾಂಗನ ದೇವಲೋಕಚ್ಯುತಿಯವಸರದ ಪದ್ಯವನ್ನು ನೆನಪಿಗೆ ತರುತ್ತ ಈ ಹೇಳಿಕೆಯನ್ನು ಸಮರ್ಥನೀಯವೆನಿಸಿದೆ. ಅಲ್ಲದೆ, ಶ್ರೀಮತಿ ವಜ್ರಜಂಘರ ವಿವಾಹಾನಂತರ ಮಗಳನ್ನು ಬೀಳ್ಕೊಡುತ್ತಿರುವ ತಂದೆತಾಯಿಯರ ದುಃಖವನ್ನು ಬಂಧುಬಳಗದವರ ದುಃಖವನ್ನು ತೋರಂತ್ತಿರುವ 'ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ' (ಆ. ಪ್ರ. ೪-೫೭) ಎಂಬ ಮಾತನ್ನೇ ರನ್ನನು ಅಜಿತನ ಅಂತಃಪುರಸ್ತ್ರೀಯರು ತಮ್ಮ ಪತಿ ದೀಕ್ಷಾಮುಖನಾದುದನ್ನು ಕೇಳಿ ಗೋಳಿಡುತ್ತಾ, ಹಲವು ಬಗೆಯಾಗಿ ಹಲಬುತ್ತಾ, ಉದ್ಯಾನಕ್ಕೆ ಬಂದು ತಾವು ನೀರೆರೆದು ಬೆಳೆಸಿದ ಮರಗಳಿಗೆ ಕೈಮುಗಿದ ಸಂದರ್ಭದ ಪದ್ಯಕ್ಕೆ (೬-೧೧೧) ಹೊಂದಿಸಿಕೊಂಡಿರುವುದು ಸಮುಚಿತವಾಗಿದೆ. ಅಜಿತನಿಲ್ಲದೆ ತಮಗೆಲ್ಲವೂ ಶೂನ್ಯ ವೆಂದು ರೋದಿಸುವಾಗಿನ 'ಏನೆಮ್ಮ ಮನಮೆ ಶೂನ್ಯಂ। ನೀನಿಲ್ಲದ ರಾಜ ಮಂದಿರಂ ಶೂನ್ಯಮಯೋ। ಧ್ಯಾನಗರಂ ಶೂನ್ಯಮಖಿಳಾ। ಸ್ಥಾನಂ ಶೂನ್ಯಂ ತ್ರಿಲೋಕ ಮಂಡನ ತಿಲಕಾ' (೬-೧೧೫) ಎಂಬ ಪದ್ಯ ಅವನದೇ 'ಗದಾಯುದ್ಧ'ದ 'ಎನಗೆ ಮನಮಿಂದು ಶೂನ್ಯಂ। ಮನೆಶೂನ್ಯಂ ಬೀಡು

ಶೂನ್ಯಮಾದುದು ಸಕಲಾ। ವನಿ ಶೂನ್ಯಮಾಯ್ತು ದುಶ್ಶಾ-। ಸನನಿಲ್ಲದೆ ಕರ್ಣ ನಿಲ್ಲದಾನೆಂತಿರ್ಪೆಂ ' (ಗ.ಯು. ೩-೬೯) ಎಂಬ ದುರ್ಯೋಧನನ ವಿಲಾಪವನ್ನು ನೆನಪಿಗೆ ತರುತ್ತದೆ.

**ಸಂದೇಶ :** " ಪುರಾಣಗಳು ಪ್ರಾಚೀನವಾದರೂ ನಿತ್ಯನೂತನವಾಗಿವೆ., ಅವುಗಳಲ್ಲಿ ಎಂದೆಂದಿಗೂ ಹಳೆಯದಾಗದ ಸತ್ಯಗಳು, ಮನೋವೈಜ್ಞಾನಿಕ ತತ್ವ ಗಳು ತುಂಬಿವೆ; ಪ್ರತಿಯೊಬ್ಬ ಮಾನವನಲ್ಲಿಯೂ ಪುರಾಣಮಾನವ ನೆಲೆಸಿದ್ದಾನೆ. ಆದುದರಿಂದಲೇ ಎಂದೆಂದಿಗೂ ಈ ಪುರಾಣ ಕಥೆಗಳು ನೀಡುವ ಅಮೃತ ಸಂದೇಶದ ಧಾರೆಗಳು ಇಂದಿಗೂ ಆಪ್ಯಾಯಮಾನವಾಗುತ್ತವೆ."

ಪಾಪಮಿದು ಪುಣ್ಯಮಿದು ಹಿತ-
ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ-।
ಖೋಪಾತಮಿದೆಂದಱಿಪುಗು-
ಮಾ ಪರಮ ಕವಿ ಪ್ರಧಾನರಾ ಕಾವ್ಯಂಗಳ್ ॥

ಕವಿರಾಜಮಾರ್ಗದ ಈ ಮಾತು ಜೈನಪುರಾಣಗಳನ್ನು ಕುರಿತೇ ಹೇಳಿದಂತಿದೆ. ಈ ಕಾವ್ಯಗಳನ್ನಾದರೂ ಪ್ರಭು ಸಮ್ಮಿತದಿಂದ ಹೇಳದೆ ಕಾಂತಾ ಸಮ್ಮಿತದಿಂದ ಕಥಾರೂಪದಲ್ಲಿ ಹೇಳಿರುವುದು ಇಲ್ಲಿನ ವೈಶಿಷ್ಟ್ಯ. ಜೈನಧರ್ಮ ಜಗತ್ತಿಗೆ " ಅಹಿಂಸಾ ಪರಮೋ ಧರ್ಮಃ ", " ಜೀವದಯೆ ಜೈನಧರ್ಮಂ ", " ಧರ್ಮೋ ನಾಸ್ತಿ ದಯಾಪರಃ ", ಎಂದು ಬೇರೆಲ್ಲ ಧರ್ಮಗಳಿಗಿಂತ ಹೆಚ್ಚು ಒತ್ತುಕೊಟ್ಟು ಎತ್ತಿ ಹಿಡಿದುದು ; ವಿಶ್ವ ಭ್ರಾತೃತ್ವವನ್ನು ಸಾರಿದುದು ; ವಿಶ್ವಶಾಂತಿಯನ್ನು ಪ್ರಚಾರಮಾಡಿದುದು. " ಲೋಕಾಸ್ಸಮಸ್ತಾ ಸುಖಿನೋ ಭವಂತು " ಎಂಬುದೇ ಇದರ ಆಶಯ. " ಸತ್ವೇಷು ಮೈತ್ರಿಂ, ಗುಣಿಷು ಪ್ರಮೋದಂ । ಕ್ಲಿಷ್ಟೇಷು ಜೀವೇಷು ಕೃಪಾಪರತ್ವಂ " (ಯಾವಾಗಲೂ ಪ್ರಾಣಿಗಳಲ್ಲಿ ಮಿತ್ರಭಾವವನ್ನೂ ಗುಣವಂತರಲ್ಲಿ ಪ್ರೀತಿಯನ್ನೂ, ದುಃಖಪಡುವ ಜೀವಗಳಲ್ಲಿ ದಯಾಭಾವವನ್ನೂ (ನನ್ನ ಆತ್ಮನು ಮಾಡಲಿ) ಎಂಬುದು ದಿನನಿತ್ಯಧ ಬಯಕೆ. ಇಂತಹ ಜೈನ ಧರ್ಮದ ಪುರಾಣಗಳು ಜನತೆಗೆ ಇದನ್ನೇ ಕೊಡಬೇಕಲ್ಲವೆ ?

ಜೈನಧರ್ಮವು ಸಮ್ಯಕ್ ಚಾರಿತ್ರಕ್ಕೆ ಪ್ರಾಧಾನ್ಯವಿತ್ತಂತೆಯೆ ಸದಾ ಲೋಚನೆ, ಸದ್ಭಾವನೆಗೂ ಪ್ರಾಶಸ್ತ್ಯವಿತ್ತಿದೆ. ಇದೇ ಜೈನ ಕರ್ಮ ಸಿದ್ಧಾಂತದ

ಅಡಿಗಲ್ಲು. ಜೀವ ಕಷ್ಟದ ಕುಲುಮೆಗೆ ಸಿಕ್ಕಿ ಸುಟ್ಟು ಸಂಕಟವನ್ನು ಅಪಾರವಾಗಿ ಅನುಭವಿಸಿದಷ್ಟೂ ಕರ್ಮದ ಕಿಲ್ಬಿಷ ಬೇಗ ಸವೆಯುತ್ತದೆ. ಈ ಮಾತನ್ನು ಒಂದು ತತ್ವವಾಗಿ ಸ್ವೀಕರಿಸಿಲ್ಲದಿದ್ದರೂ, ಪ್ರಯೋಗದಲ್ಲಿ ಕಾಣಬಹುದಾಗಿದೆ. "ಕೇವಲ ಪಾರ್ಥಿವ ಸುಖ ಸಂತೋಷಗಳಲ್ಲಿ ಮಗ್ನವಾಗಿ ಧರ್ಮಕ್ಕೆ ಎಡೆ ಗೊಡದೆ ಜೀವನದಲ್ಲಿದ್ದವರು ಧರ್ಮದ ಕಡೆ ಓಲುವುದೇ ಒಂದು ಮಹಾಘಟನೆ. ಇದೇ ಕಾಲಲಬ್ಧಿ. ಆವರೆಗಿನ ತಮ್ಮ ಬದುಕು ತಪ್ಪಾಯಿತು, ಸರಿಯಾವ ದಾರಿ ಯಲ್ಲಿ ನಡೆದುಕೊಳ್ಳಬೇಕು ಎಂದು ಅರಿತು, ಕಳೆದ ವ್ಯರ್ಥವಾದ ಆ ಬದುಕಿಗೆ ಪಶ್ಚಾತ್ತಾಪ ಪಟ್ಟು ಉತ್ತಮ ಧರ್ಮಸ್ವರೂಪವನ್ನು ವಿವರವಾಗಿ ಅರಿತು, ಚಾರಿತ್ರದಲ್ಲಿ ಅದನ್ನು ಸಾಧಿಸುವ ಚಿತ್ರ" ಜೈನ ಪುರಾಣಗಳ ಹಿನ್ನೆಲೆ. ಹೀಗೆ ಕಾಲಲಬ್ಧಿಯನ್ನು ಪಡೆದ ಮೇಲೂ ಅರಿತೋ ಅರಿಯದೆಯೋ ಚೇತನ ಮೇಲಕ್ಕೇರುತ್ತದೆ, ಉದ್ಧಾರದ ಹೆದ್ದಾರಿಯಲ್ಲಿಯೇ ನಡೆಯುತ್ತದೆ; ಕುಂಟಿ ದರೂ ಮುನ್ನಡೆಯುತ್ತದೆ. ಹೀಗೇ ಹಲವು ಜನ್ಮಗಳನ್ನು ಎತ್ತಿದ್ದಿಲ್ಲವೆ ? ಇನ್ನು ಈ ಮೊದಲು ಅದೆಷ್ಟು ಜನ್ಮಗಳನ್ನು ಎತ್ತಿರಬೇಡ ? ಮರೀಚಿ ಜನ್ಮದಲ್ಲಿ ತನ್ನ ತಾತ ವೃಷಭನೊಂದಿಗೆ ದೀಕ್ಷೆ ತೆಗೆದುಕೊಂಡ ಜೀವ ವ್ರತಭಂಗ ಮಾಡಿದುದ ರಿಂದಷ್ಟೇ ಅದೆಷ್ಟು ಜನ್ಮಗಳನ್ನೆತ್ತಿ ಕಡೆಗೆ ಮಹಾವೀರ ತೀರ್ಥಂಕರನಾದನೆಂಬು ದನ್ನು ನೆನೆದಾಗ ವ್ರತಾಚರಣೆಯ ಮಹತ್ವ ಎಷ್ಟೆಂದು ಹೇಳಬೇಕೆ ? ಮಾನವ ಉತ್ತಮ ಆಚರಣೆಯಿಂದ ಶ್ರೇಷ್ಠ ಮಾನವನಾಗಿ ಇಹದಲ್ಲಿ ಬಾಳಿ ಪರಕ್ಕೂ ಹತ್ತಿರವಾಗಬಹುದಲ್ಲವೆ ? ಇಂತಹ ಉದಾತ್ತ ಆಚರಣೆ ಇಂದಿನ ಸಮಾಜಕ್ಕೆ ಅದೆಷ್ಟು ಅಗತ್ಯವಾಗಿದೆ ಎಂಬುದನ್ನು ಬೇರೆ ಹೇಳಬೇಕೆ ?

ವಿಮಲವಾಹನನ ಪ್ರಸಂಗವನ್ನೇ ನೋಡಿ. ಜೀವನದಲ್ಲಿ ಏನೊಂದೂ ಕೊರತೆಯಿಲ್ಲದೆ, ಸುಖಲೋಲುಪ್ತನಾಗಿದ್ದ ಜೀವ–ವಿಮಲವಾಹನದೊರೆ ರಾಜ್ಯ ಭೋಗಗಳನ್ನು ತೊರೆದು ತಪಸ್ಸಿಗೆ ಹೋದುದು ತನ್ನ ಮುಖದ ಮೇಲೆ ಕಾಣಿಸಿ ಕೊಂಡ ಒಂದು ನೆರೆಗೂದಲ ಕಾರಣದಿಂದಷ್ಟೇ! ಅಜಿತನಾಥನು ಚಂದ್ರಿಕಾ ವಿಲಾಸದಲ್ಲಿ ಓಲಗಗೊಟ್ಟು ದಿಕ್ಕುಗಳನ್ನು ಅವಲೋಕಿಸುತ್ತಿರುವಾಗ, ಅವನ ಬದುಕಿಗೊಂದು ಹೊಸ ತಿರುವನ್ನು ನೀಡುವಂತೆ ನಭದಿಂದ ಉಲ್ಕಾಪಾತವಾಗು ತ್ತದೆ. ಅದನ್ನು ಕಂಡ ಅಜಿತನ ಮನಸ್ಸಿನಲ್ಲಿ ವಿಮಲವಾಹನ ಭವದ ನಿರ್ವೇಗ ಗಳು ಪಲ್ಲವಿಸುತ್ತವೆ. ಲೌಕಿಕ ಸುಖಭೋಗಗಳು ಎಷ್ಟು ಕ್ಷಣಿಕ ಎಂದು ಪರಿ ಭಾವಿಸುತ್ತಾನೆ. (೬–೫೦). "ಕರುಣಿಸದೆ ಕೃತಾಂತಂ ಗೋಣ್ಮುರಿಗೊಂಡೆಟಿ

ದೊಪ್ಪ್ವ ಪದದೊಳ್ . ........ಧರ್ಮಮೆ ಕಾಗುಂ" (೬-೫೧) ಎಂದು ನಿರ್ಧರಿಸುತ್ತಾನೆ. ಈ ಘಟನೆಗಳನ್ನು ಪ್ರತಿಮಾ ದೃಷ್ಟಿಯಿಂದ ನೋಡುವಾಗ ಅಂದಿಗಿಂತ ಇಂದಿಗೇ ಇದು ಚೆನ್ನಾಗಿ ಅನ್ವಯಿಸುತ್ತವೆ. ಅಧಿಕಾರಕ್ಕೆ ಅಂಟಿ ಕೊಂಡೇ ಆಳಿಯಬೇಕೆಂಬ ಹಂಬಲದವರಿಗೆ ಒಂದು ವಿಡಂಬನೆಯಾಗಿದೆ ಎನಿಸದೆ ? ಇಹ ಒಂದೇ ಅಲ್ಲ, ಪರವೂ ಒಂದಿದೆ. ಅದನ್ನು ಸಾಧಿಸುವತ್ತ ಮಾನವ ಕರ್ತವ್ಯ ಪರನಾಗಬೇಕು, ಎಂಬ ಸಂದೇಶವನ್ನು ಇದು ಸಾರುತ್ತಿದೆ. ಹೀಗೆ ಹಿರಿಯರ ಜೀವನದಿಂದ ಕಂಡುಕೊಳ್ಳುವ ಶ್ರಮವೂ ಬೇಡವೆಂದು ಪಂಪ ಮಹಾಕವಿ ತನ್ನ ಆದಿಪುರಾಣದ ಮೂಲಕ ಜನತಗೆ-ಮಾನವ ಕುಲಕ್ಕೇ ನೀಡುತ್ತಿರುವ 'ಸಂದೇಶ 'ಸುಲಿದ ಬಾಳೆಯ ಹಣ್ಣಿನಂದದಿ' ಹೀಗಿದೆ—

> ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ-
> ಬಿವೆ ಮೆಯ್ಯಾಗಿರೆ ಸಂದ ಧರ್ಮಮೆವಲಂ ಪೊತ್ತೆತ್ತುಗುಂ ಮುಕ್ತಿ ಪ-
> ರ್ಯವಸಾನಂಬರಮಾನುಷಂಗಿಕ ಫಲಂ ಭೂಪೇಂದ್ರ-ದೇವೇಂದ್ರರಾ-
> ಜ್ಯ ವಿಳಾಸಂ...................................(೨-೭)

—'ಸಂಸಾರ ಸಾಗರದಲ್ಲಿ ನಿಮಗ್ನರಾದವರನ್ನು ದಯೆ ದಮ ದಾನ ತಪ ಮತ್ತು ಶೀಲಗಳ ರೂಪದಿಂದ ಮೈವಡೆದ ಧರ್ಮವೇ ಮುಕ್ತಿಯು ಕೈಗೆಟಕುವವರಗೆ ಮೇಲಕ್ಕೆತ್ತುವುದು. ಭೂಪೇಂದ್ರ ದೇವೇಂದ್ರ ರಾಜ್ಯವಿಲಾಸವೂ ಈ ಧರ್ಮದ ಗೌಣ ಫಲವೇ ಹೊರತು ಮುಖ್ಯ ಫಲವಲ್ಲ.' ಎಷ್ಟು ಸರಳ ! ಸುಂದರ ! ! ಸಾರ್ವತ್ರಿಕ ! ! ಸಾರ್ವಕಾಲಿಕ !!

**ಉಪಸಂಹಾರ :** ರನ್ನನನ್ನು ಕುರಿತು ಹಲವು ವಿಮರ್ಶೆಗಳು ಬಂದಿವೆ. ಅವೆಲ್ಲದರಲ್ಲಿ ಕವಿಯ ಸ್ಥಾನವನ್ನು ನಿಶ್ಚಯಿಸುವ ಮಾತುಗಳೆಲ್ಲವೂ ಆತನ ಗದಾಯುದ್ಧ ಕಾವ್ಯವನ್ನು ಮಾತ್ರವೆ ಗಮನಿಸಿ ಹೇಳಿದಂತಹವೇ-ಉ : 'ರನ್ನನಲ್ಲಿ ಲೌಕಿಕ ವ್ಯಕ್ತಿತ್ವವೇ ಪ್ರಧಾನ ಹಾಗೂ ಪ್ರಧಾನಿ'. ಅಜಿತಪುರಾಣವನ್ನು ಗಂಭೀರವಾಗಿ ಯಾರೂ ಗಮನಿಸಿದಂತಿಲ್ಲ, ಇದೊಂದನ್ನೇ ಗಮನಿಸಿ ಹೇಳುವು ದಾದರೆ 'ರನ್ನ ಪ್ರತಿಭಾವಂತನಾದ ಸ್ವತಂತ್ರ ವ್ಯಕ್ತಿತ್ವವುಳ್ಳ ಶ್ರೇಷ್ಠಕವಿ, ವರಕವಿ. ಆತನ ಅಜಿತಪುರಾಣ-ಮಹಾಪುರಾಣವನ್ನು ಆಕರವನ್ನಾಗಿಟ್ಟುಕೊಂಡಿ ದ್ದರೂ ಕನ್ನಡದ ಜೈನ ಪುರಾಣಕಾವ್ಯಗಳಲ್ಲಿ ಶ್ರೇಷ್ಠಕಾವ್ಯ ; ಮೊತ್ತದಲ್ಲಿ ಕಿರಿ ದಾಗಿದ್ದರೂ, ಸತ್ವದಲ್ಲಿ ಹಿರಿದಾಗಿದೆ'.

## ಪ್ರಾರ್ಥನೆ

# ಉದ್ಯೋತಿಸುಗೆ ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ

ಶ್ರೀಮನ್ನಮ್ರಾಮರೇಂದ್ರಾರುಣ ಮಣಿಮಕುಟದ್ಯೋತಿ ಬಾಲಾರ್ಕಲೀಲೋ
ದ್ದಾಮಂ ಕಾಶ್ಮೀರರಾಗಂ ತನಗೆ ವಿನತನಾಗೇಂದ್ರ ಹಸ್ತಾರುಣಾಬ್ಜಂ
ಹೈಮಂ ಕರ್ಣಾವತಂಸಂ ತನಗೆನೆ ಕರಮೊಪ್ಪಿರ್ದೊಳಾರ್ಹಂತ್ಯಲಕ್ಷ್ಮೀ
ಧಾಮಂ ಮಾೞ್ಕೆಮ್ಮ ಹೃತ್ಪದ್ಮಮನಜಿತಜಿನೇಂದ್ರಕ್ರಮಾಂಭೋರುಹಶ್ರೀ ೧

ಜಿನವೃಂದಾರಕರಿರ್ಪ
ತ್ತುನಾಲ್ವರಾತೀರ್ಥಸಮುದಾಯದ ಶಾ
ಸನದೇವಿಯರ್ಕಳಿರ್ಪ
ತ್ತು ನಾಲ್ವರೀಗೆಮಗೆ ಯಕ್ಷರಕ್ಷಾಸುಖಮಂ ೨

ಸುರಪತಿಪೂಜಿತಂ ನೃಪತಿಸೇವಿತಮುನ್ನತಗಂಗಮಂಡಲೇ
ಶ್ವರಮಕುಟಾರ್ಚಿತಂ ಭುವನದಿಂ ತಮಗೆಂಬ ನೆಗೞ್ತೆವೆತ್ತಲಂ
ಕರಿಸಿ ಜಗತ್ಪವಿತ್ರಮೆನೆ ಸಂದುದಱಿಂದೆಮಗಿಷ್ಟಸಿದ್ಧಿಯಂ
ದೊರೆಕೊಳಿಸುತ್ತುಮಿರ್ಕಜಿತಸೇನಮುನೀಂದ್ರಪದಾಂಬುಜದ್ವಯಂ ೩

ಅಕ್ಕುಂ ಬೋಧಂ ಶ್ರುತದೊಳ
ಪೊಕ್ಕಂದಾ ಬೋಧದಿಂದೆ ಸುಗತಿಯನೆಯ್ದ
ಲ್ಕಕ್ಕುಮದಱಿಂದಮುಭಯಭ
ವಕ್ಕಂ ಶ್ರುತದಿಂದೆ ಹಿತಕರಂ ಪೆಱತುಂಟೆ ೪

ಪದಿನಾಱಿಲ್ಲವಲಂ ಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂ
ದಿದ ಶೃಂಗಾರಮದಲ್ಲವೊಂದೆ ರಸಮೊಂಬತ್ತೆಯ್ದೊಡಂಬಟ್ಟುವೆಂ
ಬುದನೆಂಬನ್ನೆಗಮಂಗನೋಚಿತರಸಾಲಂಕಾರಮಂ ತಾಳ್ದಿದೊ
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕಸ್ಮನ್ಮುಖಾಂಭೋಜದೋಳ್ ೫

ಶ್ರೀಮದಗಣ್ಯ ಪುಣ್ಯನಿಧಿ ಜೈನಪದಾಂಬುಜಭೃಂಗಿ ಜೈನಧ
ರ್ಮಾಮೃತವಾರಿವರ್ಧಿತವಿನೇಯಜನೋತ್ಸವಸಸ್ಯಭೂಮಿ ಮ
ದ್ಭೂಮಿಗೆ ತಾನೆ ಬೇಲಿಯೆನಿಪಂಕದ ರೋಹಿಣಿಯಕ್ಷಿ ದಾನಚಿಂ
ತಾಮಣಿ ಮಾಳ್ಕೆ ಚಿಂತಿತಮನೋರಥಮಂ ಕವಿಚಕ್ರವರ್ತಿಯಾ ೬

ಪರಿಪೂರ್ಣಾಯತವಕ್ಷನಂಬುರುಹಪತ್ರಾಕ್ಷಂ ಜಿನೇಂದ್ರಾಂಘ್ರಿಪಂ
ಕರುಹಾನಂದಕಕಲ್ಪವೃಕ್ಷನಜಿತಶ್ರೀತೀರ್ಥಕೃತ್ಸಿಂಹವಿ
ಷ್ಟರಸಂರಕ್ಷಣದಕ್ಷನಕ್ಷಯಫಲಾಪೇಕ್ಷಂ ಮಹಾಯಕ್ಷನಾ
ದರದಿಂ ರಕ್ಷಿಸುತಿರ್ಕುಪಾಸಕಗಣಶ್ರೀಸೇವ್ಯರಂ ಭವ್ಯರಂ ೭

ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ ಭವ್ಯ
ಪ್ರಸರಕಮಲಬೋಧಾವಾಪ್ತಿಯಂ ತಾಳ್ದಿ ಪೆಂಪಿಂ,
ವಿಶದವಿಭವತೇಜಶ್ಚಕ್ರಮರ್ಕಂಬೊಲುದ್ಯೋ
ತಿಸುಗೆ ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ ೮

## ಅತ್ತಿಮಬ್ಬೆ ಚರಿತಂ

## ಅತ್ತಿಮಬ್ಬರಸಿಯಂ ಪೆಸರ್ಗೊಳ್ವುದು ಪುಣ್ಯಕಾರಣಂ

ಅಜಿತಜಿನಪದಪಯೋರುಹ
ರಜಸ್ಸಮಾಸಂಗಿಭೃಂಗಿ ಗುಣಶೀಲದಯಾ
ಧ್ವಜೆಯೆಂದು ನಾಡೆ ಸುವಿನೇ
ಯಜನಂ ಬಣ್ಣಿಪುದು ದಾನಚಿಂತಾಮಣಿಯಂ ೧

ದಿಗಿಭದೊಳಗಮರಕರಿ ದಾ
ನಿಗಳೊಳಗಗ್ಗಳದ ದಾನಚಿಂತಾಮಣಿ ಚ
ಕ್ರಿಗಳೊಳಗಾಹವಮಲ್ಲಂ
ಮಿಗಿಲೆನಿಕುಂ ವಿಷಯದೊಳಗೆ ವೆಂಗೀವಿಷಯಂ ೨

ಅಳಿಗೀತಕುಸುಮಪರಿಮಳ
ಫಲರಸಮಂದಾನಿಲಾದ್ರಿಕಾನನಲೀಲಾ
ವಿಲಸನದಿಂ ಭೋಗಮಹೀ
ತಳಮೆನಿಪುದು ವಿಷಯಜನಕೆ ವೆಂಗೀವಿಷಯಂ ೩

ಜಳಧಿತರಂಗತಾಡಿತಮಹೀತಳದೊಳ್ ನೆಗಟ್ದಿತ್ತು ವೆಂಗಿಮಂ
ಡಲಮದಱೊಳ್ ಜಿತಾನ್ಯವಿಷಯಂ ನೆಗಟ್ದಿರ್ದುದು ಕಂಮೆದೇಶಮ
ಗ್ಗಳಿಕೆಯ ಕಂಮೆದೇಶಮನಲಂಕರಿಸಿರ್ದುದು ಪುಂಗನೂರ್ ಜಗ
ತ್ತಿಲಕಮದರ್ಕೆಮುಖ್ಯಮೆನೆ ಪೆಂಪೆಸೆದಿರ್ದುದು ನಾಗಮಯ್ಯನಾ ೪

ಆ ನೆಗಟ್ದ ನಾಗಮಯ್ಯನ
ಸೂನುಗಳಿರ್ವ್ವರೆ ದಲವರೊಳಗ್ರಸುತಂ ವಿ
ದ್ಯಾನಿಧಿ ಮಲ್ಲಪನನುಜನ
ನೂನಗುಣಂ ಪೊನ್ನಮಯ್ಯನಣ್ಣನ ಭಕ್ತಂ ೫

ಪಂಡಿತಮಂಡಳಿಗಂ ಕವಿ
ಮಂಡಳಿಗಂ ತನ್ನ ಮನೆ ತವರ್ಮನೆಯೆನೆ ಕೆ
ಯ್ಕೊಂಡು ಪೊಗಟ್ದಪುದು ಭುವನಂ
ಕೌಂಡಿನ್ಯಕುಲಪ್ರದೀಪನಂ ಮಲ್ಲಪನಂ ೬

ಅಱಿವೆಡೆಯೊಳ್ ಕಾಲತ್ರಯ
ಮಂಱಿವೆಡೆಯೊಳ್ ತನ್ನ ಶೌರ್ಯಮಂ ಬಲ್ಮೆಯುಮಂ
ಮೆಱೆದಂ ಮಲ್ಲಪನಲ್ಲದೆ
ಪೆಱನಾವನೊ ಶಾಸ್ತ್ರಶಸ್ತ್ರವಿದ್ಯಾಕುಶಲಂ ೭

ಬಳದೇವವಾಸುದೇವರ
ನಿಱಿಪುದು ಗುಣದೊಳ್ಪು ರಾಮಲಕ್ಷ್ಮಣರಂ ಪೆಂ
ಪಿಱಿಪುದು ಭೀಮಾರ್ಜುನರುಮ
ನಿಱಿಪುದು ಮಲ್ಲಪನ ಪೊನ್ನಮಯ್ಯನ ಚರಿತಂ ೮

ಗುರು ಜಿನಚಂದ್ರಮುನೀಂದ್ರರ
ಪರೋಕ್ಷದೊಳ್ ತಂಮುತಿರ್ವರುಂ ಪೊನ್ನಿಗನಿಂ

ಬರೆಯಿಸಿದರ್ ಸಕಳೋರ್ವಿಗೆ
ಪರೆಯಿಸಿದರ್ ಸಲೆ ಪುರಾಣಚೂಡಾಮಣಿಯಂ ೯

ಅವರೊಳಪ್ರತಿಮವಿಪ್ರಕುಲದೀಪನುಂ, ಅಸಹಾಯಸಾಹಸೋತ್ಸಾಹಸಮುದಿತಸಂಪತ್ಸಂಪನ್ನನುಂ ಆರಾಧಿತರತ್ನತ್ರಯನುಂ ಚಾಳುಕ್ಯಾಭರಣನುಂ ಶ್ರೀ ಮದಾಹವಮಲ್ಲದೇವಸಾಮ್ರಾಜ್ಯ ಲಕ್ಷ್ಮೀಪ್ರವರ್ಧಮಾನಹೇತುಭೂತನಿಜಾದೇಶ ಪರಂಪರಾಪ್ರಕಾಶಿತ ಪರಿಜ್ಞಾನಾತಿಶಯನುಮಪ್ರತಿಮಲ್ಲನುಮೆನಿಪ ಮಲ್ಲಪಂಗೆ

ವಿನಯವತಿನಾಗಿಯಬ್ಬೆಗ
ಮನೂನಗುಣನೆನಿಪ ನಾಗಮಯ್ಯಂಗಂ ನಂ
ದನೆಯೆನಿಸಿದಪ್ಪಕಬ್ಬೆಯೆ
ಜಿನಪಾದಪಯೋಜಭೃಂಗಿ ಕುಲವಧುವಾದಳ್ ೧೦

ಅಂತಾ ಪುಣ್ಯಭಾಜನರಪ್ಪವರ್ಗೆ ಗುಂಡಮಯ್ಯನುಮೆಳಮಯ್ಯನುಂ, ಪೊನ್ನಮಯ್ಯನುಂ, ಆಹವಮಲ್ಲನುಂ, ವಲ್ಲನುಮೆಂಬ ಪುರುಷರತ್ನಂಗಳುಂ ; ಅತ್ತಿಮಬ್ಬೆಯುಂ, ಗುಂಡಮಬ್ಬೆಯುಂ, ನಾಗಿಯಬ್ಬೆಯುಮೆಂಬ ಕನ್ಯಾರತ್ನಂಗಳುಂ ಪುಟ್ಟೆ ; ಸಚಿವೋತ್ತಮನುಮುತ್ತಮಜಾತಿಯುಂ, ಸಕಲ ಚಕ್ರವರ್ತಿಯ ಸಭಾ ಸಂವಾಸಚತುರನುಂ, ಚತುರುಪಧಾವಿಶುದ್ಧನುಮೆನಿಸಿದ ಚಾಳುಕ್ಯಚಕ್ರವರ್ತಿಗೆ ಮಹಾಮಂತ್ರಿಯೂ ದಲ್ಲಪಂಗೆ ಪುಟ್ಟಿ ನಿಜಮಹೀಪತಿಯ ಮಹೀಭಾಗಕ್ಕೆ ದಿಗ್ನಾಗನುಂ, ನಾಗರಾಜನುಮೆನಿಸಿದ ನಾಗದೇವನೆಂಬ ಪುರುಷರತ್ನಕ್ಕೆ ರತ್ನತ್ರಯಾಲಂಕೃತೆಯುಂ, ದಾನಚಿಂತಾಮಣಿಯುಂ, ಚಾರಿತ್ರಮೇರುವುಂ, ಗುಣದಂಕಕಾರ್ತಿಯುಂ, ಭವ್ಯಮನೋರಥಜನ್ಮಭೂಮಿಯುಂ, ಕವಿವರಕಾಮಧೇನುವುಂ, ಜಿನಧರ್ಮಪತಾಕೆಯುಂ, ಮಹಾಸತೀಕುಲತಿಲಕೆಯುಮೆನಿಸಿದತ್ತಿಮಬ್ಬೆಯುಂ, ಪತಿವ್ರತಾಗುಣಮಂಡನಮಂಡಿತೆಯೆನಿಸಿದ ಗುಂಡಮಬ್ಬೆಯುಮೆಂಬ ಕನ್ಯಾರತ್ನದ್ವಯಮುಮಂ ಕೊಟ್ಟನಿಬರುಂ ಸುಖಮಿರೆ

ವೀರಾವತಾರನೆನಿಸಿದ
ವೀರಂ ಮಲ್ಲಪನ ತಮ್ಮನುಂ ನಂದನರುಂ

ವೀರನಳಿಯಂ ನೆಗಟ್ತಿಯ
ವೀರಾಗ್ರಣಿ ನಾಗದೇವನೊಜಟರ ಮಲ್ಲಂ ೧೧
ಎನೆ ನೆಗಟ್ದಾ ದಲ್ಲನ ನಂ
ದನಂಗಮಾ ಕಾಂತೆಯತ್ತಿಮಬ್ಬೆಗವಾದಂ
ತನಯಂ ಪಡೆವಳ ತೈಲಂ
ವಿನಯಾಲಂಕಾರನೆನಿಸಿದಣ್ಣಿಗದೇವಂ

ಅಂತು ನಿಜಕುಲತಿಲಕನೆನಿಸಿದ ನನ್ನಿನಾರಾಯಣಂ ತನಗೆ ತನಯನಾಗೆ ನಾಗದೇವನಭಿನವಕಾಮದೇವನುಂ, ಹಯವತ್ಸರಾಜನುಂ, ಸುಭಟಚೂಡಾಮಣಿಯುವೊಜಟರಮಲ್ಲನುಮಾಹವಮಲ್ಲದೇವಪಾದಪಂಕಜಭ್ರಮರನುಮೆನಿಸಿ

ಕುಮರರ ಕಾಳಗದೊಳ್ ಪತಿ
ಯ ಮುಂದೆ ತಱಿಸಂದು ನಿಂದು ಕಡಿತಲೆಗೊಂಡ
ನ್ಯಮತಂಗಜಂಗಳಂ ವಿ
ಕ್ರಮಸಿಂಹಂ ದಲ್ಲನಂದನಂ ಪೊಣರ್ದಿಱಿದಂ ೧೩

ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದನಾಪ್ತಮಂತ್ರಿ ದ
ಲ್ಲನ ಮಗನೀತನಂತದಟರುಂ ಪತಿಭಕ್ತರುಮಿಾಗಳಾರುಮಿ
ಲ್ಲೆನಿಸಿದ ನಾಗದೇವನಣಿಮುಟ್ಟೆ ಧುರಂಧರನಾಗದೇವನೆಂ
ಬಿನಮಿಱಿದಿಕ್ಕಿದಂ ಸೆಣಸಿ ಪೊಕ್ಕರನಾಜಿಯೊಳಂಗರಕ್ಕಸಂ ೧೪

ಬಲ್ಲಹನ ಬೆಸದೊಳೊಜಟರ
ಮಲ್ಲಂ ದಲ್ಲನ ತನೂಭವಂ ಕರಹಟದಿಂ
ಮಲ್ಲಮನಂ ಬೆನ್ನಟ್ಟಿದ
ಬಲ್ಲಾಳ್ತನದಿಂ ನಿಜೇಶನಂ ಮೆಚ್ಚಿಸಿದಂ ೧೫

ಅಂತನೇಕಸಂಗ್ರಾಮರಂಗಲಬ್ಧ ವಿಜಯಲಕ್ಷ್ಮೀ ಸಮಾಗಮದೊಳಮಾಹವಮಲ್ಲದೇವಪ್ರಸಾದಾಸಾದಿತ ಸೈನ್ಯಾಧಿಪತ್ಯ ಸಂಪತ್ಸಮಾಗಮದೊಳಮತ್ಯಂತ ಕಾಂತಕಾಂತಾದ್ವಯ ಸಮಾಗಮದೊಳಮುದ್ದಾಮ ಯೌವನ ಲಕ್ಷ್ಮೀಸಮಾಗಮದೊಳಂ ನೆಱೆದು ದೇವಾಂಗನಾಜನಸಮಾಗಮೋತ್ಸುಕಚಿತ್ತನಾಗಿ ನಾಗದೇವಂ ದೇವಲ್ಲೋಕಕ್ಕೆ ಪೋಗೆ

ಎರಡೆ ವಲಂ ಕುಲವಧುಗಾ
ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ
ಚರಣಂ ಮೇಣ್ ಶುಭಚರಿತದೆ
ಮರಣಂ ಮೇಣಳಿಪಿನಿಂದೆ ಬಾಳ್ವುದು ದೊರೆಯೇ ೧೬

ಎಂದು ಪರಿಚ್ಛೇದಿಸಿ ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು ಬದ್ಧಾಂಜಲಿಯಾಗಿ

ನಿನಗೆ ಮಗಂ ಜಗತ್ತಿಲಕನಿರ್ದಪನಕ್ಕ ಮಗಂ ಸಮರ್ಥನ
ಪ್ಪಿನಮಿರು ನಾಗದೇವನೊಡನಾಂ ಬೆಸಕೇಳ್ದಪೆನೆಂದು ಬೇಡಿ ಕೊಂ
ಡಿನಿಯನನಪ್ಪಿಕೊಂಡುಚಿತಮಾಗೆ ಚಿತಾಗ್ನಿಯೊಳಣ್ಮಿ ಸತ್ತ ಸ
ಜ್ಜನಿಕೆಯ ಪೆಂಪು ಸಜ್ಜನಕೆ ಬಣ್ಣಿಸೆ ಸಂದುದು ಗುಂಡಮಬ್ಬೆಯಾ ೧೭

ಅಂತು ಗೂಡೆಲ್ಲಂ ಪೊಗೞೆ ಗುಂಡಮಬ್ಬೆ ಮಹಾಸತೀಸಮುಚಿತಾಚಾರದೊಳಮಾಭರಣದೊಳ್ ನೆಗೞೆ; ಅಂತಿರ್ವರುಂ ಗೀರ್ವಾಣಲೋಕದೊಳೆ ದಂಪತಿಗಳಾಗೆ,

ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ದಿವೋ
ದಿತತನುವಾದಳಾಂ ಪಿರಿಯೆನಪ್ಪುದಱಿಂ ಪಿರಿದಪ್ಪ ದಾರುಣ
ವ್ರತದಹನಾರ್ಚಿಯಿಂದನುದಿನಂ ತನುವಂ ತನುಮಾಡುತಿರ್ಪೆನೆಂ
ಬತನುವಿರೋಧಮುಂ ತನುವಿರೋಧಮುಮೊಪ್ಪುಗುಮತ್ತಿಮಬ್ಬೆಯೊಳ್ ೧೮

ಪತಿವಿಗಮದೊಳಸಿಧಾರಾ
ವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂ
ತತಿಯುಂ ಕೞಿಯುತೆ ಕಾಯ
ಸ್ಥಿತಿಯುಂ ತಾನತ್ತಿಮಬ್ಬೆ ಮಾಣ್ಬಳೆ ಮಾಣಳ್ ೧೯

ಒಡಲನುಪವಾಸದಿಂ ತ
ನ್ನೊಡಮೆಯುನನವರತದಾನದಿಂ ತವಿಸಿ ಜಸಂ
ಬಡೆದಳ್ ನೂರ್ಮಡಿ ತೈಲನ
ಪಡೆವಳ ತೈಲಪನ ಜನನಿಗೆಣೆ ಪೆಱರೊಳರೇ ೨೦

ದಶದಿಗ್ವಳಯದೊಳಮಳಿನ
ಯಶಮೆಸೆವಿನಮತ್ತಿಮಬ್ಬೆ ಜಿನಧರ್ಮದಯಶಾ
ವಶವರ್ತಿನಿ ದಾನಂ ಪೂ
ಜೆ ಶೀಲಮುಪವಾಸಮೆಂಬಿವಂ ಪ್ರಕಟಿಸಿದಳ್ ೨೧

ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ಶೀಲದೊಳ್
ದೇವಕಿ ತಾನೆ ದಾನಗುಣದಿಂದೆ ಸುಲೋಚನೆ ತಾನೆ ಎಂದು ಭ
ವ್ಯಾವಳಿ ಮೆಚ್ಚಿ ಬಣ್ಣಿಪುದು ಭವ್ಯಮನೋರಥಜನ್ಮಭೂಮಿಯಂ ೨೨

ಬುಧಜನವಂದಿತೆ ಧರ್ಮ
ಪ್ರಧಾನ ದರ್ಶನವಿಶುದ್ಧೆ ದಾನಗುಣೈಕಾಂ
ಬುಧಿಯೆನಿಸಿದ ಕವಿವರಕಾ
ಮಧೇನುವೆಂದೆಂಬುದತ್ತಿಮಬ್ಬೆಯನೆ ಜಗಂ ೨೩

ಜಿನಪದಭಕ್ತೆ ಜಗತ್ರಯ
ಜನವಂದಿತೆ ಚಕ್ರವರ್ತಿಪೂಜಿತೆ ಜಿನಶಾ
ಸನರುಚಿ ಪಡೆವಳ ತೈಲನ
ಜನನಿಯೆ ತೀರ್ಥಂಕರಜನನಿಯೆನ್ನದರೊಳರೇ ೨೪

ಆಸನ್ನ ಭವ್ಯೆಯುಂ ಜಿನ
ಶಾಸನದೀಪಿಕೆಯುಮೆನಿಸಿ ಮಣಿಕನಕಮಯೋ
ದ್ಭಾಸಿ ಜಿನಪ್ರತಿಮೆಗಳಂ
ಸಾಸಿರದಯ್ನೂಱನರ್ತಿಯಿಂ ಮಾಡಿಸಿದಳ್ ೨೫

ಸ್ಫುರಿತೋದ್ಯನ್ಮಣಿಘಂಟೆಗಳ್ ಮಣಿವಿತಾನಶ್ರೇಣಿಗಳ್ ಸ್ವರ್ಣಭಾ
ಸುರದೀಪಂಗಳ ಮಾಲೆ ದಿವ್ಯವಸನಪ್ರಾರಬ್ಧಶುಂಭಧ್ವಜೋ
ತ್ಕರಮುದ್ಭಾಸಿತರತ್ನ ತೋರಣಗಣಂ ಮಾಡಿರ್ದುವೊಂದೊಂದು ಸಾ
ಸಿರದಯ್ನೂಱನೆಯತ್ತಿಮಬ್ಬೆಗೆಣೆಯೆಲ್ಲೀ ಕಾಲದೊಳ್ ದಾನಿಗಳ್ ೨೬

ಉನ್ನತಕುಕ್ಕುಟೇಶ್ವರಜಿನೇಶ್ವರನಂ ಜಿನಭಕ್ತೆ ಪೋಗಿ ಕಾ
ಣ್ಬನ್ನೆಗಮನ್ನಮಂ ಬಿಸುಟು ಪರ್ವತಮಂ ಪಱಿದೇಱೆ ತಜ್ಜಿನಾ

ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಮಾಱಲಕಾಲವೃಷ್ಟಿಯಾ
ಯ್ತೆನ್ನದೊ ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ ೨೭

ಗುಣಿಗಳುಮಂ ನೆಗೞ್ದೊಳ್ಪಿನ
ಕಣಿಗಳುಮಂ ಕಾಣಲಪ್ಪುದದಱಿಂದವಸ
ರ್ಪಿಣಿಯಲ್ತು ಕಾಲಮುತ್ಸ
ರ್ಪಿಣಿಯೆಂಬಂತಾಯ್ತು ದಾನಚಿಂತಾಮಣಿಯಿಂ ೨೮

ಕಲಿಯೆನೆ ನೆಗೞ್ದಳ್ ಕಸವರ
ಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್
ಮೊಲೆವೊತ್ತ ತೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ ೨೯

ಅಸಿಲತೆಯೆಂದು ಬಣ್ಣಿಪುದು ಧರ್ಮವಿರೋಧಿಜನಕ್ಕೆ ಧರ್ಮದಿಂ
ದೆಸೆವ ಜನಕ್ಕೆ ಕಲ್ಪಲತೆಯೆಂದೆಳೆ ಬಣ್ಣಿಪುದೆಂಬ ತನ್ನ ಪೆಂ
ಪೆಸೆಯೆ ಜಗಜ್ಜನಂ ಪೊಗೞೆ ಸಂದ ಮಹಾಸತಿಯುಂ ತಗುಳ್ದು ಬ
ಣ್ಣಿಸುವುದು ಪುಣ್ಯಮಲ್ತೆ ಜಿನಧರ್ಮಪತಾಕೆಯನತ್ತಿಮಬ್ಬೆಯಂ ೩೦

ಉತ್ತಮಗೋತ್ರೋದ್ಭವೆ ಸ
ದ್ವೃತ್ತೆ ಮಹಾಸತಿ ವಿನೇಯಚೂಡಾಮಣಿ ತಾ
ನತ್ತುಱಿದರೆತ್ತ ಪಿಕ್ಕುವೊ
ಡತ್ತಿಯ ಪಣ್ಣತ್ತಿಮಬ್ಬೆಯಲ್ಲದರ ಗುಣಂ ೩೧

ಬಿಳಿಯುರಳೆಯಂತೆ ಗಂಗಾ
ಜಳದಂತೆಸೆವಜಿತಸೇನಮುನಿಪತಿಯ ಗುಣಾ
ವಳಿಯಂತೆ ನೆಗೞ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ ೩೨

ವ್ರತಮಂ ಪೇೞ್ವೊಡೆ ನೋಂತು ತಾಱಿಮೊಡಲುಂ ಚಕ್ರೇಶನಾಜ್ಞಾಧಿಪಂ
ಸುತನಂ ಪೇೞ್ವೊಡೆ ಚಕ್ರವರ್ತಿಕಟಕಕ್ಕಾರಾಧ್ಯೆಯಾಗಿರ್ದೆಯಾ
ಯತಿಯುಂ ಪೇೞ್ವೊಡೆ ಕೆಟ್ಟ ಕಾಲದೊಳಿದಂ ಕೊಂಡಾಡಿದೈ ಧರ್ಮದು
ನ್ನತಿಯುಂ ಪೆರ್ಚಿಸುವಂದು ನೀನೆ ಪಿರಿಯೈ ಶ್ರೀದಾನಚಿಂತಾಮಣೀ ೩೩

ನೆಗಟ್ಟಿದರ್ ದಾನದಿನೊರ್ವರೊರ್ವರಜೀವಂ ತಾಳ್ದಿರ್ದ ಸಮ್ಯಕ್ತ್ವದಿಂ
ನೆಗಟ್ಟಿದರ್ ಧರ್ಮದ ಪೆರ್ಮೆಯುಂ ಕೆಲಕೆಲರ್ ಶೀಲವ್ರತಾಚಾರದಿಂ,
ನೆಗಟ್ದಿಲ್ಲ ನೀನೆ ಜಗಕ್ಕೆ ದಾನಗುಣದಿಂ ಸಮ್ಯಕ್ತ್ವದಿಂ ಧರ್ಮದಿಂ
ಮಿಗೆ ಶೀಲವ್ರತದಿಂ ಸದಾಚರಣದಿಂ ಶ್ರೀದಾನಚಿಂತಾಮಣೀ ೩೪

ದಯೆಯಂ ತಾಳ್ದಿದ ಜೈನಧರ್ಮರುಚಿಯಂ ಕೈಕೊಂಡು ಸಮ್ಯಕ್ತ್ವ ಶು
ದ್ಧಿಯನೀಕಾಲದೊಳಪ್ಪುಕೆಯ್ದು ಭುವನಕ್ಕಾಶ್ಚರ್ಯಮಪ್ಪಂತು ಕೀ
ರ್ತಿಯನಾವರ್ಜಿಸುತಿರ್ಪುದಾವ ಚರಿತಪ್ರಾರಂಭದಿಂ ಚಕ್ರವ
ರ್ತಿಯುಮಂ ಪೆರ್ಚಿಸಿದೊಳ್ಪು ನಿನ್ನೊಳೆಸೆಗುಂ ಶ್ರೀದಾನಚಿಂತಾಮಣೀ ೩೫

ಮಹಿಚಕ್ರಕ್ಕಿದು ಚೋದ್ಯಮಲ್ತೆನಿಸುವಂತಾರ್ತೀವ್ರದುಂ ಕಂಡು ಸ
ಸ್ಪೃಹರೆಲ್ಲಂ ಗೆಳೆಗೊಂಡು ಬಣ್ಣಿಸುವರಿನ್ನೇಚೋದ್ಯಮಿಾಗಳ್ ಜಗ
ನ್ಮಹನೀಯತ್ವಮನೆಯ್ದೆ ತಾಳ್ದಿದ ಮಹಾಪ್ರಖ್ಯಾತಿಯಂ ಕೇಳ್ದು ನಿ
ಸ್ಪೃಹರುಂ ಬಣ್ಣಿಪರಲ್ತೆ ನಿನ್ನ ಗುಣಮಂ ಶ್ರೀದಾನಚಿಂತಾಮಣೀ ೩೬

ನಯಮಂ ತಾಳ್ದಿ ಪೊಗಟ್ತೆವೆತ್ತು ಭುವನಕ್ಕಾರಾಧ್ಯೆಯಾದತ್ತಿಮ
ಬ್ಬೆಯ ಶೀಲೋನ್ನತಗತ್ತಿಮಬ್ಬೆಯ ಮಹಾದಾನೋತ್ಸವಕ್ಕತ್ತಿಮ
ಬ್ಬೆಯ ಧರ್ಮಸ್ಥಿತಿಗತ್ತಿಮಬ್ಬೆಯ ಜಿನೇಂದ್ರಾರಾಧನಕ್ಕತ್ತಿಮ
ಬ್ಬೆಯ ಭಕ್ತಿಕ್ರಮಕತ್ತಿಮಬ್ಬೆಯ ಗುಣಕ್ಕಾರುಂ ಸಮಂ ಪೋಲ್ವರೇ ೩೭

ಜಿನಪೂಜೋತ್ಸವಕೆಲ್ಲಿಯುಂ ಜಿನಕಥಾಳಾಪೋತ್ಸವಕ್ಕೆಲ್ಲಿಯುಂ
ಜಿನತೀರ್ಥೋತ್ಸವಕೆಲ್ಲಿಯುಂ ಜಿನಮುನಿವ್ರಾತೋತ್ಸವಕ್ಕೆಲ್ಲಿಯುಂ
ಜಿನಗೇಹೋತ್ಸವಕೆಲ್ಲಿಯುಂ ಜಿನಮಹಾದಾನೋತ್ಸವಕ್ಕೆಲ್ಲಿಯುಂ
ಧನಮಂ ಪತ್ತಿಸುತಿರ್ಪೆ ನೀನೆ ಪಿರಿಯೈ ಶ್ರೀದಾನಚಿಂತಾಮಣೀ ೩೮

ಶೀಲಾಲಂಕೃತೆಯಂ ಗುಣ
ಮಾಲಾಲಂಕೃತೆಯನಾ ಮಹಾಸತಿಯುಂ ಶ್ರೀ
ತೈಲಾಂಬಿಕೆಯುಂ ಪೆಸರ್ಗೊಳೆ
ಬಾಲೆಯರಂ ಖಳಕಲಂಕಮೇಂ ಪೊರ್ದುಗುಮೇ ೩೯

ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಲಂ
ಬೆಳೆವುದು ಬೇಡಿದಂತೆ ಮಟಿಕೊಳ್ವುದೆನಿಪ್ಪ ಜಸಕ್ಕೆ ನೋಂತ ಭೂ

ಶೀಲಕಪವಿತ್ರೆಯುಂ ಗುಣಪವಿತ್ರೆಯನಾ ಸತಿಯಂ ಮಹಾಸತೀ
ತಿಲಕೆಯನತ್ತಿಮಬ್ಬರಸಿಯುಂ ಪೆಸರ್ಗೊಳ್ವುದು ಪುಣ್ಯಕಾರಣಂ ೪೦

## ಕವಿಪ್ರತಿಜ್ಞೆ

## ಮೆಚ್ಚೆ ಬಣ್ಣಿಸುವೆಂ ಪುಣ್ಯಪುರಾಣಮಂ

ಉಪಮಾತೀತಮೆನಿಪ್ಪಾ
ದಿಪುರಾಣದ ರೇಖೆಗಂ ಬರಲ್ ನೆಱೆಗುಮೆ ಶಾಂ
ತಿಪುರಾಣದ ರೇಖೆಗಮಜಿ
ತಪುರಾಣದ ರೇಖೆಗಂ ಪುರಾಣದ ಕೃತಿಗಳ್ ೧

ಅದು ಕಾರಣದಿಂ

ಭ್ರಾಂತೇನಾದಿಪುರಾಣದ
ಶಾಂತಿಪುರಾಣದ ಸಮಾನಮೆನೆ ಕೃತಿಯುಂ ಕ
ಲ್ಪಾಂತಸ್ಥಾಯಿಯನಾಶ್ರಿತ
ಚಿಂತಾಮಣಿಗತ್ತಿಮಬ್ಬೆಗಱ್ತಿಯೆ ಪೇೞ್ವೆಂ ೨

ಪೊನ್ನಿಗ[ನಿಂ] ಮಲ್ಲಪನುಂ
ಪೊನ್ನನುಮರ್ತಿಯೆ ಪುರಾಣ ಚೂಡಾಮಣಿಯುಂ
ಮುನ್ನಂ ಪೇೞಿಸಿದಂತೆ ಗು
ಣೋನ್ನತಕವಿರತ್ನನಿಂದಿದಂ ಪೇೞಿಸಿದಳ್ ೩

ಎನಿತುಂಟಾಗಮವರ್ಣನ
ಮನಿತುಮನೊಳಕೊಂಡು ಸಕಲಭವ್ಯಜನಂಗ
ಳ್ಗನುರಾಗಮನೊಡರಿಸಿದಪು
ದೆನಿಪ ಪುರಾಣಂ ಪುರಾಣತಿಲಕಮಿದಲ್ತೇ ೪

ಕವಿಮುಖಚಂದ್ರಂ ಕವಿಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ

ಕವಿಜನಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ೫

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ
ಮಸುಳಿಸಿದನೊ "ಬಹುರತ್ನಾ
ವಸುಂಧರಾ "ಯೆಂಬ ವಾಕ್ಯಮಂ ಕವಿರತ್ನಂ ೬

ಅವನಿಪರೊಳ್ ನಿಜಭುಜಚ
ಕ್ರವರ್ತಿ ರಣಜಯಕೆ ತೈಲನೆಂತಸಹಾಯಂ
ಕವಿಗಳೊಳಮಂತೆ ಕವಿಚ
ಕ್ರವರ್ತಿ ಕವಿರನ್ನನಂತು ಕೃತಿಗಸಹಾಯಂ ೭

ಮತಿಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿ ಭೇರಿ ಕಳಿತಂ ಸಿಂಹಾಸನಂ ಸುಂದಲಂ
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮೆಯ್ವೆತ್ತುದೋ ೮

ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತೆಱೆಯೆ ನುಡಿದನೆನಿಸಿದ ಕವಿ ಸ
ತ್ಕವಿಯೆನಿಕುಂ ಗೂಡಾರದ
ಕವಿಯುಂತಿರೆ ಮುಚ್ಚಿ ಪೋದ ಕವಿಯುಂ ಕವಿಯೇ ೯

ಸರಸತಿಯನಬಲೆಯುಂ ಗೋ
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತೀದ್ರೋಹನವನನಾರ್ ಮುಟ್ಟುವರೋ ೧೦

ಪೊಸದೇಸೆಯುಂ ಬೆಡಂಗಂ
ರಸಘಟ್ಟಿಯನರ್ಥದೃಷ್ಟಿಯುಂ ಬಗೆವರೊ ಭಾ
ವಿಸುವರೊ ಸಾರಣೆಯುಂತಿರೆ
ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್ ೧೧

ನೆಗಟ್ದ ಕವಿರತ್ನನಂತೆರೊಳ
ಪುಗುವುದು ಪೊಗ್ಗಾಯ್ತು ಜಿನಮತಾಂಬೋಧಿಯುಮಂ
ಪುಗದಾಗವುಮಱಿವರ ಬಗೆ
ವುಗದೆ ಕೆಲರ್ ಕವಿಗಳಾಡಿದರ್ ತಡಿದಡಿಯೊಳ್ ೧೨

ಸುರಲೋಕಾವತರೋತ್ಸವಂ ಪರಿಕ್ರೃತಂ ಜನ್ಮಾಭಿಷೇಕೋತ್ಸವಂ
ಪರಿನಿಷ್ಕ್ರಾಂತಿಮಹೋತ್ಸವಂ ಪ್ರವಿಮಲಂ ಕೈವಲ್ಯಬೋಧೋತ್ಸವಂ
ಪರಿನಿರ್ವಾಣಮಹೋತ್ಸವಂ ಜಿನಕಲ್ಯಾಣಮಯ್ದುಂ ಸವಿ
ಸ್ತರದಿಂದಿರ್ಪುವು ವರ್ಣಕಂಗಳಿವಱಿಂ ಭವ್ಯಾಂಗಮೇನೊಪ್ಪದೇ ೧೩

ಪೆಸರ್ಗೊಂಡಟ್ಟಿಯೊಳತ್ತಿಮಬ್ಬೆಯ ಗುಣವ್ರಾತಂಗಳಂ ಕೇಳ್ದ ಭ
ವ್ಯಸಮೂಹಂ ಪೊಗಟ್ಟಂತು ಕೀರ್ತಿ ನೆಗಟ್ವಂತೀ ಲೋಕದೊಳ್ ಬಲ್ಮೆರಂ
ಜಿಸೆ ಬಲ್ಲರ್ಗೆಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮೆಚ್ಚೆಬ
ಣ್ಣಿಸುವಂ ಪುಣ್ಯಪುರಾಣಮಂ ಜಿತಮನೋಜಾತಾಜಿತಸ್ವಾಮಿಯಾ ೧೪

### ಪೂರ್ವಭವಾವಳಿ

## ವಿಮಲವಾಹನಂ ವಿರಕ್ತಚಿತ್ತನಾದಂ

ಜಂಬೂದ್ರುಮೋಪಲಕ್ಷಿತಜಂಬೂದ್ವೀಪ ಮಧ್ಯವರ್ತಿಯುಂ ನಿಖಿಳಶೈಲ ಕುಲಚಕ್ರವಾಳ ಚೂಡಾಮಣಿಯುಮೆನಿಸಿ,

ಎರಡುಂ ವಿದೇಹವಿಷಯದ
ಭರತೈರಾವತದ ನಟ್ಟನಡುವಿರ್ದುದು ಸೌಂ
ದರಮಂದರಾಚಲಂ ಕಂ
ದರೋದರಂ ಕಿನ್ನರಾಮರಸ್ತ್ರೀರಮ್ಯಂ ೧

ನಾಭೇಯಜಿನಮಹಾಜ
ನ್ಮಾಭಿಷವಕ್ಷೀರವಾರಿಧಾರಾಪ್ರಸರಂ

ಶೋಭಿಪ ನಿಜಕೀರ್ತಿಪತಾ
ಕಾಭಾವದಿನೆಸೆದುದೆಂದು ಮಂದರಶೈಲಂ ೨

ಆ ಮಂದರದ ದಕ್ಷಿಣದಕ್ಷೋಣೀತಳದ ಭರತಕ್ಷೇತ್ರದ ಮಧ್ಯವರ್ತಿಯಾಗಿ
ನೆಗಟ್ದಿಕ್ಷ್ವಾಕುಕುಲಪ್ರಸೂತಸಕಲಕ್ಷ್ಮಾಪಾಲಭೂಪಾಲಲ
ಕ್ಷ್ಮಿಗಧಿಷ್ಠಾನಮುಮಾದಿತೀರ್ಥಕರಜನ್ಮಸ್ಥಾನಮುಂ ಚಕ್ರವ
ರ್ತಿಗೆ ನಾಭೇಯತನೂಭವಂಗೆ ಭರತಂಗೇಕಾತಪತ್ರಪ್ರಭಾ
ಸ್ಫುರಿತಾಸ್ಥಾನಮುಮೆಂಬ ಪೆಂಪನೊಳಕೊಂಡಿರ್ದತ್ತಯೋಧ್ಯಾಪುರಂ ೩

ಪಾತಾಳತಳಮನೆಯ್ದಿದ
ಖಾತಂ ಸುರಪುರಮನೆಯ್ದಿದಟ್ಟಳೆ ಪೆಂಪು
ದ್ಯೋತಿಸೆ ಪುರವಿಟಿಪುದು ಭೋ
ಗಾತಿಶಯದ ಭೋಗವತಿಯನಮರಾವತಿಯಂ ೪

ಅದನಾಳ್ವನಖಿಲಜಗತೀತಳಾಲಂಕಾರನುಮುದಾತ್ತಕ್ಷತ್ರಕುಲತಿಲಕನುಮಿ ಕ್ಷ್ವಾಕುವಂಶೋತ್ತಂಸನುಮಶೇಷಜಗತ್ಪವಿತ್ರ ಕಾಶ್ಯಪಗೋತ್ರಮಂಡನನುಮೆನಿಸಿ ನಿಜ ಭುಜಬಲಾವಲೇಪಪ್ರತಾಪಾಟೋಪನಿರ್ಜಿತಾನೇಕಶತ್ರು ಜಿತಶತ್ರುವೆಂಬ ರಸನಾ ಮಹೀವಲ್ಲಭನ ಮನೋವಲ್ಲಭೆ ವಿಜಯಸೇನೆಯೆಂಬೊಳಾಪರಮೇಶ್ವರಿ ಸಕಳ ಜಗತ್ತುಂಗಕುಲಸ್ತಂಬೆಯುಮಖಿಲಾಂತಃಪುರಪ್ರಧಾನಭೂತೆಯುಮಶೇಷ ಯೋಷಿದ್ಗುಣಾಲಂಕೃತೆಯುಮಾಗಿ

ಶ್ರೀ ವೀರಶ್ರೀ ಕೀರ್ತಿ
ಶ್ರೀ ವಾಕ್ಶ್ರೀಯೆಂಬ ದೇವಿಯರೆ ನೆಲಸಿರೆ ಸ
ದ್ಭಾವದೊಳೆ ವಿಜಯಸೇನಾ
ದೇವಿ ಮಹಾದೇವಿಯೆಂಬ ಪೆಸರಂ ಪಡೆದಳ್ ೫

ಅಂತು ಪೊಗಟ್ತೆವಡೆದಾ ಮಹಾದೇವಿಯೊಳಾಮಹಾನುಭಾವನೇಕಭಾವ ದೊಳನಂಗಸಾಮ್ರಾಜ್ಯಸುಖಮನನುಭವಿಸಿ,

ಸಮನಿಪ ಧರ್ಮಕ್ಕವಿರು
ದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನು

ಕ್ರಮದೊಳೆ ಕಾಮಕ್ಕಂ ಕಡೆ
ಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗಫಲಂ ೬

ಅಂತು ಚತುರ್ವಿಧಪುರುಷಾರ್ಥಮಂ ವ್ಯರ್ಥಮಾಗಲೀಯದನುಭವಿಸುತ್ತುಂ ಚತುರ್ವಿಧರಾಜವೃತ್ತಮನುದಾತ್ತಮಪ್ಪಂತಾಚರಿಸುತ್ತುಂ ವಿಜಿಗೀಷುವೃತ್ತಿಯನ್ನೆತ್ತಿಕೊಂಡು ವಿಕ್ರಮಾವಲಂಬಿಯಾಗಿ,

ಶತ್ರುಗಳುಮನಭ್ಯಂತರ
ಶತ್ರುಗಳಾರುಮನದಿರ್ಪೆ ಗೆಲ್ದುದಱಿಂದಂ
ಶತ್ರುಂತಪನೆನಿಸಿದ ಜಿತ
ಶತ್ರುಗೆ ಜಿತಶತ್ರುನಾಮಮಾಯ್ತನ್ವರ್ಥಂ ೭

ಇತ್ತ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕಣ ತಡಿಯ ವತ್ಸಕಾವತೀ ವಿಷಯದ ಸುಸೀಮಾನಗರಮನಾಳ್ವಂ ವಿಮಲವಾಹನನೆಂಬರಸಂ ಪಲವುಕಾಲಮರಸುಗೆಯ್ಯುತ್ತಿರ್ದೊಂದು ದಿವಸಂ ರಾಜವಿದ್ಯಾವಿಲಾಸಿನೀವಿಲಾಸಮಣಿದರ್ಪಣಂ ಪಳನಾಳದರ್ಪಣತಳಪ್ರತಿದರ್ಪಣಬಿಂಬಿತ ವಿಮಲಕಪೋಲಮೂಲೋದ್ಗತ ಪಳಿತಾಂಕುರಾವಳೋಕನದೆ ಪರಮವೈರಾಗ್ಯಪರನಾಗಿ,

ಆರಯೆ ಮೂತ್ರಪುರೀಷಾ
ಗಾರಂ ಸಂಪ್ರಾಪ್ತಸಪ್ತಧಾತುವಿಕಾರಂ
ಚಾರುಗುಣದೂರಮಶಿವಿಷ
ದಾರುಶರೀರಂ ದುರಂತದುಃಖಾಧಾರಂ ೮

ನೆನೆಯದೆ ಕಾಣದೆ ಕೇಳದೆ
ತನುವಿನ ಪೊಲ್ಲಮೆಯನಱಿದುಮಱಿಯದೆ, ತೊಱೆಯಲ್
ಮನಮುಳ್ಳೊಡೆ ಜೀವಕ್ಕೀ
ತನುವಿರೆ ವೈರಾಗ್ಯಕಾರಣಂ ಪೆಱತುಂಟೇ ೯

ಏಱೆಂಬ ನರಕಮಾವುದೊ
ಪೇಱೆಂಬ ದುರಂತದುಃಖದೊಳೆ ಕೇಳಿಸಿ ನಿಂ
ದೇಱುಂ ಶರೀರಧಾತುಗ
ಳೇೞುಂ ನರಕಂಗಳವಱೊಳೇಗುಂದದವೋಲ್ ೧೦

ತನಗಲ್ಲದೊಡಲ್ಗೊಡವೆಗೆ
ಮನಮಿಟ್ಟಪವರ್ಗಮಾರ್ಗಮಂ ಪೊರ್ದದೆ ತ
ನ್ನನೆ ತಾನೆ ನಂಬಿಸುವೊಡಾ
ತ್ಮನಂತು ಪೇೞಾತ್ಮವಂಚಕರ್ ಪೆಱರೊಳರೇ ೧೧

ಸಾರದೆ ಸಾರಮಪ್ಪ ಜಿನಧರ್ಮಮನಾತ್ಮನಸಾರಮಪ್ಪುದಂ
ಸಾರಮಿದೆಂದು ನಂಬಿ ತನಗಲ್ಲದುದಂತನಗಪ್ಪುದೆಂದು ಕೇ
ದಾರವಿಹಾರಸೋದರಕೃಶೋದರಸುಂದರದಾರದಾರಕೋ
ದಾರವಿಮೋಹದೊಳ್ ತೊಡರ್ದು ದಾರುಣದುಃಖಮನೆಯ್ದದಿರ್ಕುಮೋ ೧೨

ಮುನಿದುಯ್ವ ಜವಂಗಂ ಮಾ
ಯೆನಲಮ್ಮುವರಿಲ್ಲ ಬಗೆಯೆ ನಿನಗಿನಾರ್ಮುಂ
ಜಿನಧರ್ಮಮೊಂದೆ ಜೀವನೆ
ನೆನೆ ಗಡ ಲೋಕತ್ರಯೈಕಮಿನನಂ ಜಿನನಂ ೧೩

ಮತಿಗೆಟ್ಟು ಜೀವಧರ್ಮಾ
ಮೃತಮಂ ಸೇವಿಸದಧರ್ಮಮಂ ಸೇವಿಸಿ ದು
ರ್ಗತಿಗಿೞಿದೀ ಜವನೆಂಬಱ
ಸಿ ತಿಂಬ ದೈವಕ್ಕೆ ಪೋಗಿ ಪಾೞಂಬಡುವೈ ೧೪

ಎನಿತೆನಿತು ಕೞಿದ ಭವಮಂ
ನೆನೆದಪೆಯೆನಿತೆನಿತು ಭವದ ಬಂಧುಗಳಂ ನೀಂ
ನೆನೆದಪೆಯೆನಿತೆನಿತೊಡಲಂ
ನೆನೆದಪೆಯೆಲೆ ಜೀವ ನೀನೆ ಪೇೞ್ ಪವಣೊಳವೇ ೧೫

ಎನಿತಂ ಕುೞ್ಕುೞಿಗುದಿದಪ
ಯೆನಿತಂ ಕೞ್ಕನೆಕೞಲ್ದಪಯ್ ಜೀವನೆ ನೀ
ನೆನಿತಂ ಮಮ್ಮಲ ಮಱುಗುವಯ್
ಯೆನಿತಂ ಸಂಸಾರದೊಳಗೆ ತಿಱ್ಱನೆ ತಿರಿವಯ್ ೧೬

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ಬಗೆವೆಯಪ್ಪೊಡೆನ್ನುಕ್ತಿಗೊಡಂ

ಒಡು ಜೀವ ನಿನ್ನ ಕಾಲಂ
ಒಡಿವಂ ಧರ್ಮಮನೆ ಮಗುೞ್ಚಿ ಬಲ್ವಿಡಿವಿಡಿಯಾ ೧೭

ಹೇಯಮಿದೆಂದಱಿಯದುಪಾ
ದೇಯಮಿದೆಂದಱಿಯದಾತ್ಮವಸ್ತುಗಳೊಳ್ ಸ
ವ್ಯೋಮೇಯಿಸುವುದು ಹೇಯೋಪಾ
ದೇಯಂಗಳ್ ಪಾಪಧರ್ಮವಲ್ಲದೆ ಪೆಱತೇಂ ೧೮

ಜನನಮೃತದೇವನಾರಕ
ಮನುಷ್ಯತಿರ್ಯಗ್ವಿಕಲ್ಪಗತಿಗಳೊಳೆನಸುಂ
ನಿನಗೆ ಸುಖಮಿಲ್ಲ ನೆಟ್ಟನೆ
ಮನದೊಳ್ ಭಾವಿಪೊಡಸಾರಮೀ ಸಂಸಾರಂ ೧೯

ಜವನಟ್ಟಿ ಕೊಲ್ವ ಕೊಲೆಗಾ
ಜವಂಜವಸ್ಥಿತಿಗೆ ಮೆಯ್ಯ ನೀರ್ತೆಗೆವನ್ನಂ
ಜವಜವಜವನಂಜಿಸಿದುವು
ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ ೨೦

ಈನಾರಕತಿರ್ಯಗ್ಗತಿ
ಗೀ ನರಸುರಗತಿಗೆ ಪೇಸಿದೊ ದರ್ಶನದಿಂ
ಜ್ಞಾನದಿನೊಪ್ಪುವ ಪರಮ
ಸ್ಥಾನಮನಾಂ ಪಡೆವನಕ್ಕೆ ಪಂಚಮಗತಿಯಂ ೨೧

ಶಿಷ್ಟಜನೋಚ್ಛಿಷ್ಟಂ ಬಹು
ಕಷ್ಟಂ ಬಹುದುಷ್ಟಮಷ್ಟಕರ್ಮಾಗ್ನಿ ಪರಿ
ಪುಷ್ಟಂ ಹಾ ಹಾ ಧಿಕ್ ಛೀ
ಕಷ್ಟಮವಶ್ಯಂ ನಿಕೃಷ್ಟಮೀ ಸಂಸಾರಂ ೨೨

ಅಂಗನೆಯರ್ಕಳ ಸವತಿ ಜ
ರಾಂಗನೆ ತಾನವಳ ಸವತಿ ಸಂದಿರ್ದ ನಿಯ
ತ್ಯಂಗನೆಯಾ ಸವತಿಯುಮಂ
ಪಿಂಗಿಸಿ ಪುದುವಾೞ್ವೆನಕ್ಕೆ ಮುಕ್ತ್ಯಂಗನೆಯೊಳ್ ೨೩

ಮೇಲುತ್ತಂ ಸವಿಯುಱಿಸುವ ಗಾ
ವಿಲರಿರ್ಪವರಿರ್ಪೊಡಿಕ್ಕೆ ಮೆಳ್ಪಟ್ಟು ಜವಂ
ಕೊಲೆ ಕಾವರೊಳರೆ ಧರ್ಮವ
ತಲೆಗಾಯ್ಗುಂ ಧರ್ಮಮಾರ್ಗಮುಭಯಭವಕ್ಕಂ ೨೪

ದೇವಸದೇವಸಂಗಳಿಂ ಕುಂ
ದುವುವಲ್ಲದೆ ಬಳಮುಮಾಯುಃವುಂ ವಪುವುಂ ಪೆ
ರ್ಚುವುವಲ್ಲವು ವಿಷಯಸುಖ
ಕ್ಕವಚರ್ತೆಂ ಪಡೆದುಕೊಳ್ವೆನಕ್ಷಯಸುಖಮಂ ೨೫

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶಾರೀರಮಾನಸಾಗಂತುಕದುಃ
ಖಂಗಳನೆ ಮಾಟ್ಪುವದಱಿಂ
ಪಿಂಗುವೆನಿನ್ನೆನಗೆ ಜಿನನ ಚರಣಂ ಶರಣಂ ೨೬

ನರರರೆಬರ್ ವೈರಾಗ್ಯಂ
ದೊರಕೊಂಡೊಡೆ ತೊಱೆವೆವೆಂಬರನ್ನೆವರಂ ಸ
ಯ್ತಿರಲೀಯದಂತಕಂ ಗೋ
ಣ್ಮುರಿಗೊಂಡೆಱೆದೊಯ್ವೊಡಡ್ಡಬರ್ಪರುವೊಳರೆ ೨೭

ಭವಭವದೊಳ್ ಪೆರ್ಚಿದ ಕೆ
ರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಕರ್ಮಕಥಾ
ಶ್ರವಣಂ ಪ್ರೈತ್ರಿಕಮಾಗಿ
ರ್ದವರ್ಗೆ ಪಾಲ್ ಕಯ್ಪುಯಪ್ಪವೊಲ್ ಕಯ್ಪುವಲಂ ೨೮

ಕೆನ್ನೆಯ ನರೆಯುಂ ಕದಪಿನೊ
ಳುನ್ನುನ್ನಂ ನೆಗೆದ ತೆರೆಯುನೊಡ್ಡಿದ ಜರೆಯುಂ.
ಕನ್ನಡಿಯ ನೋಡಿ ತಱಿಸಲೇ
ಕನ್ನಡಿಕುಂ ವೃದ್ಧ ನೋಡ ನಿನ್ನಯ ಮೊಗಮಂ ೨೯

ಎಮ್ಮಾನೆಯೆಮ್ಮ ಕುದುರೆಯಿ
ವೆಮ್ಮರಸಿಯರೆಮ್ಮ ಮಕ್ಕಳಿವರೆಂಬೀ ಮ

ತ್ತಮ್ಮನದೊಳ್ ಕಯ್ಗ್ಗಳಿಯೆ ಗ
ಳುಮ್ಮನೆ ರಸೆಗಿೞಿದರೆನಿಬರಾನುಮಿಳೇಶರ್ ೩೦

ಹಾಸಕರಂ ಬುಧರ್ಗೆ ಸುಖಾ
ಭಾಸಕರಂ ವಿಷಯಿಗಳ್ಗೆ ಕಾಯಂ ಕವಿಗಾ
ಯಾಸಕರಂ ಪ್ರಾಣಿಗೆ ಸಂ
ತ್ರಾಸಕರಂ ಭೋಗಿಭೋಗದಂತುಟೆ ಭೋಗಂ ೩೧

ಎಂದಱಿದೀನಶ್ವರಶರೀರಾನಿತ್ಯತೆಯುಮನತಿಜಡಾತ್ಮಕಾತ್ಮಸ್ವಭಾವಮುಮನನಿತ್ಯಾಸಾರಸಂಸಾರಸ್ವಭಾವಮುಮನತ್ಯಧಿಕನವ್ಯಾಬಾಧೆಯುಮನತಿ ಪ್ರಾಜ್ಯರಾಜ್ಯದೂಷಣಮುಮನತ್ಯಗಣ್ಯತಾರುಣ್ಯವೈಗುಣ್ಯಮುಮನತ್ಯುದ್ದಾಮ ಭೋಗಭಂಗುರತೆಯುಮನಂತೆ ನಿಜಾಂತರಂಗದೊಳ್ ಭಾವಿಸಿ ಬಾರದ ಭವಂ ಬಂದ ಜೀವನ ನೆಗೞ್ತೆಯುಂ ಪ್ರತ್ಯಕ್ಷವಾಗಿ ನುಡಿದುದರ್ಕೆ ಕೊಕ್ಕರಿಸಿ

ಪಿರಿಯು ಸಿರಿಯುಂ ಜಿನಾಗಮ
ಪರಿಣತಮತಿ ಕೊಳೆದ ಪುಲ್ಲದಕ್ಕಂ ಬಗೆವಂ
ತಿರೆ ಬಗೆದು ಬಿಸುಡ ಬಗೆದಂ
ಶರೀರಸಂಸಾರಭೋಗನಿರ್ವೇಗಪರಂ ೩೨

ಎಂದು ತಱಿಸಂದಾಗಳ್

ನರಲೋಕ ಶ್ರೀಕಾಂತಾ
ವಿರಕ್ತಮಾದತ್ತು ಪರಮನಿರ್ವೇಗಪರಂ
ಪರೆ ನೆಗೞೆ ಮುಕ್ತಿ ಕಾಂತಾ
ನುರಕ್ತಮಾದತ್ತು ವಿಮಲವಾಹನನ ಮನಂ ೩೩

ಬರವೇೞ್ವಾತ್ಮೀಯ ಮಂತ್ರಿಪ್ರಮುಖರನವರೊಳ್ ನಿಶ್ಚಯಂಗೆಯ್ದು ಧಾತ್ರೀಭರಮಂ ಕೊಟ್ಟಾತ್ಮಜನ್ಮಂಗಧಿಕವಿಭವದಿಂ ಪಟ್ಟಮಂ ಕಟ್ಟಿ ದೀಕ್ಷಾಭರಮಂ ಕಯ್ಕೊಂಡು ಗೆಲ್ಲಂಗೊಳಲೆ ಬಗೆದನುತ್ಸಾಹದಿಂ ಜೈನಧರ್ಮೋದ್ಧರಣಂ ಭವ್ಯಾಬ್ಜಮಿತ್ರಂ ವಿನಯನಿಧಿ ಸುಹೃದ್ವತ್ಸಲಂ ವತ್ಸನಾಭಂ ೩೪

ಅಂತು ಸಾಮ್ರಾಜ್ಯದೀಕ್ಷಿತಂ ದೀಕ್ಷಾಭಿಮುಖನುಂ ಸಂಸಾರಪರಾಙ್ಮುಖ-ನುಮಾಗಿ ಪಲಂಭರರರಸು ಮಕ್ಕಳ್‌ವೆರಸು ಮೋಕ್ಷ ಮಾರ್ಗರೂಪಮಂ ಕೈಕೊಂಡು ಮೂಲಗುಣಾಂಗಳೊಳಮುತ್ಕೃಷ್ಟಚಾರಿತ್ರದೊಳಮುತ್ತರೋತ್ತರಂ ನೆಗಮಿತ್ತುಂ

ತನು ತನುವಾಗೆ ನೋಂತು ಪರಮಾಗಮಭಾವನೆಯೊಳ್ ನಿರಂತರಂ
ಮನಮಿರೆ ತನ್ನ ನಾಲಗೆ ಜಿನೇಂದ್ರಗುಣಸ್ತುತಿಗೆಯ್ಯೆ ತನ್ನೊಳಿಂ
ಬೆನೆ ಕರಣತ್ರಯಪ್ರಕೃತಿಶುದ್ಧಿ ನೆಗೞ್ದಿರೆ ಮುನ್ನಿನ ರಾಜ್ಯಲೀಲೆಯಂ
ನೆನೆಯದೆ ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮಂ ೩೫

ಅಂತು ತಾಳ್ದಿ ಷೋಡಶತೀರ್ಥಂಕರಭಾವನೆಗಳಂ ಭಾವಿಸಿ ಸಕಲಜಗತ್ರಯ ಕ್ಷೋಭಕಾರಿಯಪ್ಪ ತೀರ್ಥಂಕರಪುಣ್ಯಮಂ ಕಟ್ಟಿ ಕಾಲಾಂತರದೊಳ್ ಚತುರ್ವಿಧಾ ರಾಧನಪುರಸ್ಸರಂ ಸಮಾಧಿಮರಣದಿಂ ಶರೀರಪರಿತ್ಯಾಗಂ ಗೆಯ್ದು ಪಂಚಾಣೂತ್ತರೆ ಗಳೊಳಗುಣ ವಿಜಯದೊಳಹಮಿಂದ್ರನಾಗಿ ಪುಟ್ಟಿ ಪಂಚ ವಿಧಾಂತರಾಯಕರ್ಮ ಕ್ಷಯೋಪಶಮಸಮುದ್ಭವಪಂಚೇದ್ರಿಯನತೃಪ್ತಿ ಸಂಪಾದಿತಸ್ವಾತ್ಮಸುಖಂ ಸಾತ ಶುಭಪಂಚಸುಖಾನುಭವನಿರತನುಮಾಗಿ ವಿಮಲವಾಹನನಹಮಿಂದ್ರಸಾಗರೋ ಪಮಂಗಳೆಲ್ಲಮಂ ನೆರಪಿ ಭರತಕ್ಷೇತ್ರದೊಳೆರಡನೆಯ ತೀರ್ಥಂಕರಪರಮದೇವ ನಾಗಲೆಂದು ಬರಲಿರ್ಪಂ.

## ಗರ್ಭಾವತರಣ ಕಲ್ಯಾಣಂ

### ಗರ್ಭಸರೋರುಹದೊಳ್ ನೆಲಸಿ ೦

ಜಿನಭಾನು ಬಂದು ಭರತಾ
ವನಿಯೊಳ್ ಭವ್ಯಾಬ್ಜಬಂಧುವುದಯಿಸಿದಪ್ಪೊಂ
ನೆನೆದಱಿಗೆಂಬಂತೆ ಇಳಿಂ
ಪನಾಯಕಂಗಾದುದಾಗಳಾಸನಕಂಪಂ ೧

ಅಂತು ತನಗಾಸನಕಂಪಮಾಗೆ

ನೆಗೞ್ದ ಜಿತಶತ್ರು ನೃಪತಿಗೆ
ಮಗನಾದಪನಜಿತನಾಥನೆಂದಱಿದು ಮನ
ಕ್ಕೊಗೆದವಧಿಬೋಧದಿಂ ವಿಬು
ಧಗಣಾಗ್ರಣಿ ಬರಿಸಿ ಬೆಸಸಿದಂ ಧನಪತಿಯಂ

ಬೆಸಸಿದೊಡೆ ಮೂಱು ಪೊೞ್ತುಂ
ವಸುಧಾರೆಯನೊಸೆದು ಮೂಱುಕೋಟಿಯುಮರೆಯುಂ
ವಸುಪತಿ ಕಱೆವಂ ರಾಜಾ
ವಸಥದೊಳೇಂ ಪಿರಿದೊ ಜಿನನ ಪುಣ್ಯಾತಿಶಯಂ ೨

ಅಂತು ಮುನ್ನಮಾಱುದಿಂಗಳುಂಟೆನೆ ವಸುಮಯಮನಯೋಧ್ಯೆಯೊಳ್ ಧನದಂ ಕಱೆಯೆ ಕಱೆಯುತಿರ್ಪಿನಂ ಪ್ರಸಾದವರ್ಧನ ಜಾತವರ್ಧನ ಧೈರ್ಯ ವರ್ಧನ ಕೀರ್ತಿವರ್ಧನ ಮನೋವರ್ಧನ ಸೌಭಾಗ್ಯವರ್ಧನಹೇತುಭೂತೆಯರಂ ಪದ್ಮಾದಿಸರೋವರನಿವಾಸಿನಿಯರಂ ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಆಱುವರುಂ ದೇವಿಯರುಮಂ ಮತ್ತಂ ಪೆಱಪೆಱರುಮೆನಿಬರಾನುಂ ದೇವಿಯರುಮಂ ದೇವರಾಜಂ ವಿಜಯಸೇನಾ ದೇವಿಯ ಸಂಶೋಧನಾವಿಧಿವಧೂರಹಸ್ಯವ್ಯಾಪಾರ ಪರಾಯಣರುಂ ಪರಿಚಾರಿಕೆಯರುಮಾಗಿ ನೆಗೞ್ವಿಂತು ನಿಯಮಿಸೆ ನಿಯಮನಿಷ್ಠಿತೆಯರಾಗಿ

ರಸಭಾವಂಗಳೊಳಾಡಿ ಪಾಡಿ ಮಧುರಪ್ರಧ್ವಾನದಿಂ ದಿವ್ಯವ
ಸ್ತುಸುಗಂಧೇಂದ್ರತರುಪ್ರಸೂನಫಲಸಂತಾನಂಗಳಂ ತಂದು ಮೆ
ಚ್ಚಿಸಿ ಕೈಗೈಯೊಳೆ ಮಜ್ಜನಂಬುಗಿಸಿಯುಂ ಮುಂಪಿಂಚದೋರೊರ್ವರೊಳ್
ಬೆಸವೇೞ್ದಲ್ಲಿಗಮಲ್ಲಿಗಂ ವಿಜಯಸೇನಾದೇವಿಗಾದೇವಿಯರ್ ೩

ಭರತಮನೋದುವ ಸಪ್ತ
ಸ್ವರಮಂ ಗುಣಿಯಿಸುವ ಬೀಣೆವಾಜಿಪ ವಿದ್ಧಂ
ಬರೆವ ಪರಚಕ್ರಮಿಕ್ಕುವ
ಪರಿಹಾಸದೊಳಿರ್ಪಬಿನದಮವರ್ಗಳ ಬಿನದಂ ೪

ಲೀಳಾವನದೊಳ್ ವಿಹರಿಪ
ಲೀಳಾಸರದೊಳಗೆ ಮೂಡಿ ಮುಳ್ಕುವ ಲೀಲಾಂ
ದೋಳಮನೇಱುವ ಲೀಲಾ
ಕೇಳಿಗಳ್ ವಿಲಾಸಕೇಳಿಗಳ್ ನೃಪಸತಿಯಾ ೫

ಬರೆ ಮನೆಗಭ್ಯಾಗತರಾ
ದರದಿಂ ಗೃಹಶುದ್ಧಿ ಮಾಡುವಂತಜಿತಜಿನಂ
ಬರಲಿರೆ ಮಾಡಿದರಮರೇ
ಶ್ವರಸತಿಯರ್ ನೆರೆದು ಗರ್ಭಸಂಶೋಧನಮಂ ೬

ಅಂತಮರಾಂಗನೆಯರ್ ತಮತಮಗೆ ಗರ್ಭಶೋಧನಾವಿಧಿಯಂ ಮಾಡಿ ವಿವಿಧವಿನೋದಂಗಳಂ ಮೆಱೆಯುತಿರ್ಪನ್ನೆಗಂ ಜ್ಯೇಷ್ಠಮಾಸದಮಾವಾಸ್ಯೆಯೊಳ್ ರೋಹಿಣೀನಕ್ಷತ್ರದೊಳ್ ಬೆಳಗಪ್ಪಜಾವದಾಗಳ್ ಎಸೆವ ದಿವ್ಯಶಯನಗೃಹದ ವೈಡೂರ್ಯಪರ್ಯಂಕದೊಳ್ ಪವಡಿಸಿರ್ದು ಬೆಳಗಪ್ಪ ಜಾವದಾಗಳ್

ಕರಿವೃಷಭಮೃಗೇಂದ್ರ ಶ್ರೀವಧೂಪುಷ್ಪಮಾಲಾ
ಹರಿಣಧರವಿವಸ್ವನ್ಮೀನಕುಂಭದ್ವಯಾಬ್ಜಾ
ಕರಜಲಧಿಗಜದ್ವಿಟ್ಪೀಠಚಕ್ರಾಹಿಗೇಹ
ಸ್ಫುರಿತಮಣಿಸಮೂಹಜ್ವಾಳೆಯಂ ಕಾಂತೆ ಕಂಡಳ್ ೭

ಅಂತು ಷೋಡಶಶುಭಸ್ವಪ್ನ ದರ್ಶನಾನಂತರಂ ತನ್ನ ವದನಾರವಿಂದಮಂ ಗಜರಾಜಂ ಬಂದು ಪುಗುವುದುಮಂ ಕನಸುಗಂಡು ಮಂಗಳಪಾಠಕರ ಪುಣ್ಯರವಂಗಳೊಳಮಂತಃಪುರಪುರಂಧ್ರಿಯರ ಧವಳಮಂಗಳಗೇಯಂಗಳೊಳಮುನ್ನಿದ್ರೆಯಾಗಿ ಮಜ್ಜನಮಂಡನಾದಿನಿತ್ಯನಿಯಮವ್ಯಾಪಾರಮಂ ನಿರ್ವರ್ತಿಸಿ ತನ್ನ ಕಂಡ ಕನಸುಗಳಂ ನಿಜಮನೋವಲ್ಲಭಂಗಱಿಪಲೆಂದು

ಮಸೆದ ಮದನಬಾಣಾಟೋಪಮಂ ಕಣ್ಣ ಬೆಳ್ಪೇ
ಱಿಸಿದ ಮದನಚಾಪಾಟೋಪಮಂ ಪುರ್ಬುಗಳ್ ಪೋ
ಲ್ತೆಸೆಯೆ ವಿಜಯಚಿಹ್ನಂ ಚಿತ್ತಜಂಗೆಂಬಿನಂ ರಂ
ಜಿಸುವ ವಿಜಯಸೇನಾದೇವಿ ಕಣ್ಗೊಪ್ಪಿ ಬಂದಳ್ ೮

ಅಂತಾ ಮಹಾದೇವಿ ಧವಳಮಂಗಳಪ್ರಸಾಧನಾಲಂಕೃತಶರೀರೆಯುಮಮ ರಾಂಗನಾಜನವೀಜ್ಯಮಾನಧವಳಚಾಮರಕಳಾಪೆಯುಂ ಧವಳಕಂಚುಕಾವಚ್ಛನ್ನ ವೃದ್ಧಕಂಚುಕೀಜನಪರಿವೃತೆಯುಮಾಗಿಬಂದವನತೋತ್ತಮಾಂಗೆಯಾಗಿ ಸಿಂಹಾ ಸನಾರ್ಧೈಕದೇಶಮನಲಂಕರಿಸಿ ಸೋಂಕಿ ಕುಳ್ಳಿರ್ದು ತನ್ನ ಕಂಡ ಕನಸುಗಳೆಲ್ಲಮ ನನುಕ್ರಮದಿಂದಱಿಪೆ ದೇಶಾವಧಿಬೋಧಸಂಪತ್ಸಂಪನ್ನನಪ್ಪ ಜಿತಶತ್ರು ಮಹಾ ರಾಜಂ ತದೀಯಶುಭಸ್ವಪ್ನಫಲಮನಱಿದು ತನ್ನಂ ಸಫಲೀಕೃತಜನ್ಮನಾಗೆ ಬಗೆದು

ಕುಳತಿಳಕಂ ಜಗತೀತಳ
ತಿಳಕಂ ತಾಂ ನಮಗೆ ತನಯನಾಗಲ್ ಬಗೆದಂ
ಬೆಳಗುಗುಮಾತಂ ನಮ್ಮಯ
ಕುಳಮಂ ಶ್ರೀಜೈನಧರ್ಮಮಂ ಪ್ರಿಯದಯಿತೇ ೯

ಆದುತೆಂದೊಡೆ–ಭದ್ರಗಜದಿಂ ಭದ್ರಾಕಾರನುಂ ಗಜಲಾಂಛನನುಂ, ಧವಳ ವೃಷಭದಿಂ ನಿಜಕುಲಧವಳನುಂ ಧರ್ಮಧುರಂಧರನುಂ, ಸಿಂಹದಿಂ ದುರಿತ ಗಜ ಘಟಾವಿಘಟನನುಂ ಸ್ಯಾದ್ವಾದಾಚಲಶಿಖರಿಶೇಖರನುಂ, ಲಕ್ಷ್ಮೀಕಾಂತೆಯಿಂ ಸಾಮ್ರಾಜ್ಯಲಕ್ಷ್ಮೀಕಾಂತನುಂ ಮೋಕ್ಷಲಕ್ಷ್ಮೀವಲ್ಲಭನುಂ, ಕುಸುಮದಾಮದಿನು ದ್ದಾಮಕೀರ್ತಿಯುಂ ಭವ್ಯಮಧುಕರನಿಷೇವ್ಯನುಂ, ಚಂದ್ರನಿನಿಕ್ಷ್ವಾಕುಕುಲವಿಯ ತ್ತಳಚಂದ್ರನುಂ ಕುಮುದಾನಂದಕರನುಂ, ಮಾರ್ತಂಡನಿಂ ಸಕಲಭವ್ಯಪುಂಡರೀಕ ಪ್ರಬೋಧಕರನುಮುದ್ಭಾವಿಸಿ ವಿಮಳಕೇವಳಜ್ಞಾನನುಂ, ಮಿಷನಯುಗ್ಮದಿಂ ವಿನಿ ರ್ಜಿತಮೀನಕೇತ [ನ]ನುಮನಿಮಿಷಾಭ್ಯರ್ಚಿತನುಂ, ಪೂರ್ಣಕುಂಭದಿಂ ಸಂಪೂರ್ಣ ಪುಣ್ಯೋದಯನುಂ ಕನಕಕಳಶಶಾಲಿಲೀಲಾಭಿಷೇಕಯೋಗ್ಯನುಂ, ಕಮಳಾಕರದಿಂ ಕಮಳಾಕಾರನುಮತಿಸ್ವಚ್ಛಸ್ವಭಾವನುಂ, ಅಂಭೋಧಿಯಿಂ ಚತುರಶೀತಿಲಕ್ಷ ಲಕ್ಷಣಗುಣರತ್ನಾಂಭೋಧಿಯುಂ ಸಮುದ್ರಸಮಗಾಂಭೀರ್ಯನುಂ, ಸಿಂಹಪೀಠದಿಂ ಸ್ನಾನಪೀಠೀಕೃತಮಂದರಾಚಲನುಂ ಸಿಂಹಾಸನಾರೋಹಣೋಚಿತಾಷ್ಟೋತ್ತರ ಶತಶುಭಲಕ್ಷಣೋಪಲಕ್ಷಿತಾಂಗೋಪಾಂಗನುಂ, ಸುರವಿಮಾನದಿಂ ವಿಜಯವಿಮಾ ನಾವತೀರ್ಣನುಂ ವೈಮಾನಿಕವೃಂದವಂದ್ಯಮಾನಚಾರುಚರಣಾರವಿಂದನುಂ, ನಾಗ ಭವನದಿನುದಾತ್ತಭೋಗಿಯುಂ ತ್ರಿಭುವನೈಕಚೂಡಾಮಣಿಯುಂ, ರತ್ನರಾಶಿಯಿಂ

ದಷ್ಟಾದಶಸಹಸ್ರಶೀಲರತ್ನರಾಶಿಯುಂ ಪರಾರ್ಥ್ಯಗುಣಮಣಿವಿಭೂಷಣನುಂ, ಅಗ್ನಿಯಿಂ ದುರಿತವನದಾವಾಗ್ನಿಯುಂ ವಿಶುದ್ಧಧ್ಯಾನಾನಲನಿರ್ದಗ್ಧಕರ್ಮೇಂಧನ ನುಮೆನಿಸಿ ನಿಜವದನಾಬ್ಜಪ್ರವೇಶಿ ಗಜರಾಜನಂ ಕಂಡುದಱಿಂ ರಾಜಕುಂಜರಂ ನಿನಗೆ ತನಯನಾದಪನೆಂದು ಷೋಡಷಶುಭಸ್ವಪ್ನಫಲಮನಱಿಪೆ

ಧರಣೀಶ್ವರವಚನಾಮೃತ
ಪರಿಷೇಕದೆ ಗರ್ಭಭೂಮಿಯೊಳ್ ತೀರ್ಥಕರಾಂ
ಕುರಮುದಯಿಸಿದಂತಾಗಿರೆ
ಪರಮೇಶ್ವರಿ ಮಗನನಂದು ಪೆತ್ತಂತೊಸೆದಳ್ ೧೦

ವಿಜಯವಿಮಾನದಿಂ ವಿಜಯಸೇನಾದೇವಿಯ ಗರ್ಭಕ್ಕೆ ವಿಮಲವಾಹನ ಚರಾಹಮಿಂದ್ರಂ ಸೌಧಮೇಂದ್ರ ಸಂಪಾದಿತ ಸ್ವರ್ಗಾವತರಣ ಮಹಾಕಲ್ಯಾಣ ಪೂಜಾಪೂರ್ವಕಮವತರಿಸಿ ಗರ್ಭಾಂಬುಜಾಕರದೊಳಮೃತಕಿರಣಂ ನೆಲಸುವಂತೆ ಗರ್ಭಸರೋರುಹದೊಳ್ ಷಟ್ಚರಣಂ ನೆಲಸುವಂತೆ ಮಹೋತ್ಸವದಿಂ ನೆಲ ಸಿದಂ.

## ಜನ್ಮಾಭಿಷೇಕ ಕಲ್ಯಾಣಂ

## ಜನ್ಮಾಭಿಷೇಕ ಕ್ರಿಯೆಯಂ ನಿರ್ವರ್ತಿಸಿ[ದಂ]

[ಅಂತು ನೆಲಸಿ] ಪ್ರತಿದಿನಂ ಪ್ರವರ್ಧಮಾನನಾಗೆ

ಲಲಿತವಳಿತ್ರಯಂ ಕಿಡದೆ ಬೆಳ್ಪು ಮುಖಾಂಬುಜದೊಳ್ಪೊದಟ್ಟು ಪ
ಜ್ಜಳಿಸದೆ ತೆಳ್ಪಸಿಱ್ ಬಳೆದು ಬೀಗದೆ ಕರ್ಪು ಕುಚಾಗ್ರದೊಳ್ ಮನಂ
ಗೊಳಿಸದೆ ಮುನ್ನಿನಂತೆಸೆಯೆ ಭಾವಿಸಿ ನೋಟ್ಪ ಜನಕ್ಕೆ ವಿಸ್ಮಯಂ
ಬಳೆದಿರೆ ಗರ್ಭದೊಳ್ ಬಳೆದನರ್ಭಕನುತ್ಪಲಪತ್ರನೇತ್ರೆಯಾ ೧

ಆ ಸತಿಯ ಶುದ್ಧಗರ್ಭಾ
ವಾಸದೊಳುತ್ತಪ್ತಕನಕರುಚಿ ಸೊಗಯಿಸಿದಂ

ಭಾಸುರಶುದ್ಧಸ್ಫಟಿಕಾ
ಭಾಸದೊಳುಜ್ಜ್ವಲಿಸಿ ಬೆಳೆವ ಮಣಿದೀಪದವೋಲ್ ೨

ಆ ಧವಳೇಕ್ಷಣೆಗೆನಸುಂ
ಬಾಧೆಯನಾಗಿಪನೆ ನೆಲಸಿ ಗರ್ಭದೊಳವ್ಯಾ
ಬಾಧಂ ಮತಿಶ್ರುತಾವಧಿ
ಬೋಧಂ ತನ್ನೊಡನೆ ಪುಟ್ಟಿ ಪುಟ್ಟಿದ ದೇವಂ ೩

ಆಗಳಾ ಪರಮೇಶ್ವರಿಗೆ ಜಿನಸ್ನಾನಪವಿತ್ರೀಕೃತೋತ್ತಮಾಂಗಿಗೆ ಜಿನೋತ್ತಮಸ್ತವನದೊಳಂ ವ್ರತಂಗಳೊಳಂ ದಾನದೊಳಂ ಜಿನಮಹಾಪೂಜೆಗಳೊಳಂ ಮಹೋಪವಾಸಂಗಳೊಳಂ ಸರ್ವಭವ್ಯಜನವಾತ್ಸಲ್ಯದೊಳಂ ಪರಮಮುನಿಜನಶ್ರೀಪಾದದರ್ಶನದೊಳಂ ಜಿನವಸತಿಕರಣದೊಳಂ ಅಪ್ರತಿಮ ರತ್ನಪ್ರತಿಮಾನಿರ್ಮಾಪಣದೊಳಂ ಧರ್ಮಪ್ರಭಾವನೆಯೊಳಂ ಧರ್ಮಕಥಾ ಶ್ರವಣದೊಳಂ ಜಿನಧವಳಮಂಗಳಗೇಯಂಗಳೊಳಂ ತೀರ್ಥಾವಲೋಕನಕುತೂಹಲದೊಳಂ ಗರ್ಭದೋಹಳಂ ನೆಗಟ್ಟಿ;

ಕೃತಭವ್ಯೋತ್ಸವಮಾಘಶುದ್ಧದಶಮೀಪುಣ್ಯಾಹಯುಕ್ತಂ ಪ್ರಜಾ
ಪತಿಯೋಗಂ ಬೆರೆದಂದು ರೋಹಿಣಿಯೊಳಿಂದ್ರಾನಂದತೂರ್ಯಂ ಸರಿ
ತ್ಪತಿಘೋಷಕ್ಕೆಣೆಯಾಗೆ ಭೋರ್ಗ್ಗರೆಯೆ ಸಂದಿಕ್ಷ್ವಾಕುವಂಶೋದಯೋ
ನ್ನತಶೈಲಾಗ್ರದೊಳಾದುದಂದಜಿತತೀರ್ಥೇಶಾಬ್ಜಮಿತ್ರೋದಯಂ ೪

ಬಾಸುರ ಸುವರ್ಣ ವರ್ಣಂ
ದ್ವಾಸಪ್ತತಿಲಕ್ಷವರ್ಷ ಪರಮಾಯುಮಘ
ತ್ರಾಸಪಟು ನವಶತಾರ್ಧಶ
ರಾಸನಮಿತದೇಹನಜಿತನಪಗತಮೋಹಂ ೫

ಪರಮೇಶ್ವರಿ ನಿಜಸುತ ಮುಖ
ನಿರೀಕ್ಷಣದೊಳೊಡನೊಗೆದಗೆ ಪುಳಕಂಗಳಿನೇಂ
ಕರಮೆಸೆದಳೊ ಸುಗ್ಗಿಯೊಳಂ
ಕುರಿಸಿದುದೊಂದಭಿನವಾಮ್ರಲತಿಕಾಕೃತಿವೋಲ್ ೬

ಬಡವನದೊಂದಕ್ಷಯನಿಧಿ
ವಡೆದಂತಾನಂದ ಹೇತುವಂ ನಂದನನಂ
ಪಡೆದು ನೃಪಂ ನೊಸಲೊಳ್ ಕ
ಣ್ಬಡೆದಂತವರೇಂದ್ರಪದವಿವಡೆದಂತಿರ್ದಂ ೭

ಅನ್ನೆಗಂ ದ್ವಿತೀಯ ತೀರ್ಥಕರ ದಿನಕರೋದಯ ನಿವೇದಕಮಪ್ಪ ನಿಜಾಸನ ಕಂಪದಿಂ ಸಮುತ್ಪನ್ನಾವಧಿಬೋಧ ವಿಲೋಚನಂ ಸಹಸ್ರಲೋಚನನಱಿದು ಶಂಖ ಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಆರಣಾಚ್ಯುತರೆಂಬ ಕಲ್ಪೇಂದ್ರರುಂ ಜ್ಯೋತಿರ್ವಾಸಿಗಳುಂ, ವಿದ್ಯಾಧರೇಂದ್ರರುಂ ಬೆರಸು ಭಗವದಜಿತಜಿನಜನ್ಮಾಭಿಷೇಕ ಕಲ್ಯಾಣಪೂಜೆಯಂ ಮಾಡಲೆಂದಿಂದ್ರಾಣೀ ಸಮೇತಂ ಐರಾವಣ ಮಹಾವಾರಣಸ್ಕಂಧಾರೂಢನಂದು ಚತುರ್ನಿಕಾಯಾಮರಪ್ರಮುಖನಯೋಧ್ಯಾಭಿಮುಖನಾಗಿ.

ದಿವಿಜೇಂದ್ರಾನಲಕಾಲನೈಋತಿಸರಿನ್ನಾಥಾನಿಲಾಧೇಶ್ವರೇ
ಶ ವಿರಿಂಚರ್ ನಿಜವಾಹನಾಯುಧವಧೂನಾನಾಪ್ರಪಂಚಾಶರೀ
ರವಿಳಾಸೋಜ್ಜ್ವಲ ಮೂರ್ತಿಗಳ್ ತಳರ್ವುದುಂ ತಂತಮ್ಮ ದಿಗ್ಭಾಗದಿಂ
ನವಖಂಡಂ ಬರೆದಂತುಟಾದುದು ವಿಯಶ್ಚಕ್ರಂ ಮರುಚ್ಚಕ್ರದಿಂ ೮

ಸುರಲೋಕಮುಮಹಿಲೋಕಮು
ಮೆರಡುಂ ಪಾಟಾಗಿ ಬಂದುವೆನೆ ದಿವಿಜ ಫಣಾ
ಧರ ಲೋಕದೆ ತೊಟ್ಟನೆ ಕೊಳೆ
ನರಲೋಕಂ ತೀವೆ ಬಂದನಂದಮರೇಂದ್ರಂ ೯

ತ್ರಿದಶಸ್ತ್ರೀಜನನೃತ್ಯಮುಂ ದಿವಿಜತೂರ್ಯಾರಾವಮುಂ ಕಿನ್ನರೀ
ಮೃದುಗೀತಧ್ವನಿಯುಂ ಮನಂಗೊಳಿಸೆ ಬಂದಾನಮ್ರನಾಗಿರ್ಪುದುಂ
ಪದಪದ್ಮಕ್ಕಜಿತಂಗುಪಾದ್ಯಜಿನತೀರ್ಥೇಶಂಗೆ ಪಾದ್ಯಂಬೊಲೊ
ಪ್ಪಿದುದಾದ್ಯಾಮರರಾಜಮೌಳಿಮಣಿಗುಚ್ಛಾಚ್ಛೋಚ್ಚರೋಚಿರ್ಜಲಂ ೧೦

ಅಂತೆರಗಿ ಪೊಡವಟ್ಟನೇಕ ಭವದುರುಭಗದರ್ಹದವಲೋಕನ ಸಮಯ ಸಮುದಂಚದ್ರೋಮಾಂಚಕಂಚುಕಿತಗಾತ್ರನುಮನವರತವಿಗಳದಾನಂದಾಶ್ರು ಜಲ ಧಾರಾಪೂರ ಪರಿಪ್ಲಾವಿತ ನೇತ್ರನುಮಾಗಿ ಸಹಸ್ರನೇತ್ರಂ ತೀರ್ಥಂಕರ ಗುರುಗಳಂ ತ್ರಿಃಪ್ರದಕ್ಷಿಣಂಗೆಯ್ದು ಪೊಡಮಟ್ಟವರ್ಗೆ ಮಾಯಾನಿದ್ರೆಯಂ ಮಾಡಿ ಮಾಯಾಶಿಶುವಂ ಜಿನಜನನಿಯ ಮುಂದಿಕ್ಕಿ ದೇವನಂ ತರ್ಪುದೆನೆ ಶಚೀಮಹಾದೇವಿ ಸೂತಿಕಾಗೃಹಮಂ ಪೊಕ್ಕು ಮಾಯಾಶಿಶುವಂ ಮುಂದಿಕ್ಕಿ.

ಸುರಚಿರವಕ್ತ್ರಚದ್ರರುಚಿಯಿಂ ಶುಭಲಕ್ಷಣ ಲಕ್ಷಿತಾಂಗ ಸುಂ
ದರತೆಯಿನೊಪ್ಪೆ ಕಣ್ಣ ಪಸವೋಡುವಿನಂ ನಡೆನೋಡಿ ಪಲ್ಲವ
ಸ್ಫುರಿತ ಸಮುಲ್ಲಸತ್ಕರತಳಂಗಳಿನೆಟ್ಟಿಯೊಳೆತ್ತಿ ತಂದಳಾ
ದರದೆ ಪ್ರಲೋಮಪುತ್ರಿ ಪರಮೇಶ್ವರನಂ ಜಿತಶತ್ರುಪುತ್ರನಂ ೧೧

ಅಂತಷ್ಟಮಂಗಳ ಧಾರಿಣಿಯರಪ್ಪ ದೇವಾಂಗನೆಯರ್ಕಳ್ವೆರಸು ತಂದಿಂ ದ್ರಾಣಿ ಸೌಧರ್ಮೇಂದ್ರನ ಕಯ್ಯೊಳ್ ಸಕಲ ಜಗದಮೂಲ್ಯ ರತ್ನಮಂ ಕಯ್ಯೆಡೆ ಗುಡುವಂತೆ ಕೆಡುವುದುಂ ಮತ್ತಮೆರಗಿ ಪೊಡೆವಟ್ಟು ಪುನಃ ಪುನರಾಳೋಕನಂ ಗೆಯ್ದು-

ಎತ್ತಿ ಜಿನಶಿಶುವನಾಗಳ್
ನೆತ್ತಿಯ ಮೇಲಿಟ್ಟು ನೊಸಲ ಮೇಲಿಟ್ಟು ಸುರೇಂ
ದ್ರೋತ್ತಮನಿದಿರೊಳ್ ತಂದಿ
ಟ್ಟೆತ್ತಂ ಮನದಿಂದಗಲ್ಚಲಾಜಿದೆ ಬಟಿಯಂ ೧೨

ಅನಿಮಿಷನಯನದೆ ನೋಱ್ಪುದು
ಮನಿಮಿಷಪತಿ ಲೀಲೆಯಿಂದರಲ್ಚಿದುದಾಗಳ್
ಜಿನಪತಿ ವಕ್ತ್ರೇಂದು ಸಹ
ಸ್ರನೇತ್ರಲೋಚನಸಹಸ್ರ ಕುವಲಯವನಮಂ ೧೩

ಅಂತು ಕಣ್ಣಾಱೆ ನೋಡಿ ಮನಮಾಱೆ ಪೊಗಱ್

ಸಂದಮರಲೋಕಸುಖಮದ
ಱೊಂದು ಶತಾಂಶಕ್ಕೆ ವಾರದೆಂಬಿನೆಗಂ ಸಂ

ಕ್ರಂದನನ ಮನಕ್ಕಧಿಕಾ
ನಂದಮನಿತ್ತುದು ಜಿನಾಂಗಸಂಸ್ಪರ್ಶಸುಖಂ ೧೪

ಜಿನಮುಖ ಕಮಳ ವಿಲೋಕನ
ಜನಿತೋತ್ಸವದಿವಿಜಮುಖಗುಹಾಮುಖದಿಂ ಪೂ
ರ್ದನಿಯೆನೆ ಪೊಱಮಟ್ಟುವು ನಂ
ದನಂದ ಜಯಜಯ ರವಂಗಳತಿಮಧುರಂಗಳ್ ೧೫

ಎಂದು ದಿವಿಜರೆಲ್ಲಂ ಪೊಗೞೆ ದಿವಿಜೇಂದ್ರನಜಿತೇಂದ್ರನಂ ನಿಜಗಜೇಂದ್ರ ಬಂಧುರಸ್ಕಂಧಾರೂಢಂಮಾಡಿಯಮರೇಂದ್ರ ಗಿರೀಂದ್ರಕ್ಕಭಿಮುಖನಾಗೆ.

ಸುರಕರಿಗೆ ಮೊಗಂ ಮೂವ
ತ್ತೆರಡಾದುವೆ ಬೇಱೆ ವೇಱೆ ಮೊಗದೊಳವೆಂಟೆಂ
ಟು ರದನವೊಪ್ಪುಗುವೊಂದೊಂ
ದು ರದನದೊಳದೊಂದೆ ವಿಮಲ ಕಮಲವನಂಗಳ್ ೧೬

ಸರಸಿಜದಲರ್ಗಳ್ ಮೂವ
ತ್ತೆರಡೆಸೆವುವು ಬೇಱೆ ವೇಱೆ ಕೊಳದೊಳ್ ಮೂವ
ತ್ತೆರಡಲರ್ಗಳೊಳಂ ಮೂವ
ತ್ತೆರಡಲರ್ಗಳ್ ಬೇಱೆ ವೇಱೆ ಸೊಗಯಿಸಿ ತೋರ್ಕುಂ ೧೭

ಒಂದೊಂದೆಸಟ್ಗಳ ಮೇಲೆ ಪು
ರಂಧರ ಸೌಂದರಿಯರಲ್ಲಿ ಮೂವತ್ತಿರ್ವರ್
ಒಂದಾಡುವರೆಂದೊಡದೇ
ನೆಂದು ಸುರದ್ವಿಪದ ಲೀಲೆಯಂ ಬಣ್ಣಿಪುದೊ ೧೮

ಅಂತು ವಿಕ್ರಿಯಾಬಲದೆ ಗೀರ್ವಾಣವಾರಣಂ ವಿಗುರ್ವಿಸೆ.

ಎರಡನೆಯ ಕಲ್ಪದಮರೇ
ಶ್ವರನಜಿತಜಿನೇಶ್ವರಂಗೆ ಕೊಡೆವಿಡಿದಂ ಚಾ
ಮರಮಂ ತೃತೀಯಕಲ್ಪೇ
ಶ್ವರ ಮಾಹೇಂದ್ರೇಶ್ವರರ್ಕಳಿಕ್ಕಿದರಾಗಳ್ ೧೯

ಅಜಿತೇಂದ್ರನನಿತರರ್ ಕ
ಲ್ಪಜೇಂದ್ರರಿಕ್ಕಿಲದೊಳೆಸೆದು ವೇಷ್ಟಿಸಿಬರೆ ಕ
ಲ್ಪಜರೋಳಿಯೆ ಪಾಟಿ ಮಹಾ
ಧ್ವಜಂಗಳಂ ಪಿಡಿದು ಮುಂದು ಮುಂದನೆ ನಡೆದರ್ ೨೦

ಅಂತು ನಡೆಯೆ,

ನೆಗಟ್ದಿಮರನಗೇಂದ್ರಮನಾ
ದಿಗಿಭೇಂದ್ರಂ ಪೊರ್ದಿದಲ್ಲಿ ಸುರತೂರ್ಯರವಂ
ನೆಗೆಟ್ಟೆನೆಗಂ ಕನಕಾದ್ರಿಗೆ
ಖಗಾದ್ರಿ, ಸಂತಸದೆ ಬಿರ್ದುವಂದಂತಿರ್ಕುಂ ೨೧

ಬಗೆಗೊಳ್ವ ಭದ್ರಶಾಲಂ
ಸೊಗೆಯಿಪ ನಂದನದ ಮಿಸುಪ ಸೌಮನಸದ ಮೇ
ಗೊಗೆದುಜ್ಜ್ವಲ ಪಾಂಡುಕವನ
ದ ಗಾಡಿಯುಂ ಕನಕನಗಮದೇನೊಪ್ಪಿದುದೊ ೨೨

ವನದಂತಿಧ್ವನಿಯಿಂ ಕನನ್ಮಣಿಹಟತ್ಕೂಟಂಗಳಿಂದಗ್ರಭಾ
ಗನದೀನಿರ್ಝರಪೂರದಿಂದೆ ಸಮುದಪ್ರಧ್ವಾನಲೀಲಂ ಸವಂ
ದನಮಾಲಂ ಸಪತಾಕಮೆಂಬಿನಮದೇಂ ಚೆಲ್ವಾಯ್ತೊ ತೀರ್ಥಾಧಿನಾ
ಥನ ಬರ್ಪಲ್ಲಿಯೆ ಮಾಡುವಂತೊಸಗೆಯುಂ ಕಾರ್ತಸ್ವರಾದ್ರೀಶ್ವರಂ ೨೩

ಎಂದುಂ ನಕ್ಷತ್ರಗಣಂ
ಕುಂದದೆ ಬಲವರ್ಪ ಮೇರುಗಿರಿಯುಂ ಪರಮಾ
ನಂದದೊಳೆ ಮೂಟುಸೂಟ್ ಬಲ
ವಂದುದು ಜಿನಸವನಪೀಠಮೊಂದಮರಗಣಂ ೨೪

ಅಂತು ಬಲವಂದು ಬಲಾಂತಕನಘಬಲಾಂತಕಂಬೆರಸು ಬಳಾಹಕನಿರ್ಮಿತ ತ್ರಿವಿಧಸೋಪಾನದಿಕ್ಕೆಲ್ಲದೊಳಂ ದೇವನಿಕಾಯಂ ಬರೆ ಬಂದು ಸೋಪಾನ ಮನೇಱುವಲ್ಲಿ,

ಉದಿರ್ದ ಸುರದ್ರುಮಕುಸುಮಂ
ಪುದಿದಿರೆ ಸೋಪಾನಮಾರ್ಗದೊಳೆ ಮಿಡುಕಲ್ಕಾ

ಱದೆ ಕುಸುಮದೆಸಳ್ಗಳಿಂದೇ
ಱಿದುದೈರಾವತಗಜಂ ತ್ರಿವೇಣೀಕ್ರಮಮಂ ೨೫

ಅಂತು ಬರೆ ಪಾಂಡುಕವನದ ಪೂರ್ವದಕ್ಷಿಣದಿಗ್ವಳಯಮನಳಂಕರಿಸಿ.

ಶತಯೋಜನವಿಷ್ಕಂಭಂ
ಶತಾರ್ಧಯೋಜನ ಸಮಸ್ತ ವಿಸ್ತಾರ ಸಮ
ನ್ವಿತಮಷ್ಟಯೋಜನ ಪ್ರೋ
ಚ್ಛ್ರಿತಮೆನೆ ಪಾಂಡುಕಶಿಲಾತಳಂ ಸೊಗಯಿಸುಗುಂ ೨೬

ಪಾಂಡುಕಮಪ್ಪ ಪಾಂಡುಕಶಿಲಾತಲದೊಳ್ ಕನಕಾಭಭಾಸಿಗಳ್
ದಂಡಿಗೆಗಳ್ ಮನಂಗೊಳಿಸೆ ಮುತ್ತಿನ ಲಂಬಣಮೊಪ್ಪೆ ಚೆಲ್ವನೀ
ಟ್ಕೊಂಡು ಮಣಿಪ್ರತಾನದ ವಿತಾನಮೊಡಂಬಡೆ ತೀರ್ಥಕರ್ತುಗಾ
ಖಂಡಲನಿಂ ಜಗತ್ತ್ರಿತಯಮಂಡನಮಾಯ್ತಭಿಷೇಕ ಮಂಡಪಂ ೨೭

ಆ ಮಂಡಪದ ನಡುವಣ ಮಹೋತ್ತುಂಗ ಸಿಂಹಾಸನದಮೇಲೆ ಜಿನಾ
ರ್ಭಕನಂ ಪೂರ್ವಾಭಿಮುಖಮಾಗಿರಿಸಿದಾಗಳ್,

ಸ್ಫುರಿತ ಕನಕಪ್ರಭಂ ಪಾಂ
ಡುರದೊಳ್ ಪಾಂಡುಕಶಿಲಾತಳಾಪಟ್ಟಕದೊಳ್
ಪರಮನತಿಸ್ವಚ್ಛಸರೋ
ವರದೊಳಗಣ ಕನಕಕಮಳಮಿರ್ಪಂತಿರ್ದಂ ೨೮

ಆಗಳ್ ಶಚೀಪ್ರೇಯಸಂ ಜನ್ಮಾಭಿಷೇಕಮಂಗಳೋಪಕರಣನಾಗಿ

ಪರಮಜಿನನೆಂಬ ಧರ್ಮಾಂ
ಕುರಕ್ಕೆ ನೀರ್ವೊಯ್ದು ಪುಣ್ಯಫಲಮಂ ಪಡೆಯಲ್
ಸುರಪತಿ ವನಪಾಲಕನೊಳ್
ದೊರೆಯೆನೆ ಜನ್ಮಾಭಿಷೇಕವಿಧಿಗೊಡರಿಸಿದಂ ೨೯

ಅಂತೊಡರಿಸಿ.

ಪರಮಜಿನಾಭಿಷೇಕವಿಧಿ ತೀರದು ಕೂಪಜಲಂಗಳಿಂ ಸರೋ
ವರಜಲದಿಂ ಸರಿಜ್ಜಲದಿನಿಲ್ಲಿಗೆ ವೇಟ್ಪುದಗಾಧದುಗ್ಧ ಸಾ

ಗರ ಜಲಮೆಂದು ನಾಕಪತಿ ಪೇಟಿ ಸುರಾಚಲದಿಂ ಸುಧಾರ್ಣವಂ
ಬರಮಮರಾದ್ರಿ ನೀಳ್ದು ಗೆಲೆವಂದುದು ಜಂಗಮಸೇತುಬಂಧಮಂ ೩೦

ಕನಕಾಚಲದಿಂದಮರರ್
ಕನಕಾಂಗರ್ ಕನಕಕಲಶಹಸ್ತರ್ ದುಗ್ಧಾಂ
ಬುನಿಧಿವರವೋಳಿಗಟ್ಟಿ
ರ್ದನುಕರಿಸಿದರಮರಪತಿಯ ನೀಡಿದ ತೋಳಂ ೩೧

ಅಮರೇಂದ್ರಾಚಳದಿಂ ಪಂ
ಚಮಾಬ್ಧಿವರವೋಳಿಗಟ್ಟಿ ದಿವಿಜರ್ ಮೊಗೆದೀ
ವಮೃತಜಲಭರಿತ ಕಾಂಚನ
ಸಮುದಗ್ರಘಟಾಳಿಯೆಸೆದುವಿಂದ್ರನ ತೋಳೊಳ್ ೩೨

ಜಗದಾಹ್ಲಾದವಿನೋದಿಕಾರಿಗಳನತ್ಯಾಶ್ಚರ್ಯಸಂತಾಪ ಹಾ
ರಿಗಳಂ ವಾರಿಗಳಂ ಸುವರ್ಣಕಲಶಾನೀಕಂಗಳಿಂ ತೀವಿ ನಾ
ಕಗಣೈಕಾಗ್ರಣಿ ತೂರ್ಯಗೀತಮಧುರಧ್ವಾನಂ ದಿಗಂತಂಗಳೊಳ್
ನೆಗಟ್ವಿನ್ನಂ ಸುರಿದಂ ಜಿನೇಂದ್ರಶಿರದೊಳ್ ಸೌಧರ್ಮಕಲ್ಪೇಶ್ವರಂ ೩೩

ಸುರಿಯೆ ಸುರವೃಂದಮುತ್ಸವ
ಪರವಶಮುಂ ಮೊದಲೆ ಮಸಗಿ ಬೊಬ್ಬಿಱಿಯೆ ದಿಗಂ
ತರಮಂ ತೀವಿದುವು ನಿರಂ
ತರನಿಸ್ಸೃತನಿಬಿಡಕುಸುಮಪರಮಾಣುಗಳಂ ೩೪

ಆಗಳ್ ತೀರ್ಥಂಕರ ಕಲ್ಯಾಣಾಭಿಷೇಕಕ್ರಿಯೆಗೆ ಕಲ್ಯಾಣಕಳಶಮನೆತ್ತಿ ಮೃದುಮೃಣಾಳನಾಳಲೀಲಾಕೋಮಲಶರೀರಂಗೆ ನಾಳಿಕೇರರಸದೊಳಮಿಕ್ಷ್ವಾಕು ವಂಶೋತ್ತಂಸಂಗಿಕ್ಷುರಸದೊಳಂ ಭವ್ಯಕೋಕಿಳಕುಳಸಹಕಾರಂಗೆ ಸಹಕಾರ ರಸದೊಳಂ ತೀರ್ಥಕರತಿಲಕಂಗೆ ತೀರ್ಥಜಲಂಗಳೊಳಮಭಿಷೇಕಂಗೆಯ್ದು ಘೃತ-ದಧಿಮಹೋದಧಿಗಳ್ಗಮಟ್ಟಿ ತರಿಸಿ.

ಮುರಾರಿಗಭಿಷವಂ ಜಂ
ಭಾರಿಯಿನಾದತ್ತು ಘೃತಸಮುದ್ರದ ಘೃತದಿಂ

ಕ್ಷೀರ ಸಮುದ್ರದ ವಿಮಲ
ಕ್ಷೀರದಿನತಿಕಠಿನದಧಿಸಮುದ್ರದ ದಧಿಯಿಂ ೩೫

ಆಗಳ್ ಸಹಸ್ರಾಕ್ಷನಮೃತಜಲಧಿಯಿಂದಮರಸಹಸ್ರಂ ತೀವಿ ತಂದಷ್ಟ ಯೋಜನಾವಗಾಹಮುಮೇಕಯೋಜನಮುಖವಿಸ್ತಾರಮುಮಷ್ಟೋತ್ತರಸಹಸ್ರ ಶಾತಕುಂಭಂಗಳಿನನಿತೆ ಭುಜ ಸಹಸ್ರಂಗಳಿಂ ವಿಕ್ರಿಯಾ ಗುಣದಿಂ ವಿಗುರ್ವಿಸಿ.

ದಿವಿಜೇಂದ್ರ ಶಾತಕುಂಭೋಜ್ವಲವಿಗಳಿತ ಕುಂಭಂಗಳಂ ತಂದು ದುಗ್ಧಾ
ರ್ಣವ ಸಾರಕ್ಷೀರದಿಂದಂ ಮಿಸಿಸೆ ಭವದವಜ್ವಾಳನಂ ಬಾಳನಂ ಕೂ
ಟವಿಟಂಕ ಸ್ಥಾನದೊಳ್ ಸಿಲ್ಕಿರದೆ ಪರಿದು ಚಂಚಲ್ಲಸಚ್ಚಂದ್ರರೋಚಿ
ರ್ಧವಳಂ ಮೂಡಿತ್ತು ತನ್ಮಂದರಮಹಿಧರಮಂ ಕ್ಷೀರಧಾರಾಪ್ರವಾಹಂ ೩೬

ಸುರಿವುತ್ತುಂ ತೀವುತ್ತುಂ
ಪರಮಜಿನಸ್ನಾನಕನಕಕಲಶಂಗಳಿನಂ
ದರಘಟ್ಟ ಘಟೀಯಂತ್ರದ
ದೊರೆಯಾಯ್ತು ಸಹಸ್ರನೇತ್ರಬಾಹುಸಹಸ್ರಂ ೩೭

ಕವಿದತ್ತೊರ್ವಿಯೆ ಬಂದ ಪಾಲ ಪೊನಲೆವ್ಮಾಲೋಕಮಂ ತಾರಕಾ
ನಿವಹಂ ತೇಂಕಿಪುದಿಂದು ಮೂಡಿ ಮುಳುಗುತ್ತಿರ್ದಪ್ಪನರ್ದಿರ್ದ ಪೊಂ
ರವಿಯೊಂಬಾಕುಳ ಚಿತ್ತದಿಂ ಗ್ರಹಕುಳಂ ಬೆಂಬಿರ್ದ ದೇವಣ್ಣಿಂದಂ
ದಿವಿಜಾಧೀಶ್ವರನೆಂಬಿನಿಂ ಪ್ರಕಟಮಾಯ್ತಂಭಃಪ್ರವಾಹ ಪ್ಲವಂ ೩೮

ಆ ಸುರಗಿರಿಯೊಳ್ ದುಗ್ಧಮ
ಹಾಸಿಂಧುಕ್ಷೀರವರ್ಷಮುಂ ಮಾಡುತ್ತುಂ
ವಾಸವನೆ " ಗಿರೌವರ್ಷತಿ
ವಾಸವ " ಎಂಬೊಂದು ವಾಕ್ಯಮುಂ ಪ್ರಕಟಿಸಿದಂ ೩೯

ಬಾಳನ ನಾಸಾಪುಟದೊಳ್
ಮೇಳಿಸೆ ದುಗ್ಧೋದಬಿಂದುಸಂದೋಹಂಗಳ್
ಲೀಳೆಯಿನಾಂತುಸಿರ್ದೊಡೆ ಕಡು
ಗಾಳಿಯು ತಟಿಗೆಲೆಗಳಂತೆ ಪಾಟಿದರಮರರ್ ೪೦

ಕವಿತಂದು ಕೊಡೆ ದುಗ್ಧ
ಪ್ರವಾಹವಮಾಶ್ಚರ್ಯಮಾಗೆ ಮಾಡಿದುದಾಗಳ್
ಲವಣಾರ್ಣವಮಂ ಕ್ಷೀರಾ
ರ್ಣವದೊಳ್ ಸಮನಾಗೆ ಸವನದೊಳ್ ಜಿನಪತಿಯಾ ೪೧

ಕನಕಾದ್ರೀಂದ್ರಂ ಕನತ್ಕಾಂಚನ ರುಚಿರುಚಿರಂ ಮುನ್ನಮಿಾಗಳ್ ನಗು ತೊ
ಟ್ಟನೆ ಚಂಚಚ್ಚಂದ್ರ ರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂತಿರ್ದುದಾ ಕಾಂ
ಚನ ಶೈಲಾಧೀಶನೋ ಹೈಮವತಮಹಿಧರಾಧೀಶನೋ ಪೇಟಿಮೆಂತೆಂ
ಬಿನೆಗಂ ಸಂದಿಗ್ಧಮಾಗಿರ್ದುದು ಜಿನಸವನಸ್ನಿಗ್ಧದುಗ್ಧೋಪದಿಗ್ಧಂ ೪೨

ನೆಗಟ್ದಿರ್ದುದು ಪಾಲ್ಮರಂಗಳ
ತಿಗುಳ್ಗಳಿಕ್ಕಿದ ಕಷಾಯಜಳದಿಂದಿಂದ್ರಂ
ವಿಗತಕಷಾಯಂಗಜಿತಂ
ಗಗಣ್ಯಪುಣ್ಯಂಗೆ ಮಾಡಿದಂ ಮಜ್ಜನಮಂ ೪೩

ಮಳಯೋರ್ವೀರುಹ ಕುಂಕುಮದ್ರವಯುತಂ ಕರ್ಪೂರಮಿಶ್ರಂ ಮನಂ
ಗೊಳೆ ಮುತ್ತಾಳಿಕುಳ ಪ್ರಣಾಳಿ ಮಧುರಂ ಗಂಧೋದಕಂ ಸ್ವರ್ಣಮಂ
ಗಳಕುಂಭಂಗಳೊಳೊಂದುಮಾಡಿ ಪಲವುಂ ತೀರ್ಥಾಂಬುವಂ ತೀರ್ಥಕೃ
ತ್ತಿಳಕಂಗಟ್ತಿಯೆ ಮಾಡಿದಂ ಮಘವನಾ ಗಂಧೋದಕಸ್ನಾನಮಂ ೪೪

ಪವಿಯಂ ರಕ್ಷಿಸುವುದಟಿಂ
ಪವಿತ್ರನಾದನೆ ಸುರೇಂದ್ರನಜಿತನ ವಿನಮ
ದ್ಭುವನನ ಗಂಧೋದಕದಿಂ
ಪವಿತ್ರನಾದಂ ಪವಿತ್ರಗಾತ್ರನುಮಾದಂ ೪೫

ದಿವಿಜಾಧೀಶ್ವರನೊರ್ವನೆ
ಪವಿತ್ರನಾದನೆ ಪವಿತ್ರಮಾಯ್ತಮರನಗಂ
ಭುವನಂ ಪವಿತ್ರಮಾದುದು
ಸವನೋದಕದಿಂ ದ್ವಿತೀಯತೀರ್ಥೇಶ್ವರನಾ ೪೬

ಅಮೃತಜಲದಿಂದಮನಿಬರು
ಮಮರೇಂದ್ರರ್ ಮಿಸಿಸೆ ತನ್ಮನನಿಬರುಮಂ ತಾ
ನಮೃತಮಯದೃಷ್ಟಿಯಿಂ ನೋ
ಡೆ ಮಿಂದರಮರೇಂದ್ರರಜಿತನಯನಾಮೃತದಿಂ ೪೭

ಅಂತು ಜನ್ಮಾರಾತಿಗಪುನರ್ಜನ್ಮಲಕ್ಷ್ಮೀವಲ್ಲಭಂಗೆ ಪುಣ್ಯಜನ್ಮನೆನಿಸಿದ ದಿವಿಜರಾಜಂ ಜನ್ಮಾಭಿಷೇಕ ಕ್ರಿಯೆಯಂ ನಿರ್ವರ್ತಿಸಿ

ಸಂರಸಿಂಧೂದಕ ಯಕ್ಷಕರ್ದಮಲಸನ್ಮುಕ್ತಾಕ್ಷತಾಮೋದಬಂ
ಧುರಮಂದಾರ ಸುಧಾರಸಾನ್ನ ಮಣಿಮಾಲಾದೀಪ್ರದೀಪಾಸಿತಾ
ಗರುಧೂಪ್ಮತ್ರಿದಶಾವನೀಜಫಲದಿಂ ಸೌಧರ್ಮ ಕಲ್ಪೇಂದ್ರನಾ
ದರದಿಂದರ್ಚಿಸಿದಂ ದ್ವಿತೀಯ ಜಿನತೀರ್ಥೇಶಾಂಘ್ರಿಪದ್ಮಂಗಳಂ ೪೮

ಅಂತುತ್ಕೃಷ್ಟಾಷ್ಟವಿಧಾರ್ಚನೆಗಳಿಂ ಪೀಠಮನರ್ಚಿಸಿ ಸಿದ್ಧಭಕ್ತಿ ಪುರಸ್ಸರಂ ಪೂಜಾವಂದನೆಗೆಯ್ದು ಅನೇಕ ಸ್ತುತಿಸಹಸ್ರಂಗಳಿನಭಿಷ್ಟುತಿಗೆಯ್ಯೆ

ಕನಕೋರ್ವೀಧರಮೇಱಿ ಮಿಾವ ಮಣೆ ದುಗ್ಧೋದಂ ಜಲಂ ವಜ್ರಿಮ
ಜ್ಜನವಳ್ಳಂ ಪರಿಚಾರಕರ್ಕಳಮರರ್ ಗಂಧರ್ವರಂತಲ್ಲಿ ಗಾ
ಯನರಿಂದ್ರಾಂಗನೆಯರ್ಕಳಲ್ಲಿ ಕುಣಿವರ್ ತಾಮೆಂದೊಡೇನೆಂದು ಮ
ಜ್ಜನಮಂ ಬಣ್ಣಿಸುವೆಂ ದ್ವಿತೀಯ ಜಿನ ತೀರ್ಥೋದರ್ಕಬಾಲಾರ್ಕನಾ ೪೯

ಉರಗಾಧೀಶ್ವರ ನಿಚ್ಚಂ
ಸಿರನಾಲಗೆಯಿಂದೆ ಪೊಗಟ್ದು ತಣಿಯನೇ ಪರಮೇ
ಶ್ವರನಂ ಸುರೇಶ್ವರಂ ಸಾ
ಸಿರ ಕಣ್ಗಳೊಳೆಯ್ದೆ ನೋಡಿ ತಣಿಯನೆ ಸಭೆಯೊಳ್ ೫೦

ಕುಳದೀಪಕನಂ ತ್ರಿಜಗ
ತ್ತಿಳಕನಿಕ್ಷ್ವಾಕುವಂಶ ಚೂಡಾಮಣಿಯಂ
ಕುಳಿಶಧರಂ ಪೊಗಟ್ದು ಮನಂ
ಗೊಳೆ ಮಾಡಿದನೈಂದ್ರಮೆಂಬ ನಾಟಕವಿಧಿಯಂ ೫೧

ಪ್ರಕಟಾಂಗಿಕ ವಾಚಿಕ ಸಾ
ತ್ವಿಕಮಾಹಾರ್ಯಂಗಳೆಂಬ ನಾಲ್ಕಭಿನಯಮುಂ
ಸಕಲ ಪರೀಷಹಮೆನೆ ರಂ
ಜಕಮಾದುವು ರಂಗಮಧ್ಯದೊಳ್ ಕೌಶಿಕನಾ ೫೨

ಜನಿಯಿಸೆ ವೀಣಾಕ್ವಣಮುರ
ಜನಿನದ ತಾಳಪ್ರಣಾದ ವಂಶಧ್ವನಿಗಳ್
ಜನಮನೊರಲ್ಚಿದುವು ತತಾ
ವನದ್ಧಘನಸುಷಿರವಾದ್ಯಭೇದತರಂಗಳ್ ೫೩

ಪದವಿನ್ಯಾಸಕ್ಕದೆ ನೆಲೆ
ಯುದೆ ಕರವಿನ್ಯಾಸಮೆಸೆದುದೆಂಟುಂ ದೆಸೆಯೊಳ್
ವದನನ್ಯಾಸಂ ಸುರಲೋ
ಕದಿನತ್ತೆನೆ ನಾಟ್ಯಮುದ್ಭಟಂ ಶತಮಖನಾ ೫೪

ವಾಸವನಪೂರ್ವನಾಟ್ಯ ವಿ
ಳಾಸದೆ ತಾಂ ಭ್ರಮರಿಗುಡುವುದುಂ ನೇತ್ರಸಹ
ಸ್ರಾಸಿತರುಚಿ ಕರ್ನೆಯ್ದಿಲ
ಬಾಸಿಗಮುಂ ಬೀಸಿದಂತುಟಾದುದು ಸಭೆಯೊಳ್ ೫೫

ಪೊಳೆವಲರ್ಗಣ್ಣ ಬೆಳ್ಪುಗಳ ಪುರ್ವಿನ ಜರ್ವಿನ ಚೆಲ್ವುಗಳ್ ಮನಂ
ಗೊಳೆ ಸುರಕಾಂತೆಯರ್ ದಿವಿಜರಾಜನ ತೋಳ್ಗಳಮೇಲೆ ನಿಂದು ಗೊಂ
ದಳಿಸೆ ವಿಚಿತ್ರ ನರ್ತನ ವಿಳಾಸಮನಾಡೆ ಮರುದ್ವಿಲಾಸಿನೀ
ವಿಳಸಿತಲಾಸ್ಯಮುಂ ಮಘವತಾಂಡವಮೇಂ ರಮಣೀಯಮಾದುದೋ ೫೬

ಧರೆಯೊಳ್ ತೋರ್ಪಂತಾ ಕಕು
ಭರಂಗದೊಳ್ ತೋರ್ಪನನಿಲಪಥದೊಳ್ ತೋರ್ಪಂ
ಪರಿಣತಿವೃತ್ತಮನೆನೆ ಬಿ
ತ್ತರಿಸಿದನಂದಿಂದನಿಂದ್ರಜಾಲಿಗತನಮಂ ೫೭

ಅನಿಮೇಷಾಧಿಪತಿ ಸಹ
ಸ್ರನೇತ್ರನಾಗಳ್ ಸಹಸ್ರಕರನಾದಂ ನ
ರ್ತನದೊಳ್ ಸಹಸ್ರಪದನಾ
ದನೆನೆ ವಿರಾಜಿಸಿತು ಹಸ್ತಪದವಿನ್ಯಾಸಂ ೫೮

ಕುಲಿಶಿಯ ತೋಳ್ಗಳೊಳಮುರ
ಸ್ಥಲದೊಳ್ ಕರತಲದೊಳೆಸೆವ ಮಣಿಬಂಧದೊಳಂ
ಗುಲಿಯೊಳ್ ನಖದೊಳ್ ನರ್ತನ
ವಿಲಾಸಮಂ ಮೆಱೆದರಿಂದ್ರಸೌಂದರಿಯರ್ಕಳ್ ೫೯

ಈ ನಾಟ್ಯದ ಕೆಲದೊಳ್ ನಾ
ಮೇನಂ ರಂಜಿಸುವೆವೆಂದು ನೆಗೞ್ದೂರ್ವಶಿಯುಂ
ಮೇನಕೆಯುಂ ರಂಭೆಯುಮಿನಿ
ಸಾನತಮುಖಿಯರ್ಕಳಾಗಿ ಬೆಱಗಾಗಿರ್ದರ್ ೬೦

ಅಂತು ನಿಸ್ಸಂಗನಂ ಸಂಗೀತ ಪ್ರಸಂಗದೊಳಮರಪ್ರಂಗವನೋಲಗಿಸಿ ಮುನ್ನಮಾದಿದೇವಂಗೆ ಮಾಡಿದಂದದೊಳೆ ಮಂದರಾಚಲದೊಳಜಿತದೇವಂಗೆ ಜನ್ಮಾಭಿಷೇಕಕಲ್ಯಾಣಮಂ ಮಾಡಿ ಬಾಹ್ಯಾಭ್ಯಂತರಶತ್ರುಗಳ್ಗಜಿತನಪ್ಪುದರಿಂದ ಜಿತನಾಥನೆಂದು ಪೆಸರನಿಟ್ಟು ಸಹಜಚ್ಛಿದ್ರಕರ್ಣಂಗಳೊಳ್ ಕರ್ಣಕುಂಡಲ ಯುಗಳಂಗಳನಿಟ್ಟು ಮಣಿಮಯಾಲಂಕಾರಾಲಂಕೃತಂ ಮಾಡೆ

ಪರಮನ ಚರಮೌದಾರಿಕ
ಶರೀರಮುಜ್ವಳಸುವರ್ಣವರ್ಣಂ ರತ್ನಾ
ಭರಣದೆ ರಂಜಿಸಿದುದು ಮಂ
ದರಾದ್ರಿ ತಾರಾಗಣಂಗಳಿಂ ರಂಜಿಪವೋಲ್ ೬೧

ಸುರತೂರ್ಯ್ಯಾರಾವಮೆಂಟುಂ ದೆಸೆಯೊಳಮೆಸೆಯುತ್ತಿರ್ಪಿನಂ ಧರ್ಮತೀರ್ಥೇ
ಶ್ವರನಂ ಸೌಧರ್ಮಕಲ್ಪೇಶ್ವರನಮರನಗೇಂದ್ರಾಗ್ರದಿಂ ತಂದಯೋಧ್ಯಾ
ಪುರಿಗಾನಪ್ರೋತ್ತಮಾಂಗಂ ಜಿನಜನನಿಯ ಮುಂದಿಟ್ಟು ದಿವ್ಯಾಂಬರಾಲಂ
ಕರಣಸ್ರಗ್ಗಾಜಿಯಿಂ ಪೂಜಿಸಿ ಗುರುಜನಮಂ ರಾಗದಿಂ ದೇವರಾಜಂ ೬೨

ಆಗಳಾ ತೀರ್ಥಕರಗುರುಗಳ್ಗೆ ಜನ್ಮಾಭಿಷೇಕ ಕಲ್ಯಾಣಮುಮಂ ಶ್ರೀಮ ದಜಿತ ನಾಮಕರಣಮುಮನಜಿಪಿ ಜಿತಶತ್ರುಮಹಾರಾಜನಾ ರಾಜಮಂದಿರದ ಮುಂದಣ ಲಕ್ಷ್ಮೀಮಂಟಪದ ನಡುವಣ ಮಣಿಮಯೋತ್ತುಂಗಸಿಂಹಾಸನದ ಮೇಲೆ ಬಾಲಾರ್ಕನುದಯಂಗೆಯ್ದಂತಿರ್ದ ಬಾಲಾರ್ಕಸನ್ನಿಭನಂ ಪೂರ್ವಾಭಿ ಮುಖನಾಗಿರಿಸಿ ಪರವೋತ್ಸವಂ ಮಾಡಿ.

ದಿವಿಜಮನುಜವಾದ್ಯಂ ದೇಮವಮಾನುಷ್ಯಗೀತಾ
ರವಮುಮರಮನುಷ್ಯಪ್ರೇಯಸೀನೃತ್ಯಮೆತ್ತಂ
ಸವನಿಸೆ ಜಿತಶತ್ರುಕ್ಷತ್ರಿಯಾವಾಸದೊಳ್ವಾ
ಸವನಿನೆಸೆದುದಾಗಳ್ ಮತ್ತಮಾನಂದನೃತ್ಯಂ ೬೩

ಅಮರೇಂದ್ರಂ ಸಂತಾನಕ
ನಮೇರು ಮಂದಾರ ಪಾರಿಜಾತಾದಿ ಸುರ
ದ್ರುಮ ಪುಷ್ಪಪ್ರಕರದೆ ರಂ
ಗಮಧ್ಯದೊಳ್ ಮಾಡಿ ಮುಂದೆ ಪುಷ್ಪಾಂಜಳಿಯಂ ೬೪

ಆಗಳ್ ನಾಟ್ಯವಿಧಿಯಂ ನಿರ್ವರ್ತಿಸಿ ಭರತದ ಸಾರಸರ್ವಸ್ವಮುಮಂ ನಾಟ್ಯ ಧರ್ಮದೊಳ್ ಪ್ರತ್ಯಕ್ಷಂ ಮಾಡಿದಾಗಳ್

ಕಡುಚಲ್ವೆಯರೆರ್ದಾಡಿದ
ರೊಡನಾಡುವರವರ ಕೇರಿಯಾಡಿದುವೆಂಬೀ
ನುಡಿ ದಿಟಕೆ ನಾಟ್ಯದೋಜೆಗೆ
ಬಿಡೌಜನಾಡಿದೊಡೆ ದಿವಿಜೆಯರ್ ಮಾಣ್ದಪರೆ ೬೫

ನೋಡುವನಜಿತ ಜಿನೇಶ್ವರ
ನಾಡುವನಮರೇಂದ್ರನಮರವಾದ್ಯಂ ಲಯಮಂ
ಕೂಡುವುದಮರರಗಾಣರ್
ಪಾಡುವರೆನೆ ಸುಪಥಮಕ್ಕುಮಕ್ಕುಮೆ ಕುಪಥಂ ೬೬

ಅಂತು ಮಾರ್ಗದೇಸೆಯೆಂಬಿರ್ತೆಱದೊಳಂ ತಾಂಡವಲಾಸ್ಯಮೆಂಬೆರಡುಂ ವಿಕಲ್ಪದೊಳಂ ತಾನಾಡುತ್ತುಮಾಡಿಸುತ್ತುಂ ರಂಜಿಸೆ.

ಅಮರಪತಿ ಪಂಚಕಲ್ಯಾ
ಣ ಮಹಿಮೆಯಂ ಚಿತ್ತಶುದ್ಧಿಯಿಂ ಮಾಡಿ ಜಿನೋ
ತ್ತಮರ್ಗೆ ಲಘುಕರ್ಮನಾದಪೊ
ನಮಳಿನ ಧರ್ಮಾನುರಾಗಿಗಾಗದುದುಂಟೆ ೬೭

ಎರಡೆ ವಲಂ ಮುನ್ನಂ ಸಾ
ಸಿರ ಕಣ್ಗಳ್ ಬಟಿಕವಾದುದಿಂದ್ರಂಗಾ ಕ
ಣ್ಣೆರಡರೊಳೆ ನೋಡಿ ತಣಿಯದೆ
ಪರಮನ ರೂಪಂ ಸಹಸ್ರಲೋಚನನಾದಂ ೬೮

ಸುರಪತಿಯಾಟಮನೆಱಗುವ
ಸುರಕೋಟಿಯನ್ನೆದೆ ನೋಡಿ ನೋಡಿದನಾ ತ
ನ್ನೆರಡುಂ ಮುಯ್ಯುಂಗಳನೀ
ದೊರೆಯ ಮಗಂಬಡೆದೆನೆಂದು ಜಿತಶತ್ರು ನೃಪಂ ೬೯

ಉಂಗುಟಮನೆಳವಿ ಕರಚರ
ಣಂಗಳನಿನಿಸೆಳವಿ ಮೆಲ್ಲಮೆಲ್ಲನೆ ಲೀಲಾ
ಪಾಂಗದೊಳೆ ನೋಡಿದಳ್ ರಾ
ಜಾಂಗನೆ ನೃಪಸುತನ ವದನಚಂದ್ರಾಕೃತಿಯಂ ೭೦

ಸುತ್ತಣ ಸಭೆ ಕಣ್ಣೆಱಕಮೆ
ಗೆತ್ತು ಪಲರ್ ನೆಱೆದು ನೋಡೆ ನೃಪಸತಿ ಮನದೊಳ್
ಕೊರ್ಬಿ ಪಿರಿಯಲ್ ಬಗೆದು ಜಿ
ನೋತ್ತಮನೆಂದಂಚಿ ಮಾಣ್ದಳಾಸ್ಥಾಯಿಕೆಯೊಳ್ ೭೧

ತೊಱೆದ ಕುಚಕಲಶದಿಂದಂ
ಬಿಱಿವಿಟ್ಟೊಗೆತಪ್ಪ ಪಾಲ ಧಾರೆಯಿನಾಗಳ್
ಪರಮೇಶ್ವರಂಗೆ ಮತ್ತಂ
ಪರಮೇಶ್ವರಿ ಮಾಡುವಂತುಟಾಯ್ತಭಿಷವಮಂ ೭೨

ಆಗಳ್ ಸೌಧರ್ಮನುಪಸಂಹೃತನಾಟ್ಯಾವಸರನಾಗಿ

ಬಗೆಯುಂ ಪೊಗಟಲ್ ಪರಮನ
. ನಗಲ್ದು ಪೋಗಲ್ಕಮಾಱನಂತಂತೆ ಮನ
ಕ್ಕಗಿಬಗಿಯಾಗಿರೆ ಪೋಗಲ್
ಬಗೆದು ಮನಂ ಮುಗುಳ್ದು ಮಗುಳೆ ನೋಡಿದನಿಂದ್ರಂ ೭೩

ಅಂತು ನೋಡಿ

ಪರಮನ ಸೇವಾಸುಖದೊಳ್
ದೊರೆಗೆವರಲ್ ನೆಱೆಯದಮರಲೋಕದ ಸುಖಮಿ
ನ್ನಿರುಳುಂ ಪಗಲುಂ ದೇವನ
ಚರಣಮನೋಲಗಿಸುತಿರ್ಪನೆನಗಿದುವೆ ಸುಖಂ ೭೪

ಎಂಬಿನೆಗಂ

ಸುರಮಂತ್ರಿಗಳದನಱಿದೀ
ಪರಮನ ಕಲ್ಯಾಣಮಿನ್ನುಮಿರ್ದುವು ಮತ್ತಂ
ಬರವೇಟ್ಟುದು ನಡೆಯೆನೆ ಹೃ
ತ್ಸರೋಜದೊಳ್ ತಾಳ್ದಿ ನಿಂದನಜಿತನನಿಂದ್ರಂ ೭೫

ಅಂತು ಚತುರ್ನಿಕಾಯಾಮರಜನಂ ಬೆರಸು ಅಮರರಾಜನಮರನಗರಿಗೆ ಪೋದಂ.

## ಪರಿನಿಷ್ಕ್ರಮಣ ಕಲ್ಯಾಣಂ

# ಪರಿನಿಷ್ಕ್ರಮಣ ಪೂಜೆಯಂ ಮಾಡಿ[ದಂ]

ಕುಲಿಶಿ ಜಿನಮಧ್ಯಮಾಂಗುಲಿ
ಯೊಳಮೃತಸಂಕ್ರಮಣಮಪ್ಪಾಗೆ ಮಾಡಿದೊಡೆ ನಿಜಾಂ
ಗುಳಿಯನೆ ಸೇವಿಸಬಗೆದಂ
ಗಳಮಪ್ಪಾ ಜಿತಶತ್ರುಭವನದೊಳ್ ನತಭುವನಂ ೧

ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿಗೆಜ್ಜೆ ರಕ್ಕೆ ಕುಂ
ಡಲಯುಗ ಮುತ್ತು ಕಾಲ್ಗಡಗಮುಂದುಗೆ ಕಂಕಣ ಕಿಂಕಿಣೀಗಣಂ
ಕಲಮಣಿನೂಪುರಂ ತನಗೊಡಂಬಡೆ ಗಾಡಿಗೆ ಲೋಳೆವಾಯ್ ಮನಂ
ಗೊಳೆ ಭುವನೈಕಮಂಡನನೊಳೇನೆಸೆದಿರ್ದುದೊ ಬಾಲಮಂಡನಂ ೨

ಇದು ಧರ್ಮಾಂಕುರಮೆಂಬಿನಂ ವದನಪದ್ಮಾವಾಸವಾದೇವಿಗಿಂ
ತಿದು ಪುಣ್ಯಾಂಕುರಮೆಂಬಿನಂ ವದನದೊಳ್ ದಂತಾಂಕುರಂ ರೂಪುದೋ
ಱಿದುವವ್ಯಕ್ತವದಸ್ವಭಾವಮಧುರಂ ಮೇಣ್ ತೋರ್ಪುದುಂ ತನ್ನ ದೋ
ಷದೊಳಂ ತೋಱಿಪೆ ತನ್ನದೋಷಮನದೇಂ ದೇವಂ ವಿಶುದ್ಧಾತ್ಮನೋ ೩

ಇದು ಚೋದ್ಯಮೆನಗೆ ಪೇಟ್ದಪೆ
ನದೆಂತು ಪೇಟೆಂಬ ಸಕಲ ವಿದ್ಯೆಗಳುಮನೋ
ದದೆ ಕಲ್ತಂ ಜಗಮುಂ ನೋ
ಡದೆ ಕಾಣ್ಬಂ ಬಗೆಯುದಱಿವನೆಲ್ಲಮನಜಿತಂ ೪

ದಿನಕರನುದಯಿಸಲೊಡಮೇಂ
ದಿನದೀಪ್ತಿಗಳೊಡನೆ ಬಂದು ನೆಲಸುವವೊಲ್ ಪ್ರಾ
ಕ್ತನ ಜನ್ಮವಿದ್ಯೆಗಳ್ ಬಂ
ದನಿತುಂ ನೆಲೆಸಿದುವು ಸಕಲ ವಿದ್ಯಾನಿಧಿಯೊಳ್ ೫

ಅವಧಿಮತಿಶ್ರುತ ಬೋಧಂ
ಗವಗತತತ್ವಂಗೆ ಗುರುಗೆ ವಿದ್ಯಾಗುರು ಸಂ
ಭವಿಸಂ ದೀಕ್ಷಾಗುರು ಸಂ
ಭವಿಸನುಮೆನೆ ತನಗೆ ತಾನೆ ಗುರುವಾಗಿರ್ಪಂ ೬

ಜೀವಾದಿಪದಾರ್ಥಂಗಳೊ
ಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭ
ವ್ಯಾವಳಿಗೆ ವಿದಳಮಕ್ಕುಂ
ದೇವನನೀತೀರ್ಥಕರನ ಪುಣ್ಯಮಗಣ್ಯಂ ೭

ದಾರಕ ರೂಪದೆ ಜಿನವೃಂ
ದಾರಕನೊಡನೊಡನೆ ಬಾಲಕೇಳಿಗಳಂ ವೃಂ

ದಾರಕರೆ ಮಾಡಿ ದುರಿತವಿ
ದಾರಕನ ಮನಕ್ಕೆ ಮಾಡಿದರ್ ಸಂತಸಮಂ ೮

ತರವೇೞ್ ಮಂದಾರಸಂತಾನಕಸುರತರುದಾಮಂಗಳಂ ಪಣ್ಗಳಂ ಪೋ
ತರವೇೞ್ ದಿವ್ಯಾಂಬರಾಲೇಪನಮೃಗಮದಗಂಧಗಳಂ ಧೂಪಮಂ ನೀಂ
ತರವೇೞ್ ಕೇಯೂರಹಾರಪ್ರಗುಣಮಣಿವಿಭೂಷಾವಿಶೇಷಂಗಳಂ ಚಿ
ಚ್ಚರಮೆಂದಟ್ಟುತ್ತುಮಿರ್ಪಳ್ ತರಿಸಿ ಶಚಿಮಹಾದೇವಿ ದೇವಂಗೆ ನಿಚ್ಚಂ ೯

ನಿನಗಿಂದ್ರಾದಿಗಳಟ್ಟಿದರ್ ತುಡಲುಡಲ್ ಪೂಸಲ್ ಪುಗಲ್ವೇಡ ಮ
ಜ್ಜನಮಾರೋಗಿಸವೇಡ ಕಂದ ಪಸಿದೈ ಬಾ ಎಂದು ತಾಯ್ತಂದೆ ಬಂ
ದನಿವಂ ಗೆಯ್ಯೆ ಗುರೂಪರೋಧವಶದಿಂ ಸ್ನಾನಾನ್ನಪಾನಂ ವಿಲೇ
ಪನವಾಲ್ಯಾದಿಗೆ ತಾನೊಡಂಬಡುವನೇಂ ದೇವಂ ನಿರಾಪೇಕ್ಷನೋ ೧೦

ಅಂತು ಸುರಕುಮಾರರಾಜಕುಮಾರ ಪರಿವೃತನುಮಾಗಿ ಒಳೆವ ತೀರ್ಥಕರ ಕುಮಾರಂಗೆ ಅಷ್ಟಾದಶಲಕ್ಷಪೂರ್ವಂ ಕುಮಾರಕಾಲಂ ಪೋಗೆ,

ವನಿತಾನೇತ್ರೋತ್ಪಲಾನನ್ದನವಿಶದಶರಚ್ಚಂದ್ರಬಿಂಬೋಪಮಾನಾ
ನನನುರ್ವೀರಾಜ್ಯಭಾರಕ್ಷಮದಿಮಿಭಕರಾಕಾರ ಶುಂಭತ್ಕರಂ ಯೌ
ವನಲಕ್ಷ್ಮೀಕೇಳಿ ಶೈಲೋಪಮಭುಜಶಿಖರಂ ಶ್ರೀವಧೂ ಚಂಚನತ್ಕಾಂ
ಚನಲೀಲಾಮಂದಿರಶ್ರೀನಿಲಯಪೃಥುಲವಕ್ಷಸ್ಥಲಂ ತೀರ್ಥನಾಥಂ ೧೧

ಪರಮೌದಾರಿಕದೇಹ ಸೌಂದರತಯಿಂ ಹೇಮಪ್ರಭಾಭಾರ ಭಾ
ಸುರತೇಜಃ ಪ್ರಭೆಯಿಂ ವಿಲೋಲಧವಳಾಪಾಂಗೇಕ್ಷಣಚ್ಛಾಯೆಯಿಂ
ದರಹಾಸಮೃತದಿಂ ಸಲೀಲ ಪದವಿನ್ಯಾಸಂಗಳಿಂ ಮಂಜುಳ
ಸ್ವರಗಾಂಭೀರ್ಯದಿನೀಟ್ಟಿ ಕೊಂಡನಜಿತಂ ಕಾಂತಾಜನಸ್ವಾಂತಮಂ ೧೨

ಅಂತನಂಗಾವತಾರಮೆನಿಸಿದ ತಾರುಣ್ಯಾವತಾರದೊಳಭಿನವಯೌವನ ಲಕ್ಷ್ಮೀಸಮಾಲಿಂಗಿತಾಂಗನುಂ ಸರ್ವಾಂಗೋಪಾಂಗ ಸೌಂದರ್ಯನುಮಾದ ನಿಜ ತನೂಜಂಗೆ ವಿವಹೋತ್ಸವಮಂ ಮಾಡಲೆಂದು ಮನದೊಳೆ ಮಂತಣಮಿರ್ದು ಪರಮೇಶ್ವರನುಮೊಡಂಬಡುಗುಮೊಡಂಬಡನೆಂದು ತನ್ನ ಬಲ್ಲಂದದೊಳೆಲ್ಲಂ ನುಡಿದೊಡಂಬಡಿಸಲೆಂದು ಕೆಲಕ್ಕೆ ಬಂದು ಕೆಯ್ಯನೊತ್ತಿಯುಂ ಕಾಲನೊತ್ತಿಯುಂ ತತ್ತಪಣಂ ಗೆಯ್ದು.

ಆ ಪುಣ್ಯಮಕ್ಕೆ ಲೋಕ
ವ್ಯಾಪಾರಂ ನಡೆದ ಬಟ್ಟೆಯೊಳ್ ನಡೆವುದು ಮು
ನ್ನಾ ಪುರುಪರಮೇಶ್ವರನಂ
ತಾಪಾಂಗಿನೆ ಕಂದ ನೆಗಟಿಪ್ದುಡಾವುದು ದೋಷಂ ೧೩

ಮನವೊಸೆದಂದು ಪೆತ್ತೆಮಗೆ ಸಂತಸವಾಗೆ ವಿವಾಹಮಂಗಳಂ
ನಿನಗಿದುವೇಟ್ಟುದೇ ಸುತೆಯರಂ ಕುಡಲರ್ತಿಗರಾದಪರ್ಮಹಾ
ವನಿಪತಿಗಳ್ ವೆಱಿಂ ಮಗನೆ ನೋಟ್ಟುಮೆ ಪೇಟಿನೆ ತನ್ನ ಸಸ್ಮಿತಾ
ನನದೊಳೆ ಮಾಡ್ಪುದೆಂದವಱಿಪಿದಂ ಜಿತಶತ್ರುಗೆ ಜೈತ್ರ ಶಾತ್ರವಂ ೧೪

ಅಂತು ತನ್ನ ನುಡಿಗೊಡಂಬಟ್ಟುದಕ್ಕೆ ಸಂತಂಸಂಬಟ್ಟು ಗುಡಿಯಂ ಕಟ್ಟಿ ಬದ್ಧವಣಂ ಬಾಜಿಸಲ್ವೇಟ್ಟು ಜಿತಶತ್ರುಮಹಾರಾಜನಿಕ್ಷ್ವಾಕುವಂಶೋತ್ತಂಸಂಗೆ ಅನೇಕ ಮೂರ್ಧಾಭಿಷಿಕ್ತ ಕ್ಷತ್ರಿಯಕುಲಸಮುತ್ಪನ್ನೆಯರುಮಂ ನಿರತಿಶಯ ರೂಪಲಾವಣ್ಯ ಸೌಭಾಗ್ಯಹಾವಭಾವವಿಲಾಸವಿಭ್ರಮ ಸೌಂದರ್ಯಸಂಪನ್ನೆಯರು ಮಪ್ಪ ಸಾಸಿರ್ವರ್ ಕನ್ನೆಯರುಮಂಚೆನ್ನೆಯರುಮಂ ತಂದು ಮಹೋತ್ಸಾಹದಿಂ ಶುಭದಿನಪ್ರಶಸ್ತವಾರಮಂಗಳಕಲ್ಯಾಣಮುಹೂರ್ತದೊಳ್ ಪಾಣಿಗ್ರಹಣಂಗೆಯ್ಸಿ ವಿವಾಹ ಕಲ್ಯಾಣಮಂ ಮಾಡಿದಾಗಳ್.

ಕಡುಗಾಡಿಯ ಕಡುಚಲ್ಪಿನ
ಬೆಡಂಗುವೆತ್ತವರ ನಡುವೆ ಕಣ್ಗೊಪ್ಪಿ ಬೆಡಂ
ಗಿಡಿದಿರ್ದ ಕಲ್ಪಲತೆಗಳ
ನಡುವಣ ಕಲ್ಪಾವನೀಜಮಂ ವಿಭು ಪೋಲ್ತಂ ೧೫

ಅಂತು ಸಹಸ್ರಾಂಗನಾವಲ್ಲಭನಾದಜಿತವಲ್ಲಭನಂ ಸಾಮ್ರಾಜ್ಯಲಕ್ಷ್ಮೀವಲ್ಲ ಭನಂ ಮಾಡಲೆಂದು ಜಿತಶತ್ರುಮಹಾರಾಜಂ ಗಣಕರಣನಿರೂಪಿತಪ್ರಶಸ್ತ ಲಗ್ನೋದಯದೊಳಗಣ್ಯಪುಣ್ಯಾಂಬುಪೂರ್ಣಸ್ವರ್ಣಕಳಶಂಗಳಿಂ ಸೌಧರ್ಮೇಂ ದ್ರಂ ಮಾಡಿದ ಜನ್ಮಾಭಿಷೇಕಮಂ ಪೋಲೆ ರಾಜ್ಯಾಭಿಷೇಕಮಂ ಮಾಡಿ ಮಣಿ ಮಯೋತ್ತುಂಗಸಿಂಹಾಸನಮನೇಱಿಸಿ,

ಧವಳಛತ್ರತ್ರಯಂ ಶ್ರೀಧವಳಚಮರಜಶ್ರೇಣಿಗಳ್ ವಾರನಾರೀ
ಧವಳಾಪಾಂಗಂಗಳೆತ್ತಂ ಧವಳಿಸೆ ದಶದಿಗ್ಭಿತ್ತಿಯಂ ಚಂದ್ರರೋಚಿ

ರ್ಥವಳಂ ಲೋಕಕ್ಕೆ ಕೀರ್ತಿಪ್ರಸರಮೆಸೆವಿನಂ ಮಾಡಿದಂ ಪಟ್ಟಬಂಧೋ
ತ್ಸವಮಂ ಸಮ್ಯಕ್ತ್ವಲಕ್ಷ್ಮೀಧವಳನಜಿತನಾಥಂಗಯೋಧ್ಯಾಧಿನಾಥಂ ೧೬

ಅಂತು ಸಕಲಜಗತ್ಸಾಮ್ರಾಜ್ಯ ಪಟ್ಟಬಂಧಸಮುಲ್ಲಸಿತಲಲಾಟಪಟ್ಟನಾಗೆ ಭುವನೈಕಪೂಜ್ಯನಂ ಪೂಜಿಸಿ ದಿವಿಜರಾಜಂ ತೀರ್ಥಕರಗುರುಗಳಂ ಪೊಗಟ್ದು ಪೂಜಿಸಿ ಸಂಗೀತಪ್ರಸಂಗದೊಳಮರಪುಂಗವನಜಿತನಾಥನನೋಲಗಿಸುತ್ತುಮಿರೆ,

ಉತ್ಸವಮಂ ಜಗಜ್ಜನಕೆ ಮಾಡೆ ಸಹಸ್ರನಿತಂಬಿನೀವಿವಾ
ಹೋತ್ಸವಮುತ್ಸವಂ ನೆಗಟೆ ರಾಜಸಹಸ್ರದೊಳಾಯ್ತುಪಟ್ಟಬ
ದ್ಧೋತ್ಸವನಂದನಂ ಜನಮನೋಹರವಾಗಿಪೆನೆಂಬವೊಲ್ ವಸಂ
ತೋತ್ಸವಮಾದುದುತ್ಸವಪರಂಪರೆಗಳ್ ನೆಗಟುತ್ತುಮಿರ್ಪಿನಂ ೧೭

ಅಂತು ಬಂದ ವಸಂತಸಮಯದೊಳ್ ಸಹಕಾರಭೂರುಹದೊಳಂಕುರಂ ಪುಟ್ಟುವಂತೆ, ಮಲ್ಲಿಕಾಕುಸುಮದೊಳ್ ಪರಿಮಳಂ ಪುಟ್ಟುವಂತೆ ನಾಗಾಚಲ ದೊಳ್ ಸಿರಿಕಂಡಂ ಪುಟ್ಟುವಂತೆ, ಪೂರ್ವಾಚಲದೊಳ್ ಚಂದ್ರಂ ಪುಟ್ಟುವಂತೆ, ಕೋಗಿಲೆಗೆ ಕಳರವಂ ಪುಟ್ಟುವಂತೆ, ಅಶೋಕದ್ರುಮಕ್ಕೆ ಬಾಲಪ್ರವಾಲಂ ಪುಟ್ಟು ವಂತೆ ಬಂಧುಜನ ಶೋಕಾಪನೋದನಾಗಿ,

ಸಂಪಾದಿತ ಶಕ್ರಾಸನ
ಕಂಪಂಗಜಿತಂಗೆ ಸಕಲಭವ್ಯಶರಣ್ಯಂ
ಸಂಪೂರ್ಣಪುಣ್ಯನೆನಿಸಿ ಮ
ಗಂ ಪುಟ್ಟಿದನಜಿತಸೇನನೆಂಬೊಳ್ಪೆಸರಿಂ ೧೮

ಆಗಳ್ ಸೌಧರ್ಮಕಲ್ಪೇಶ್ವರಂ ಪರಮೇಶ್ವರನಂ ಮನ್ನಿಸಿ ಮನಂಗೊಂಡು ಬೀಳ್ಕೊಂಡು ಪೋದನಿತ್ತಲ್ ಕವಚಹರನಾದಜಿತಸೇನಕುಮಾರಂಗೆ ಯುವ ರಾಜ ಪದವಿಯಂ ಗೆಯ್ಯೆ

ಜಿತಶತ್ರುವೃದ್ಧರಾಜ್ಯೋ
ನ್ನತಿಯಿಂದಜಿತೇಂದ್ರನಾದಿರಾಜ್ಯೋನ್ನತಿಯಿಂ
ಸುತನೆಸೆದನಜಿತಸೇನಂ
ಜಿತಸಕಲಾರಾತಿ ಯೌವರಾಜ್ಯೋನ್ನತಿಯಿಂ ೧೯

ಅಂತಾ ರಾಜರತ್ನತ್ರಯಂ ರತ್ನತ್ರಯದಂತೆ ಭುವನತ್ರಯಪವಿತ್ರಮಾಗೆ ನೆಗೞ್ದಿತ್ತ್ಯುದ್ಘತಪೋಗ್ನಿಯಿಂ ಸುಡದಿರಂ ದೇವಂ ಬೞಿಕ್ಕಿನ್ನನ ನ್ನೆಗಮೀ ತನ್ವಿಯರೊತ್ತಿನೊಳ್ ಸಡಸುಡಂಗೆಯ್ದಿರ್ಪನೊಂದೊಯ್ಯಗೊಯ್ಯಗೆ ಸಾರ್ವಂಗಜನೊಯ್ಯಗೊಯ್ಯಗೊಳಸಾರ್ದಿರ್ದಳ್ಕಿದಂತುಳ್ಕಿದಂ ·ತಗಿದಂತಾಱನೆ ವೀತರಾಗನ ಮನಕ್ಕಾಸಕ್ತಿಯಂ ಪುಟ್ಟಿಸಲ್ ೨೦

ಗುರುಗಳ್ ಬಂದುಪರೋಧಿಸೆ
ಗುರುವಚನಮಲಂಘನೀಯಮೆಂದೆಡೆಗೊಂಡಂ
ಪರಿಣಯನಮನಂತೆ ವಧೂ
ಪರಿಗ್ರಹಾಗ್ರಹಮದುಂಟೆ ಪರಮನ ಮನದೊಳ್ ೨೧

ಕಾಂತೆಯರೊಳ್ ರಾಜ್ಯಶ್ರೀ
ಕಾಂತೆಯೊಳಾದಮ ಜಿತಾತ್ಮನಗ್ಗಲಿಸುವನ
ಲ್ಲೆಂತೆಂದೊಡೆ ಮುಕ್ತಿಶ್ರೀ
ಕಾಂತೆಯೊಳಗ್ಗಲಿಪನೆಡೆಯೊಳಗ್ಗಲಿಸುಗುಮೇ ೨೨

ಅಂತಾ ಪರಮೇಶ್ವರಂ ಸ್ವಭಾವಮಾರ್ದವಾರ್ಜವೋಪೇತನಂ ವೀತರಾಗನನುಮಪ್ಪುದಱಿಂ ಸಂಸಾರಶರೀರ ಭೋಗವೈರಾಗ್ಯಭಾವನೆಗಳಂ ಭಾವಿಸುತ್ತಿರ್ಪನ್ನೆಗಂ

ಉದಯಶಾಸ್ತಮುಂಟು ಸಂಸಾ
ರದ ಜೀವಗಣಕ್ಕದಕ್ಕುದಾಹರಣಮಿದೆಂ
ಬುದನೆನಿಸಿ ಪೂರ್ವಶೈಲದೊ
ಳುದಯಿಸಿ ಬಂದಪರಶೈಲಮಂ ರವಿ ಸಾರ್ದಂ ೨೩

ದಿಗ್ನಾರೀಮಣಿಮುಕುರಂ
ದಿಗ್ನಾಗಕರಾಗ್ರಕಳಿತಶಶಿಮಣಿಕಳಶಂ
ದಿಗ್ನಾಯಕಚೂಡಾಮಣಿ
ಲಗ್ನೋದಯಶಿಖರನೊಪ್ಪಿದಂ ತುಹಿನಕರಂ ೨೪

ಬೆಲಗಸೆದೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬಚ್ಚಲನೆಲೆದೋಂಟದೊಳ್ ಪರಿಯಿಸಲ್ ಪಱುಗೋಲ್ಗಳನಿಕ್ಕಿ ಪಾಯಿಸಲ್

ನೆಲೆಯಿನಿಸೆಂದು ನೋಡಲೊಳಪೊಕ್ಕು ದುಡುಮ್ಮಿಟಿದಾಡಲೀಸಲ
ಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ. ೨೫

ಅಂತೊಪ್ಪುವ ಚಂದ್ರಿಕಾಶ್ರೀವಿಲಾಸದೊಳ್ ನಿರವದ್ಯವಿದ್ಯಾಧರನಜಿತ
ನಾಥಂ ವಿದ್ಯಾಧರರೋಲಗಂಗೊಟ್ಟಿರ್ದು ದಿಗವಲೋಕನಂಗೆಯ್ದನನ್ನೆಗಂ

ಬೀಟುವಿನಂ ಕಣ್ಣುಳ್ಕೆ ನಿ
ರಾಳಂಬನಮಾಗೆ ಮನದ ಮೋಹಸ್ತಂಭಂ
ಬೀಟಿ ವಿಷಯಾನುರಾಗಂ
ತೇಟಿ ನಭಸ್ಥಲದೊಳಾದುದುಳ್ಕಾಪಾತಂ ೨೬

ಅದಂ ಕಂಡು ಅಸುಂಗೊಂಡು.

ಆದರದೆ ವಿಮಲವಾಹನ
ನಾದಂದಿನ ಭವದೊಳಾದ ನಿರ್ವೇಗಂಗಳ್
ಪೋದುವೆ ಪುಟ್ಟಿ ಪುನರ್ಭವ
ಮಾದುವೆ ಪಲ್ಲವಿಸುವನ್ನಮಾದುವೆ ಮನದೊಳ್ ೨೭

ಜಲದಾಟೋಪೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ
ಜಲರೇಖಾಕಾರಮಾಖಂಡಲ ಲಲಿತಧನುರ್ಲೀಲಮಾಕಾಳಿಕೀಸಂ
ಚಲಮೀಸೌಂದರ್ಯಮಿಂತೀನವರಸಚಯಮೀದೇಹಮೀಭೋಗಮೀಭೂ
ತಲರಾಜ್ಯಾಭೋಗಮೀ ಜೀವಿತಮಿದನಱಿಯುತ್ತಿರ್ದು ಮತ್ತೆಂತು
ಮಾಣ್ಬೆಂ ೨೮

ಕರುಣಿಸದೆ ಕೃತಾಂತಂ ಗೋ
ಣ್ಮುರಿಗೊಂಡೆಟಿದೊಯ್ವ ಪದದೊಳೆಳಸುವರೊಳರೋ
ಶರಣಪ್ಪರೊಳರೊ ಮೇಣ್ ಕಾ
ವರೊಳರೊ ಕರುಣಿಸುವರೊಳರೊ ಧರ್ಮಮೆ ಕಾಗುಂ ೨೯

ಒರ್ವನೆ ಸುರಗತಿಯೊಳ್ ಸುಟಿ
ದೊರ್ವನೆ ನರಗತಿಯೊಳಿಟಿದು ತಿರ್ಯಗ್ಗತಿಯೊ
ಳೊರ್ವನೆ ನಾರಕಗತಿವೊ
ಕ್ಕೊರ್ವನೆ ದೇಹಿಗೆ ಸಹಾಯರೊರ್ವರುಮೊಳರೇ ೩೦

ಇವರಾರಾನಾರ್ಗೆನಗೀ
ಭವಮಲ್ಲದೆ ಕಟಿಿದ ಭವದ ತಾಯ್ ತಂದೆ ತನೂ
ಭವರೆಲ್ಲರುಮೆಲ್ಲಿದರೆಂ
ದವಧರಿಸದಿದೇಂ ಜಡಸ್ವಭಾವನೊ ಜೀವಂ ೩೧

ಅಜಿಿಯಲರಿದರಿದು ದೀಕ್ಷೆಗೆ
ತಜಿಿಸಲಲರಿದೆರಡುಮಾಗಿ ತಪದೊಳ್ ತನುವಂ
ನಿಜಿಿಸಲರಿದೆನಿಸುವಜಿಿತಮೆ
ಪೆರತಲ್ಲದುಮಲ್ತೆ ತಾನೆ ಬೋಧಿಯುಮಕ್ಕುಂ ೩೨

ಪಾವನ ಚಾರಿತ್ರ್ಯಪಥ
ಸೇವೆಯೆ ದೋಷತ್ರಯಂಗಳಂ ಕಿಡಿಸೆ ತಪೋ
ಭಾವನೆಯೊಳೆಸೆವನಾಮಯ
ನಾವನುಮಾಮುನಿಯೆಂ ಪರಮಧರ್ಮಕ್ಕಾರ್ಮಮಂ ೩೩

ಎಂದಿಂತು ಸ್ಮರಿಸುತ್ತುಮಿರ್ಪನ್ನೆಗಂ

ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂ
ವಾಸಿ ಸಮೀರನೇರಣೆಗನಾಗೆ ನಿದಾಘದ ದೀಪ್ತಿವರ್ತಿಯೊಳ್
ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ವಿನಂ ಪಟಿಂ
ಗಾಸಿನ ಪೊನ್ನ ಗಂಟೆಯವೊಲೊಪ್ಪಿದುದುದ್ಗತ ಭಾನುಮಂಡಲಂ ೩೪

ಅಂತು ಸಕಲ ಕಮಲಾಕರ ಪ್ರಬೋಧಕರ ದಿವಸಕರನುದಯಶಿಖರಿಶೇಖರನಾಗೆ ತೀರ್ಥಕರ ಪರಮದೇವನಂ ಪ್ರಬೋಧಿಸುವಭಿಪ್ರಾಯದಿಂ ಬ್ರಹ್ಮ ಕಲ್ಪಾಂತರ ವಾಸಿಗಳಪ್ಪ ಲೋಕಾಂತಿಕದೇವರಜಿತದೇವಾಂತಿಕಕ್ಕೆ ಬಂದು

ಭಗವತ್ಪಾದಪಯೋರುಹಕ್ಕೆ ವಿನಯಂ ಕೈಗಣ್ಮೆ ಗಂಧಾಕ್ಷತಾ
ದಿಗಳಿಂದರ್ಚಿಸಿ ದೇವ ತೀರ್ಥಕರನೈ ಮೋಕ್ಷಕ್ಕೆ ಕೊಂಡೊಯ್ವ ದೀ
ಕ್ಷೆಗೆ ಮೈಗೊಳ್ಳದನಿತ್ಯಮೆಂದೆನಿಸುವೀ ಸಾಮ್ರಾಜ್ಯ ಮೋಹಕ್ಕೆ ದಂ
ದುಗದಿಂ ಪ್ರಾಕೃತಮರ್ತ್ಯನಿರ್ಪ ತೆಱದಿಂ ನೀನಿಂತಿರಲ್ ತಕ್ಕುದೇ ೩೫

ನೀಂ ಚರಮ ದೇಹಧರನೈ
ಪಂಚೇಷುವನಿಕ್ಕಿ ಗೆಲ್ದು ಪಂಚೇಂದ್ರಿಯಮಂ

ಪಂಚ ಮಹಾಕಲ್ಯಾಣಮ
ನಿಂ ಚೆಚ್ಚರಮೆಯ್ದಿ ಪಡೆಯ ಪಂಚಗತಿಯಂ ೩೬

ಕಷ್ಟತರಮಂ ಕಷಾಯಚ
ತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾ
ತುಷ್ಟಯಮನಿನ್ನನಂತ ಚ
ತುಷ್ಟಯಮಂ ಪೊರ್ದು ಪೊರ್ದದಿರು ಸಂಸ್ಕೃತಿಯಂ ೩೭

ರ್ರಾಜ್ಯ ಮನುೞಿ ಪರಮತಪೋ
ರಾಜ್ಯದೊಳೆಸಗಜಿತ ವಿಜಿತಕಿಲ್ಬಿಷ ನಿನಗಿಂ
ತ್ಯಾಜ್ಯಂಪರಿಗ್ರಹಂ ದಲ್
ಪ್ರಾಜ್ಯಂ ತಪಮದುವೆ ಪಾಲ್ಯಮಾ ಕೈವಲ್ಯಂ ೩೮

ಸಂಗತ ಜಿನಧರ್ಮ ಮತಿಗೆ
ನಾಂಗಳ್ ನಿಱಿಯೆ ತೆಱಿಯೆ ಬಣ್ಣಿಸೆಮಾದಿ
ತ್ಯಂಗೆ ಸೊಡರೆತ್ತುವೀ ಗಾಂ
ಪಿಂಗಾಗರಮಾಗಿ ತೊೞಿಗೆ ನೀರಡುಕುವವೋಲ್ ೩೯

ಶ್ರೀಮದ್ವೃಷಭಜಿನಂ ಧ
ರ್ಮಾಮೃತಮಂ ಕಱೆದು ಪೋದನಾ ಸಂತತಿಯೊಳ್
ನೀಮಿರ್ದಿರೆ ಕಱೆವುದು ಧ
ರ್ಮಾಮೃತಮಂ ಭವ್ಯಸಸ್ಯಸಮಿತಿಗೆ ದೇವರ್ ೪೦

ಎಂದವರ್ ತನ್ನಂ ಪ್ರತಿಬೋಧಿಸಿ ಮೊದಲಿಸಿ ನುಡಿಯಲೊಡಂ—

ಬೆಳಗಿದ ಮಣಿದರ್ಪಣಮಂ
ತಿಳಿದ ಸರೋವರಮನಿೞಿಸಿ ನಿರ್ಮಳಮದೆ ನಿ
ರ್ಮಳಿನತರಮಾಯ್ತು ಜಗತೀ
ತಿಳಕನ ನೆಗಟ್ದ ಜಿತಜಿನನ ಚಿತ್ತಮುದಾತ್ತಂ ೪೧

ಅಂತು ಶುದ್ಧ ಚಿತ್ತನಾಗಿ

ಗುರುಗಳ್ಗೆಲ್ಲಂ ತ್ರಿಲೋಕೀಗುರು ನಿಜವಿಜಯೋದ್ಯೋಗಮಂ ಪೇೞ್ದು ಕಲ್ಪಾ
ಮರಸೈನ್ಯಂ ಭಾಪು ಭಾಪೆಂಬಿನೆಗಮಜಿತಸೇನಂಗೆ ರಾಜ್ಯಾಭಿಷೇಕಂ

ಬೆರಸಾಗಳ್ ಪಟ್ಟಬದ್ಧೋತ್ಸವಮನತಿಶಯಂ ಮಾಡಿ ಸಾಮ್ರಾಜ್ಯದೀಕ್ಷಾ
ಗುರು ತಾಳಲ್ ದೀಕ್ಷೆಯಂ ಭೋಂಕೆನೆ ತಳರ್ದನಯೋಧ್ಯಾಪುರೀ ಮಧ್ಯದಿಂದಂ ೪೨

ಅಂತು ಸೌಧರ್ಮೇಂದ್ರ ಸಂಪಾದಿತ ಪರಿನಿಷ್ಕ್ರಮಣ ಕಲ್ಯಾಣ ಪೂಜಾಪರಿಕರನನೇಕಮೂರ್ಧಾಭಿಷಿಕ್ತ ಭೂಭೃಚ್ಚಕ್ರಂಬೆರಸು ಸಕಲ ಕುಲಾಚಲ ಚಕ್ರಂ ಬೆರಸು ಮೇರುಮಹೀಧರಮೆ ತಳರ್ವಂತೆ ತಳರ್ವಾಗಳು ಮುಂದೆ ಬಂದ ಅನರ್ಘ್ಯ ರತ್ನಮಯ ಶಿಬಿಕಾಲಂಕೃತಸ್ಕಂಧರಾಗಿ,

ನಡಪುತುಮೊಯ್ದರೇಟಡಿವರಂ ಧರಣೀಶ್ವರರೊಯ್ದರಾಗಳೇ
ಟಡಿವರಮತ್ತಲಂಬರಚರರ್ ಬಟಿಕೇಟಡಿಯುಂ ಸುರಾಸುರರ್
ತಡೆದಿರದೊಯ್ದರತ್ತಲಮರೇಶ್ವರರಾ ಪರಮೇಶ್ವರಂಗೆ ಬಂ
ದಡಿಗೆ ವಿನಮ್ರರಾಗಿಯೆ ಸಹೇತುವನಂಬರಮುಯ್ದರೀಶನಂ ೪೩

ಅಂತು ಸಕಲದಿಗ್ವಲಯಮಂ ನಿಜಪ್ರಭೆಯಿನಲಂಕರಿಸುವ ಸುಪ್ರಭೆಯೆಂಬ ಸಿವಿಗೆಯನೇಱಿ ರಾಗಹೇತುಕಂ ತಾನಾಗಿಯುಂ ತನಗೆ ವಿರಾಗಹೇತುವಾದ ಸಹೇತುಕವನಕ್ಕೆ ಸಕಲಭುವನಭವನ ಪಾವನಮಪ್ಪ ಪರಮೇಶ್ವರಂ ಬರೆ ;

ಸುತಮೋಹದೆ ಪಿತೃಮೋಹದೆ
ಪಿತೃಸುತರೊಡವಂದರಶ್ರುಪೂರಿತನಯನರ್
ಜಿತಶತ್ರುನೃಪತಿಯುಮಾ ವಿ
ಜಿತಸೇನೆಯುಮಜಿತಸೇನನುಂ ಬಟಿವಟಿಯಂ ೪೪

ಜಿನ ಪಿತೃಗಳ್ ಜಿನತನಯಂ
ಜಿನೇಂದ್ರತವರೆಲ್ಲಮೊಡನೆ ತಳರಲೊಡಂ ಬಿ
ಮ್ಮನೆಯಾಗಿ ಮದುವೆಗಳುಪಿದ
ಮನೆಯಂದದಿನಿರ್ದುದಂದಯೋಧ್ಯಾನಗರಂ ೪೫

[ಇಂತು] ಬಿನ್ನನಾದ ಪೊಟಲಂ ಪರಮೇಶ್ವರನ ಬಟಿವಟಿಗೊಂಡು ಪೋಪ ಪುರಜನಂಗಳುಮಂ ಕಂಡು ಅಂತಃಪುರದೊಳಿರ್ದ ಸಹಸ್ರಾಂಗನೆಯ ರಾಕುಳ ವ್ಯಾಕುಳೆಯರಾಗಿ,

ದೇವನನಾ ಲೋಕಾಂತಿಕ
ದೇವರ್ ವಂದೇನನಪ್ಪೊಡಂ ಗಟಿಪಿ ತಪೋ
ಭಾವನೆಗೆಱಗಿಸಿದರ್ ನಮ
ಗಾವುದು ಸೂಟಿಕ್ಕ ಪೇೞಿಮಿನ್ನೇಗೆಯ್ವೊಂ ೪೬

ಎಲ್ಲಿಲ್ಲದ ಸುರಗಣಿಕೆಯ
ರೆಲ್ಲಿಲ್ಲದ ದೇವಿಯರ್ಕಳಗಲರುಸಿರ್ಪ
ತ್ತಿಲ್ಲ ನಮಗವರೆ ಜಗತೀ
ವಲ್ಲಭನಂ ಪಚ್ಚಿವಚ್ಚಿ ಮೆಚ್ಚಿಸಿಕೊಂಡರ್ ೪೭

ಅಂತು ಕೆಲರಲ್ಲಿ ವಿವೇಕ ವಿಕಳೆಯರಾಗಿ ನುಡಿಯೆ ವಿವೇಕಿಗಳಂ ಬರಿಸಿ,

ಸುರಲೋಕ ಸುಖಮನೊಲ್ಲದೆ
ನರಲೋಕಕ್ಕಿರದೆ ಬಂದು ಮುಕ್ತಿಶ್ರೀಯೊಳ್
ನೆರೆಯಲ್ ಪೋದಪನಱಿಯಿರೆ
ಸುರವಧುವರನಂತು ಬಗೆದು ಪುಟ್ಟನೆ ದೇವ- ೪೮

ಆವೀ ನೆರಪಿದ ದುಷ್ಕೃತ
ಮಾವುದು ಗಡ ! ನಡೆಯಿಮೊಡನಸುಂಗಳೆದಪಮಾ
ದೇವಂ ಬಲ್ಲಿದನೆಮಗೆ ಮ
ನೋವಲ್ಲಭನಿಂತುಟೆಂದು ಬಗೆವೇಟ್ಟಿಪನೆ ೪೯

ಬಿಡಿಮಿಂದೀ ವರರಾಜಹಂಸೆಗಳನಿನ್ನೀ ರಾಜಕೀರಂಗಳಂ
ಬಿಡಿಮಿಂತೀ ಮೃಗಪೋತಕಂಗಳನಿವಂ ಕೊಂಡೊಯ್ದು ಕಾಂತಾರದೊಳ್
ಬಿಡಿಮೀ ಬಾಜಿಪ ಬೀಣೆಯುಂ ತಿಸರಿಯುಂ ಕೊಳ್ಳೆಂದು ಬಲ್ಲಂಗಿವಂ
ಕುಡಿಮೇಗೆಯ್ದಪೆವಾಮಿವಕ್ಕೆಮಗಿವಿರ್ದಿನ್ನೆಲ್ಲಮೇಗೆಯ್ವುದೋ ೫೦

ಅಂತೊರೆದನಿಬರುಮೊಂದೆಡೆಗೆವಂದು,

ಇಂದಜಿತಂ ತಪೋವನಕೆ ಪೋದನಧೀಶನೆ ಪೋಗೆ ಮಾಣಲಾ
ಗೆಂದೊಡಮೋಗಲಿರ್ದೆಮದಱಿಂ ಬೆಸಕೇಳ್ದಪೆಮೆಂದು ನಮ್ಮ ತಾಯ್
ತಂದೆಗೆ ಪೇೞ್ದು ಬನ್ನಿಮೊಡನಾಡಿದ ಮೇಳದವಳ್ದಿರೆಲ್ಲಮೋ
ನೆಂದಪಿರಕ್ಕ ನೇಲ್ದಳಿಪಿ ಮಾಣ್ದೊಡೆ ದುರ್ಜನಮಲ್ತೆ ಸಜ್ಜನಂ ೫೧

ಎಂದು ಪರಿಚ್ಛೇದಂಗೆಯ್ದು ನಿಬರುಂ ನಿತಂಬಿನಿಯರ್ ತಂತಮ್ಮ ಚೆಂಬೊನ್ನ ಮಾಡದ ನೆಲೆಯನೇಱಿ ನಿಜಗೃಹೋಪವನಕ್ಕೆ ಮುಂ ನೀರೆಱೆದು ನಡಪಿ ಬೆಳೆಯಿಸಿದ ಬಾಳಾಶೋಕಪಾದಪಾದಿಗಳ್ಗೆ ಮುಕುಳಿತಾಂಜಲಿಯರಾಗಿ,

ಲಲಿತಲತಾಲಯಂಗಳಿರ ! ಸುಂದರಕಾನನಚಂದನದ್ರುಮಂ
ಗಳಿರ ! ತಳಿರ್ತಶೋಕೆಗಳಿರಾ ! ಸಹಕಾರತಮಾಲಭೂರುಹಂ
ಗಳಿರ ! ವಿಯೋಗಮಾದುದೆಮಗಂ ನಿಮಗಂ ಬೆಸಕೆಯ್ವೆಮೆಂದು ವಿ
ಹ್ವಳೆಯರಗಲ್ಕೆಯೊಳ್ ನೆಗಪಿದರ್ ವಸಮಲ್ಲದ ಬಾಷ್ಪವಾರಿಯಂ ೪೨

ಅಂತು ಬಾಷ್ಪವಾರಿಧಾರಾಪೂರಿತನೇತ್ರೆಯರುಮತಿಶಯಚಕಿತಗಾತ್ರೆಯರುಮಾಗಿ,

ಎಲೆ ಪರಪುಟ್ಟ ಕೇಳೆಲೆ ಮಧುವ್ರತ ಕೇಳೆಲೆ ರಾಜಕೀರ ಕೇ
ಳೆಲೆ ಕಳಹಂಸ ಕೇಳೆಲೆ ಸರೋಜಿನಿ ಕೇಳೆಲೆ ಚೂತರಾಜ ಕೇ
ಳೆಲೆ ವನರಾಜಿ ಕೇಳ್ ನೆನೆಯುತಿರ್ಪುದು ಕೂರ್ಪುದು ಸೈರಿಸಿರ್ಪುದ
ಗ್ಗಲಿಸಿದ ನಲ್ಮೆ ತಣ್ಮಲೆಯ ಬೆನ್ನನೆ ಪೋದಪೆವೆಮ್ಮ ಸಾಮಿಯಾ ೪೩

ಎಂದು ಮೆಲ್ಲನಲ್ಲಿಂದಗಲ್ದು ಕಳೆದು ಗದ್ಗದಕಂಠೆಯರ್ ಕಲಕಂಠಾದಿಗಳಂ ಬೀೞ್ಕೊಂಡು ಮುಕ್ತಿಲಕ್ಷ್ಮೀಸಮಾಗಮಸಮುತ್ಕಂಠಚಿತ್ತನಾಗಿ ಪೋದ ನಿಜ ವಲ್ಲಭನಂ ನೆನೆನೆನೆದು,

ಏನೆಮ್ಮ ಮನಮೆ ಶೂನ್ಯಂ
ನೀನಿಲ್ಲದ ರಾಜಮಂದಿರಂ ಶೂನ್ಯಮಯೋ
ಧ್ಯಾನಗರಂ ಶೂನ್ಯಮಖಿಳಾ
ಸ್ಥಾನಂ ಶೂನ್ಯಂ ತ್ರಿಲೋಕಮಂಡನತಿಲಕಾ ೪೪

ಬಡವರ ನಂಟನಾವೆಡೆ ದಯಾಪರನಾವೆಡೆ ಧರ್ಮಚಿತ್ತನಾ
ವೆಡೆ ಶುಭವೃತ್ತನಾವೆಡೆ ಮಹೋದಯನಾವೆಡೆ ಪುಣ್ಯಭಾಜನಾ
ವೆಡೆ ಜನನಾಥನಾವೆಡೆ ಶುಭಾಕರನಾವೆಡೆ ಸತ್ಯವಾಕ್ಯನಾ
ವೆಡೆ ಗುಣಸಿಂಧುವಾವೆಡೆ ಮನೋರಮನಾವೆಡೆ ಪೇೞಲಾಗದೇ ೪೫

ಎಂದು ಪ್ರಲಾಪಂಗೆಯ್ದು,

ಪಡಪಡವಾಯ್ತು ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ ಕಣ್ಣ ನೀ
ರಡಿಗಡಿಗುಣ್ಮಿಪಾಯ್ತುರೆ ಮುಖೇಂದು ಬಿಗುರ್ತಿರೆ ಸುಯ್ಯ ಬೆಂಕೆಯುಂ
ನಿಡುಪಮಳುಂಬಮಪ್ಪಿನೆಗಮಿಾಶನದೆಲ್ಲಿದನೆತ್ತವೋದನಾ
ವೆಡೆಯನಧೀಶನೆಂದು ಪಲವಾಡಿದರಂದಜಿತಾಂಗನಾಜನಂ ೫೬

ಅಂತು ಪಲವಾಡಿ

ತಮ್ಮಮಗಂ ಬಗೆಯದೊಡೋ
ವೆಮ್ಮತ್ತೆಯುಮೆಮ್ಮ ಮಾವನುಂ ಬಗೆಯದೆ ಚೀ
ಕೆಮ್ಮನೆ ಪಾಟ್ಮನೆಯೊಳ್ ಗುಱು
ಗುಮ್ಮನೆ ಸುೞಿದಿರದೆ ಪೋಪಮಜಿತನ ಬೞಿಯಂ ೫೭

ಎಂದು ಮಾಡದಿಂದಿೞಿದು ಪೋಗಲ್ ಬಗೆದ ಸಾಸಿರ್ವರರಸಿಯರನಂತಃ ಪುರಸಂಚರತ್ಕಂಚುಕಿಗಳ್ ಬಾಱಿಸಿ ನಿಮ್ಮನೆಮ್ಮರಸನ ಬೆಸನಿಲ್ಲದೆ ಎಲ್ಲಿಗಂ ಪೋಗಲೀಯೆಂ, ನೀಮೆಲ್ಲಮುಮರೇಂದ್ರವಂದ್ಯನ ವನಜಾನನಷಟ್ಚರಣಾವಧಿಯಂ ಮಾಡಿ ಬೞಿಕ್ಕ ನಿಮ್ಮ ಬಗೆವುದಂ ಬಗೆಯಿಮೆಂದೆನಿತಾನುಂ ಮಾಣಿಸಿದರ್. ಇತ್ತ ಪರಮೇಶ್ವರನುಮಮರೇಂದ್ರ ಸುಂದರೀನಿಕಾಮಕೋಮಲಕರತಲಾವಿರಚಿತಾನೇಕರತ್ನೋಪಹಾರಮುಮತಿವಿಚಿತ್ರಮಣಿಮಯಮುಮಂಡಪಮಪ್ಪ ಚಂದ್ರಕಾಂತಾಶಿಲಾತಲದೊಳು ಪೂರ್ವಾಭಿಮುಖನುಂ ಬದ್ಧಪರ್ಯಂಕಾಸನನುಮಾಗಿರ್ದು ಸರ್ವಸತ್ವಂಗಳೊಳು ಸಮಸತ್ವಮಂ ಭಾವಿಸುತ್ತುಂ ತ್ರಿಸಾಕ್ಷಿಕನಾಗಿ ಪಂಚಮುಷ್ಟಿಯಿಂ,

ನೆಗಟ್ದಂ ತೀರ್ಥಕರೇಶ್ವರಾಗ್ರಣಿ ನಮಸ್ಸಿದ್ಧೇಭ್ಯ ಎಂದಿಂದ್ರವಂ
ದ್ಯಗುಣಂ ಕರ್ಮದ ಬೇರ್ಗಳಂ ಪಱಿವವೋಲ್ ನೀಲಾಳಿಮಾಲಾವಿಲಾ
ಸಿಗಳಂ ಕೇಶಸಮೂಹಮಂ ಪಱಿವುದುಂ ತ್ರಿಜ್ಞಾನಿಗಾಗಳ್ ಪೊದ
ಟ್ದೊಗೆದತ್ಯುತ್ತಮದೀಕ್ಷೆಯಂ ಕೊಳಲೊಡಂ ಜ್ಞಾನಂ ಮನಃಪರ್ಯಯಂ ೫೮

ಆಗಳಾ ಚತುರ್ಜ್ಞಾನಾಂಭೋನಿಧಿಯುಂ ಮಧುಕರನಿಕರನಿಕಾಶಕೇಶಪಟಲಮಂ ತನ್ನ ಹಸ್ತಪಟಲಕದೊಳಾಂತುಕೊಂಡು ಪಂಚಮಾಂಭೋಧಿಯೊಳಮರೇಂದ್ರವೃಂದಮೊಯ್ದಿಕ್ಕುವುದುಂ,

ಕರಮುಱುವಾಱು ದುಗ್ಧಜಲವಿಕ್ರಯದಿಂ ದೊರೆಕೊಂಡುದೀಜಿನೇ
ಶ್ವರನಳಕಂಗಳೆಂಬ ಹರಿನೀಲಚಯಂಗಳ ಲಾಭಮಿಾಗಮೆಂ
ದಿರದನುರಾಗದಿಂ ಕುಣಿಯುತಿರ್ಪವೊಲಿರ್ದುದು ವೀಚಿಬಾಹುಗಳ್
ಬೆರಸಳಿಸಂಚರಚ್ಚಟುಳಝಾಸುರಸಂಚಲಪಂಚಮಾರ್ಣವಂ ೫೯

ಆ ಪ್ರಸ್ತಾವದೊಳ್.

ಪರಿಹೃತವಸನಂ ವಿಗತಾಂ
ಗರಾಗನಪನೀತಭೂಷಣಂ ವಿಬುಧಜನೋ
ದ್ಧರಣಂ ಪಯೋದಸಂಧ್ಯಾ
ನುರಾಗಭರಣವ್ಯಪೇತರವಿಯಂತಿರ್ದಂ ೬೦

ಅಂತಾ ಪರಮೇಶ್ವರಂ ಪರಮತಪಸ್ಸಂಯಮಧರನಪ್ಪುದುಂ ಶೋಕಾಕುಳೀಕೃತಚಿತ್ತರಾದ ತೀರ್ಥಕರಗುರುಗಳುಮಜಿತಸೇನಕುಮಾರನುಮನೆನಿತಾನುಂ ಸಂತಯಿಸಿ ಸಾಕೇತನಗರಕ್ಕೆ ಕಳಿಪಿ ಬಱಿಯಂ ಪ್ರಥಮತೀರ್ಥೇಶ್ವರಂಗೆ ಮಾಡಿದಂದದೊಳೆ ಪರಿನಿಷ್ಕ್ರಮಣಪೂಜೆಯಂ ಮಾಡಿ,

ವಿವಿಧ ಸ್ತೋತ್ರಂಗಳಿಂದಂ ಸ್ತುತಿಯಿಸಿ ಭುವನಸ್ತುತ್ಯನಂ ಭವ್ಯವೃಂದೋ
ತ್ಸವಪಂಕೇಜಾತದೊಳ್ ದೇವನ ಪದಯುಗದೊಳ್ ಮುಗ್ಗಿ ಗಂಧಾಕ್ಷತಾದ್ಯ
ಷ್ಟವಿಧೋತ್ಕೃಷ್ಟಾರ್ಚನಾದ್ರವ್ಯದಿನಭವನನಭ್ಯರ್ಚಿತಂ ಮಾಡಿ ಬೀಳ್ಕೊಂ
ಡು ವಿಮಾನಶ್ರೇಣಿ ಸುತ್ತುಂ ಬರೆ ಸುರಪತಿಗಳ್ ತಮ್ಮ ತಾಣಕ್ಕೆ ಪೋದರ್ ೬೧

## ಕೇವಲಜ್ಞಾನ ಕಲ್ಯಾಣಂ

## ಪುಟ್ಟಿತ್ತಗಾಧಂ ತ್ರಿಭುವನಜನಮಂಗಲ್ಯಕೈವಲ್ಯ ಬೋಧಂ

ಶ್ರೀಮತ್ಕಾಶ್ಯಪಗೋತ್ರ ಶಿ
ಖಾಮಣಿ ಭವ್ಯಜನ ಕಲ್ಪತರು ಕಲ್ಪಂ ಕ
ಲ್ಪಾಮರಪೂಜಿತನಜಿತ
ಸ್ವಾಮಿ ಸಮಿಾಚೀನಚರಿತನಪಗತದುರಿತಂ ೧

ಅಂತಂದಿನ ದಿವಸಮಲ್ಲಿಯೆ ನಿಂದು ಎರಡನೆಯ ದಿವಸದೊಳ್ ದಿವಸಕರ ಮಂಗಳಪ್ರಕಾಶಭಾಸುರಂ ದಾನಧರ್ಮಪ್ರಕಾಶನಂ ಮಾಡಲೆಂದು ಯುಗಾಂತರ ದೃಷ್ಟಿಯಾಗಿ ಚರ್ಯಾಮಾರ್ಗದಿನಯೋಧ್ಯಾಪುರಮಂ ಪೊಕ್ಕು ಜಘನ್ಯೋತ್ತಮ ಗೃಹಂಗಳೊಳ್ ಚಂದ್ರಗತಿಯಿಂ ಸಲುತ್ತುಂ ಬ್ರಹ್ಮನೆಂಬರಸನ ಮನೆಗೆವರೆ ಮಂಗಳತೂರ್ಯಮುಮಷ್ಟಮಂಗಳಮುಂ ಬೆರಸು ಪರಮೋತ್ಸಾಹದಿಂದಿದಿರ್ಗೊಂಡು,

ಪ್ರಣುತೆಯುನಯಮೆಂಬೇೞುಂ
ಗುಣದಿಂ ನವವಿಧದ ಪುಣ್ಯದಿಂ ನೆಱೆದು ನೃಪಾ
ಗ್ರಣಿ ನೆಗೞ್ದ ದಾನಚಿಂತಾ
ಮಣಿ ನಿಱಿಸುವ ತೆಱದಿ ನಿಱಿಸಿದಂ ಬ್ರಹ್ಮನೃಪಂ ೨

ಅಂತು ನಿಱಿಸಿ ಸಿದ್ಧಭಕ್ತಿ ಪುರಸ್ಸರಂ ಪಾಣಿಪಾತ್ರದೊಳ್, ಕನಕ ಪಾತ್ರದೊಳ್ ತೀವಿದಿಕ್ಷುರಸಮಂ ಪಯೋರಸಮುಮಂ ಪಾನಗಳಿಂದೆಱೆಯೆ ನಿರಂತರಾಯದಿ ನಿಲ್ವುದುಮುತ್ತಮಪಾತ್ರದಾನದ ಫಲದಿಂ

ಸುರಿಯೆ ವಸುಧಾರೆ ನಭದೊಳ್
ಸುರವೃಂದಂ ಪೊಗೞೆ ಮೊೞಗೆ ಸುರದುಂದುಭಿ ತ
ಣ್ಣರಲೆಸಗೆ ಕುಸುಮವರ್ಷಂ
ದೊರೆಕೊಳೆ ಸಾಶ್ಚರ್ಯಮಾಯ್ತು ಪಂಚಾಶ್ಚರ್ಯಂ ೩

ಅಂತು ನೀಂದಕ್ಷಯದಾನಮಕ್ಕೆಂದು ಪರಸಿ ಪರಮೇಶ್ವರನಯೋಧ್ಯಾಪುರದಿಂ ಪೊಱಮಟ್ಟು ವನವ್ರತದಿಂ ಗ್ರಾಮನಗರಖೇಡಖರ್ವಡಮಡಂಬಪತ್ತನ ದ್ರೋಣಾಮುಖ ಪ್ರದೇಶಂಗಳೊಳ್ ವಿಹಾರಿಸಿ.

ಮಲಮಂಗರಾಗಮಂಬರ
ವಲಯಂ ದಿವ್ಯಾಂಬರಂ ಗುಣಾವಳಿ ಭೂಷಾ
ವಲಿಗಳೆನೆ ಮುಕ್ತಿಲಲನೆಯ
ನೊಲಿಸಲ್ ಕೈಗೈದು ನಿಂದನಜಿತಮುನೀಂದ್ರಂ ೪

ಅನಿಲನವೊಲ್ ನಿಸ್ಸಂಗಂ
ಕನಕಮಹಾದ್ರೀಂದ್ರದಂದದಿಂ ನಿಷ್ಕಂಪಂ

ವನನಿಧಿಯಂತಕ್ಷೋಭಂ
ಘನವರ್ಮಾರ್ಗದವೋಲ್ ಮುನೀಶ್ವರಂ ನಿಂದಿರ್ದಂ ೫

ಕರಿ ಕಲಭಂಗಳ್ ಕರೀಕೇ
ಸರಿಗಳ್ ವೈರಮನೆ ಬಗೆಯದಹಿನಕುಲಂಗಳ್
ಹರಿಣಚಮೂರಂಗಳ್ ಶಾಂ
ತರೂಪದಿಂದಿರ್ದುವಜಿತನಾಥನ ಕೆಲದೊಳ್ ೬

ಅಂತು ಪರಮೇಶ್ವರನ ಕೆಲದೊಳಿರ್ದ ಕ್ರೂರಜಾತಿಗಳೆಲ್ಲಂ ಆ ಮಹಾನುಭಾವನ ತಪಃ ಪ್ರಭಾವದಿಂ ಅಪಗತರೌದ್ರರಸಂಗಳುಮುಪಗತಶಾಂತರಸಂಗಳುಮಾಗೆ,

ಸುರಿದುವು ಪೂಗಳಂ ಮಿಳಿರ್ವ ಕೊಂಬುಗಳೆಂಬ ಕರಂಗಳಿಂ ಮುನೀ
ಶ್ವರನ ಪದಾಬ್ಜದೊಳ್ ತಮಗೆ ತಾಮೆ ವನಾವನಿಜಂಗಳಂಬುಜಾ
ಕರಮನಿಲಾಹತಿಪ್ರಚಲವೀಚಿಭುಜಂಗಳಿನೊಲ್ದುವೆತ್ತ ಶೀ
ಕರನಿಕರಂಗಳೊಳ್ ತೊಳೆದುದಾ ಗುಣಸತ್ವನ ಪಾದಪದ್ಮಮಂ ೭

ಅಂತುಗ್ರೋಗ್ರ ತಪದೊಳ್ ನೆಗಟ್ದು ಪನ್ನೆರಡು ವರ್ಷದಿಂ ಜಿನಕಲ್ಪ ಚರಿತ್ರದಿಂ ಛದ್ಮಸ್ಥಕಾಲಂ ಪೋಗೆ ಯೋಗಯೋಗ್ಯಪ್ರದೇಶದೊಳ್ ವಾಕ್ಸಂಯಮನುಮವಹಿತಧ್ಯಾನನುಮಾಗಿರೆ,

ಪರಮಂಗೆ ಲಕ್ಷ್ಮಿ ಪರಮಾ
ದರದಿಂದಂ ಗೂಢ ಪದ್ಮವಿಷ್ಟರಮಂ ತಂ
ದಿರಿಸಲ್ ತದ್ವಿಗುಣದೆ ಸುಖ
ನಿರಾದರಂಗೆಸೆದುದಾತಪತ್ರಮಲಕ್ಷಂ ೮

ಎರಡುಂ ಮಡದಡೆಯುಂ ನಾ
ಲ್ವೆರಲುಂಗುಟಮೆರಡಱಡೆಯುಮೊರ್ಗೇಣೆಂಬಂ
ತಿರೆ ಕಾಯೋತ್ಸರ್ಗದ ಮುದ
ದಿರೆ ಋಜ್ವಾಗತದೊಳಜಿತನೂರ್ಜಿತಧೈರ್ಯಂ ೯

ವದನಂ ಸ್ತಿಮಿತಾಕ್ಷಂ ಶ್ಲಿ
ಷ್ಟದಂತಮಷ್ಟಾಂಗಪಾತುಮಭ್ರೂಭಂಗಾ
ಸ್ಪದಮೆಸೆದುದು ಯೋಗ ನಿಯೋ
ಗದೊಳಜಿತ ಮಹಾಮುನೀಂದ್ರ ವೃಂದಾರಕನಾ ೧೦

ಕನದಂಭೋನಿಧಿಗರ್ಜ
ತ್ಸ್ವನದಿಂ ಗುಂಜದ್ಗುಹಾದ್ರಿಯೆನೆ ಜಿನನಿರ್ದಂ
ಮನದೊಳಗೊಂದೊಂದವ್ಯ
ಕ್ತನಿಜಾಕ್ಷರಜಲ್ಪಮೆಸೆಯೆ ಮಂದರಕಲ್ಪಂ ೧೧

ಅಂತಿರ್ದು ಶುಕ್ಲ ಧ್ಯಾನದಿಂ ಘಾತಿಚತುಷ್ಟಯಮಂ ಕಿಡಿಸಿ ಪುಷ್ಯಮಾಸದ ಶುಕ್ಲಪಕ್ಷದ ಏಕಾದಶಿಯೊಳ್ ಅಪರಾಹ್ಣ ಸಮಯದೊಳ್ ರೋಹಿಣಿ ನಕ್ಷತ್ರ ವಾಗೆ—

ಮನದೊಳ್ ದಾವಾಗ್ನಿ ಪೂರ್ವಾಚಲದೊಳಹಿಮಕೃನ್ಮಂಡಲಂ ವಾರ್ಧಿಯೊಳ್ ಭೋಂ
ಕೆನೆ ಬಂದೌರ್ವಾನಳಂ ಪುಟ್ಟುವವೊಲಜಿತ ತೇಜೋಮಯಂ ಕರ್ಮವೇಲ್ಲ
ದ್ವನದಾಹೋತ್ಸಾಹವೃತ್ತಿ ಪ್ರಗುಣಮಜಿತ ತೀರ್ಥೇಶನೊಳ್ ತೀರ್ಥ ಕೃನ್ಮಂ
ಡನನೊಳ್ ಪುಟ್ಟಿತ್ತಗಾಧಂ ತ್ರಿಭುವನ ಜನ ಮಾಂಗಲ್ಯ ಕೈವಲ್ಯ ಭೋಧಂ

## ನಿರ್ವಾಣ ಕಲ್ಯಾಣಂ

## ಪಡೆದಂ ಸಮ್ಮೇದದೊಳ್ ಮುಕ್ತಿಯಂ

ಅಂತು ದುರಿತತಿಮಿರವಿಘಟನಪಟುವೆನಿಪ ವಿಮಲ ಕೇವಲಜ್ಞಾನಭಾನೂ ದಯವಾಗೆ

ಹರಿಪೀಠಂ ಸುರಪುಷ್ಪವೃಷ್ಟಿ ಲಲಿತಾಶೋಕದ್ರುಮಂ ಚಾರುಚಾ
ಮರ ಮಾಲಾವಳಿ ದಿವ್ಯಭಾಷೆ ರುಚಿರಶ್ವೇತಾತಪತ್ರತ್ರಯಂ

ಸುರತೂರ್ಯಧ್ವನಿ ಭಾನುಮಂಡಲನಿಭಂ ಭಾಮಂಡಲಂ ಚೆಲ್ವುವೆ
ತ್ತಿರೆ ದೇವೇಂದ್ರನಿನಾದುದಂದಜಿತದೇವಪ್ರಾತಿಹಾರ್ಯಷ್ಟಕಂ ೧

ಅಂತಷ್ಟಮಹಾಪ್ರಾತಿಹಾರ್ಯಮುಂ ಚತುಸ್ತ್ರಿಂಶದತಿಶಯಂಗಳುಮೆಸೆಯೆ ದ್ವಿತೀಯ ತೀರ್ಥಂಕರ ಪರಮದೇವರ ಕೇವಲಾವಗಮನನಾಗಿ ನಾಗೇಂದ್ರಂ ಬಲಾಹಕವಿಕ್ರಿಯಶಾವಿನಿರ್ಮಿತಮಪ್ಪ ಕಾಮುಕೀ ವಿಮಾನಮನೇಱಿ ಬಂದಂ. ಇತ್ತ ಸೌಧರ್ಮೇಂದ್ರಂ ನಾಗದತ್ತವಿಕ್ರಿಯಾಸಮುದ್ಭೂತಮಪ್ಪ ಐರಾವಣಮನೇಱಿ ಬಂದಂ. ಉೞಿದ ದೇವೇಂದ್ರರುಂ ತಂತಮ್ಮ ವಿಮಾನಮನೇಱಿ ಚತುರ್ನಿಕಾಯಾಮರಜನಮುಂ ಸಪ್ತಾನೀಕಂ ಬೆರಸು ಬಂದು ಸಕಲ ಜಗತ್ಪೂಜಿತಮಪ್ಪ ಅಜಿತಜಿನನ ಕೇವಲಜ್ಞಾನೋತ್ಪತ್ತಿ ಕಲ್ಯಾಣ ಪೂಜೆಯಂ ಮಾಡಲೆಂದು ಮೂಱುಸೂೞ್ ಬಲವಂದು ಉಪಹೃತಪುಷ್ಪಾಂಜಲಿಗಳುಮವನತ ಮಣಿ ಕಿರೀಟರುಮಾಗಿ ಮುಂದೆ ನಿಂದು

ಜಯಜಯ ಜಿನಾಧೀಶ ಕನಕಘನಸಂಕಾಶ
ಜಯಜಯ ಜಗತ್ತಿಳಕ ಕೃತ ಭವ್ಯಜನಪುಳಕ
ಜಯಜಯ ಗುಣಾಭರಣ ಸಕಲಜನಹಿತಕರಣ
ಜಯಜಯ ತಪೋವಿಲಯ ವಿಮಲ ತೇಜೋನಿಲಯ
ಜಯಜಯ ಮನೋಜಹರ ಸದ್ಧರ್ಮತೀರ್ಥಂಕರ
ಜಯಜಯ ಜನಾನಂದ ಕೇವಲಾಂಕುರ ಕಂದ
ಜಯಜಯ ಜನಾಧಾರ ನಿರ್ದಳಿತ ಸಂಸಾರ

ಎಂದಮರವೃಂದಂ ಬೆರಸಮರೇಂದ್ರಂ ಜಿನೇಂದ್ರ ವೃಂದಾರಕನನಾನಂದದಿನಭಿವಂದಿಸಿ,

ಸುರಪತಿ ಬೆಸೆಸೆ ಸಮಗ್ರಾ
ದರದಿಂದಂ ಸ್ವಾಪತೇಯಪತಿ ಸಕಲಜಗ
ದ್ಗುರುಗೆ ಜಗನ್ಮಂಡನಮಂ
ವಿರಚಿಸಿದಂ ಸಮವಸರಣ ಭೂಮಂಡಲಮಂ ೨

ಪೆರ್ವೀದಿಗಳಿಂ ನೇಸಱು
ಮಿರ್ವಡಗಲುಮೆಸೆಯೆ ಬೀದಿಬೀದಿಗಳೆಲ್ಲಂ

ಸರ್ವಮಣಿತೋರಣಂಗಳ್
ಪರ್ವಿರೆ ಸೊಗಯಿಪುದು ಸಮವಸರಣ ವಿಲಾಸಂ ೩

ವಿಲಸತ್ಕೈವಲ್ಯಬೋಧಾಧಿಗತ ಸಕಲ ತತ್ವಾರ್ಥನಾರ್ಹಂತ್ಯಲಕ್ಷ್ಮೀ
ನಿಲಯಂ ಸರ್ವಾಮರಾಧೀಶ್ವರ ಮಕುಟಮಣಿಜ್ಯೋತಿರೌಘಪ್ರಸೂನಾ
ವಲಿಮಾಲಾಭ್ಯರ್ಚಿತಾಂಘ್ರಿದ್ವಯನಪಗತಘಾತಿದ್ವಿಷದ್ವೀರ್ಯನಿರ್ದಂ
ಕಲಧೌತಕ್ಷ್ಮಾಧರಂಬೊಲ್ ಸಮವಸರಣದೊಳ್ ಧರ್ಮತೀರ್ಥಾಧಿನಾಥಂ ೪

ಅಂತೆನಿಸಿರ್ದಶೇಷಜಗದತಿಶಯಾವಹ ಪುಣ್ಯಪುಂಜಾಯಮಾನ ಮೂರ್ತಿಯನಮರಪತಿ ಸಂಗೀತಕಸಂಗೀಯಮಾನಕೀರ್ತಿಯಂ ಜಿನೇಂದ್ರ ವೃಂದಾರಕನಂ ಶ್ರೀಮದಜಿತಭಟ್ಟಾರಕನನಮರಾಧೀಶ್ವರನನೇಕಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಲ್ ಬಗೆದು ಬದ್ಧಾಂಜಲಿಯಾಗಿ.

ಶ್ರೀಸಕಲ ಸುರಾಸುರಪತಿ
ಭಾಸುರ ಮಣಿಮಕುಟ ಘಟ್ಟಿತಾಂಘ್ರಿದ್ವಯಸಿಂ
ಹಾಸನಶಿಖರಸ್ಥಿತಚರ
ಣಾ ಸಕಲಜನಕ್ಕೆ ನೀನೆ ಕಲ್ಪಾಂಘ್ರಿಪನೈ ೫

ಕ್ಷಿತಿಯೊಳಗೆಲ್ಲಂ ಧರ್ಮಾ
ಮೃತಮಂ ಕಱೆಯುತ್ತುಮಿರ್ಪ ನಿನಗೆ ನಿಳಿಂಪ
ಪ್ರತತಿ ಸುರಪುಷ್ಪವೃಷ್ಟಿಯ
ನತಿಶಯಮೆನೆ ಕಱೆವುದೆಂಬುದೊಂದಚ್ಚರಿಯೆ ೬

ವನಬರ್ಹಿಗಳಂ ಮೇಘ
ಧ್ವನಿ ತಣಿಪುವತೆಱದೆ ದೇವ ನಿನ್ನಯ ದಿವ್ಯ
ಧ್ವನಿ ತಣಿಪಿದಪುದು ವಿಷ್ಟಪ
ಜನಮಂ ಸಕಲತ್ರಿವಿಷ್ಟಪೈಕಾಧಿಪತೀ ೭

ನಾಕಾವತರಣ ಭವದಭಿ
ಷೇಕಂ ನಿಷ್ಕ್ರಮಣಕೇವಲೋದಯಮಾಯ್ತಿಂ
ತೀ ಕಲ್ಯಾಣಚತುಷ್ಕಂ
ಪ್ರಾಕಟಕಲ್ಯಾಣಮಿರ್ದುದಿಂ ನಿರ್ವಾಣಂ ೮

ನಿನಗಹಮಿಂದರುಮಿಂದ್ರರು
ಮುನಿಬರುಮಾ ಲೋಕಪಾಲರುಂ ಫಣಿಪತಿಗಳ್
ಜನಪತಿಗಳೆಲ್ಲಮೆಱಗುವ
ರೆನೆ ನಿನ್ನಡಿಗಜಿತ ಜಗದೊಳೆಱಗದರೊಳರೇ ೯

ದೊರೆಗಾಣೆಂ ನಿನಗೆ ಜಿನೇ
ಶ್ವರ ಪೆಱರಿಂ ನಿನಗೆ ನೀನೆ ದೊರೆಯೆನಿಪ್ಪೈ ಮಂ
ದರಗಿರಿಗೆ ಮಂದರಾದ್ರಿಯೆ
ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೆ ೧೦

ಗುಣನಿಳಯ ಮೇರುಚೂಡಾ
ಮಣಿ ಶರಣಾಗತಜಗತ್ರಯೀಜನರಕ್ಷಾ
ಮಣಿ ವಿನಯದಾನ ಚಿಂತಾ
ಮಣಿ ಚೂಡಾಮಣಿ ಮರೀಚಿರಂಜಿತ ಚರಣಾ ೧೧

ಎಂದು ಸಹಸ್ರಲೋಚನನುತ್ಪನ್ನಕೇವಲವಿಲೋಚನನನೇಕ ಸ್ತುತಿಗಳಿಂ ಸ್ತುತಿಯಿಸಿ ಸ್ವಯಂಭುವುಂ ಸರ್ವಜ್ಞನುಂ ಸರ್ವದರ್ಶಿಯುಂ ಸರ್ವಗತನುಂ ತ್ರಿಲೋಕ ಸ್ವಾಮಿಯುಮಿವು ಮೊದಲಾಗಿ ಅಜಿತಂಗಷ್ಟೋತ್ತರ ಸಹಸ್ರನಾಮ ಮನನ್ವರ್ಥಂಮಾಡೆ—

ಭರತಂ ಮುನ್ನಾದಿತೀರ್ಥೇಶ್ವರನ ಚರಣಮಂ ತೀರ್ಥಭೂಪಾಲನತ್ಯಾ
ದರದಿಂ ಬಂದರ್ತ್ತಿಯಿಂ ಪೂಜಿಸಿ ಪುರುತರ ಪುಣ್ಯಾರ್ಜನಂಗೆಯ್ದನಾನುಂ
ಪುರುಪುಣ್ಯೋಪಾರ್ಜನಂ ಕೂಡುವೆನೆನಗೆನುತುಂ ಭಾವಸಂಶುದ್ಧಿಮೆಯ್ವೆ
ತ್ತಿರೆ ತೀರ್ಥಕ್ಷತ್ರಿಯಂ ಪೂಜಿಸಿದನಜಿತ ತೀರ್ಥೇಶನಂ ಸತ್ಯಭಾವಂ ೧೨

ಅಂತಾ ಸತ್ಯಭಾವನೆಂಬ ತೀರ್ಥಕ್ಷತ್ರಿಯನುಂ ರೋಹಿಣಿಯೆಂಬ ಯಕ್ಷಿಯುಂ ಮಹಾಯಕ್ಷನೆಂಬ ಯಕ್ಷನುಂ ಸಿಂಹಸೇನಂ ಮೊದಲಾಗೆ ತೊಂಬದಿಂಬರ್ ಗಣಧರರುಂ ಧರ್ಮಕ್ಷೇತ್ರಂಗಳೊಳ್ ಭವ್ಯ ಸಮಿತಿಗೆ ಧರ್ಮಾಮೃತಮಂ ಕಱೆವುತ್ತುಂ ಧರ್ಮಚಕ್ರ ಪುರಸ್ಸರ ಜನಪ್ರತಿ ಸದ್ಧರ್ಮ ಪೋಷಣೆಯುಮೆಂಬ ದೇವಕೃತ ಚತುರ್ದಶಾತಿಶಯಮುಮಂ ತಾಳ್ದಿ ಚತುಂಸ್ತ್ರಿಂಶದತಿಶಯ ಸಮನ್ವಿತನಾಗಿ ಸಮ್ಮೇದಾಚಲಕ್ಕೆವರೆ

ನೆಗೞ್ದಿರ್ದಾದಿಜಿನೇಂದ್ರನಿಂದ್ರನಮಿತಂ ಕೈಲಾಸದೊಳ್ ಮುನ್ನ ಮು
ಕ್ತಿಗೆ ಸಂದಂದಜಿತಂ ದುರಂತದುರಿತಪ್ರಧ್ವಂಸಿ ಬಂದಿಲ್ಲಿ ಮು
ಕ್ತಿಗೆ ಸಲ್ವಂ ಗಡ ಬರ್ದನೆನ್ನ ದೊರೆಗಿಲ್ಲದ್ರೀಂದ್ರಮೆಂದುತ್ಸವಂ
ಮಿಗೆ ಸಮ್ಮೇದವಮುದಗ್ರಮಾದುದೆನಿಸಿತ್ತುತ್ತುಂಗ ಕೂಟಂಗಳಿಂ ೧೩

ಆದಂ ಕೃತಸುರ ದಂಪತಿ
ಮೋದಂ ನವಸುರಭಿಕುಸುಮ ಪರಿಮಳ ಬಹುಳಾ
ಮೋದಂ ವಿಯಚ್ಚರೇಂದ್ರವಿ
ನೋದ ಕೃತಾಹ್ಲಾದವೊಪ್ಪುಗುಂ ಸಮ್ಮೇದಂ ೧೪

ಅಂತೊಪ್ಪುವ ಸಮ್ಮೇದಾವನೀಧರಕ್ಕೆ ಕೃತಸಕಳ ಮೇದಿನೀವಿಹರಣ ನೊಂದು ತಿಂಗಳ್ ವಿಹರಣ ವಿಧಿಯುಂ ಮಾಣ್ದು ಬಂದಜಿತನಾಥಂ ಧ್ಯಾನ ವಿಧಾನದಿಂ ಕರ್ಮಂಗಳಂ ಕಿಡಿಸಿದಂ, ಪರಮ ಶುಕ್ಲಧ್ಯಾನದಿಂ ಘಾತಿಚತುಷ್ಕ ಮುಮನಘಾತಿಚತುಷ್ಕಮುಮಂ ನಿಶ್ಯೇಷಂ ಕಿಡಿಸಿ ಚೈತ್ರಶುದ್ಧ ಪಂಚಮಿಯ ಪೂರ್ವಾಹ್ಣದೊಳ್ ಪ್ರಥಮಯೋಗದೊಳಿರ್ದಂ.

ಕೃತಮೋಹದ್ರೋಹವಿಧ್ವಂಸನನಧಿಗತ ಕೈವಲ್ಯಬೋಧೋದಯಂ ಸಾ
ಧಿತ ಕರ್ಮಾರಾತಿವರ್ಗಂ ಜಯಜಯನಿನದಂ ತೀವೆ ದೇವೇಂದ್ರರಿಂ ದಿ
ಕ್ಕೃತಿಯಿಂದಂದಾನಕಂ ಭೋರ್ಗರೆವಿನಮಜಿತಸ್ವಾಮಿ ದೇವಾಧಿದೇವಂ
ಕೃತಕೃತ್ಯಂ ಬುದ್ಧಬೋಧ್ಯಂ ಶಿವಪದಸುಖಮಂ ಪೊರ್ದಿದಂ ಸಿದ್ಧಸಾಧ್ಯಂ
೧೫

ಜನಕಂ ಶ್ರೀಜಿತಶತ್ರು ತಾಯ್ ವಿಜಯಸೇನಾದೇವಿ ಸಂದಿರ್ದಯೋ
ಧ್ಯೆ ನಿಜಾಮ್ನಾಯದ ರಾಜಧಾನಿ ಮಹಿಜಂ ಸಪ್ತಚ್ಛದಂ ದಂತಿ ಲಾಂ
ಛನವಾರೋಹಿಣಿ ತಾರೆ ಯಕ್ಷಿ ತನಗಾ ಯಕ್ಷಂ ಮಹಾಯಕ್ಷನೆಂ
ಬಿನೆಗಂ ಸಂದಜಿತಂ ಜಿತಾರಿ ಪಡೆದಂ ಸಮ್ಮೇದದೊಳ್ ಮುಕ್ತಿಯಂ ೧೬

ಇತ್ತ ದೇವೇಂದ್ರನಿಕಾಯಂ ಅಗ್ನೀಂದ್ರಮಕುಟಾಮಲೋದ್ದೀಪಿತ ದೀಪ ಧೂಪ ಸುರಭಿ ಮಾಲ್ಯಾದಿಗಳಿಂ ಜಿನನಿರ್ವಾಣ ಕ್ಷೇತ್ರಪೂಜಾವಿಧಿಯಂ ನಿರ್ವರ್ತಿಸಿ ತದೀಯರೂಪ ಪವಿತ್ರಭೂಮಿಯಿಂ ಪಂಚಕಲ್ಯಾಣಭೂತಿ ಭಾಗಿಗಳಪ್ಪೆ ಮಕ್ಕೆ ಎಂದು ಹೃದಯಕಂಠಮುರಭುಜದ್ವಯಲಲಾಟಪ್ರದೇಶಂಗಳೊಳ್

ಮುಟ್ಟಿ ಸೌಧರ್ಮೇಂದ್ರಂ ಪರಿನಿರ್ವಾಣ ಕಲ್ಯಾಣದೊಳ್ ಆನಂದ ನೃತ್ಯಮಂ ಮಾಡಿ ಪೂಜಿಸಿ ಪೊಡೆಮಟ್ಟುಪೋದಂ.

ಇತ್ತ ಶೋಕಾಕುಲೀಕೃತಚಿತ್ತರಾದ ಜಿತಶತ್ರು ಮಹಾರಾಜನುಮಂ ವಿಜಯಸೇನಾ ದೇವಿಯುಮಂ ಅಜಿತಸೇನಕುಮಾರಕನುಮಂ ಸಿಂಹಸೇನಾಖ್ಯ ಗಣಧರ ಮುಖ್ಯರ್ ಸಂಸಾರ ಸ್ವರೂಪಮನಱಿಪಿ ಸದ್ಧರ್ಮೋಪದೇಶಂಗೆಯ್ದು ಸಂತೈಸೆ ಬಂದನಿಬರುಮಯೋಧ್ಯಾಪುರಮಂ ಪೊಕ್ಕು ಮಹಾಮಹಾ ಮಹಿಮೆಗಳಪ್ಪ ಜಿನಪೂಜೆಗಳಂ ಮಾಡಿಸುತ್ತುಂ ಮಹೋತ್ತುಂಗ ತೋರಣಂಗಳಪ್ಪ ಚೈತ್ಯಾಲಯಂಗಳಂ ಮಾಡಿಸಿಯುಂ ಮಹಾಧ್ವಜಮನೆತ್ತಿಸಿಯುಂ, ಮಹಾದಾನಮಂ ನೆಗಟ್ಚಿಯುಂ, ಅನೇಕ ರತ್ನಪ್ರತಿಮೆಗಳಂ ಮಾಡಿಸಿಯುಂ ರತ್ನತ್ರಯಮಂ ಕೊಂಡಾಡಿಯುಂ ದಾನಚಿಂತಾಮಣಿಯಂತೆ ಧರ್ಮಪ್ರಭಾವನೆಯುಂ ಮಾಡುತ್ತುಂ ಉತ್ಕೃಷ್ಟ ಚಾರಿತ್ರದಿಂ ಚರಿತಾರ್ಥರುಮಾ[ದರ್.]

## ಚಕ್ರನಾಥ ಚರಿತಂ

## ಚಕ್ರಪೂಜಾಪರಿಕರವಿಧಿಯಂ ಮಾಡಿದಂ

ಎರಡನೆಯ ತೀರ್ಥನಾಥನ
ಚರಿತದೊಳೆರಡನೆಯ ಚಕ್ರನಾಥನ ಚರಿತಂ
ಬರೆ ಬಣ್ಣಿಸಲಜಿತಜಿನೇ
ಶ್ವರಭಕ್ತಂ ಸಗರಚಕ್ರವರ್ತಿಯೆ ತಕ್ಕಂ ೧

ಅದೆಂತೆಂದೊಡೀಸಗರನೆಂಬನೆರಡನೆಯ ಚಕ್ರವರ್ತಿ ತನ್ನ ಮುನ್ನಿನ ಮೂಱನೆಯ ಜನ್ಮದೊಳ್ ಜಂಬೂದ್ವೀಪದ ಪೂರ್ವ ವಿದೇಹದ ಸೀತಾನದಿಯ ತೆಂಕಣ ತಡಿಯ ವತ್ಸಕಾವತೀ ವಿಷಯದ ಪೃಥ್ವೀನಗರಮನಾಳ್ವಂ ಜಯಸೇನನೆಂಬರಸನಾದಂ. ಆತನ ಮಹಾದೇವಿಯುಂ ವಿಜಯಸೇನೆಯೆಂಬವಳ್. ಅವರ್ಗೆ ರತಿಷೇಣನುಂ ಧೃತಿಷೇಣನುಮೆಂಬರಿರ್ವರ್ ತನಯರಾದರ್. ಅವರೊಳಗೆ ರತಿಷೇಣನುಂ ಸ್ವರ್ಣಪಾಷಾಣದಂತೆ ಕೃತಾಂತದಂತಾಂತರ ವಜ್ರಘಾತ ಜರ್ಝರೀಕೃತನಾಗೆ ಜಯಸೇನ ಮಹಾರಾಜಂ ನಿಜಪ್ರಿಯತನೂಜ ಶೋಕಾನಲಾತ್ಯಂತ ಸಂತಪ್ತ ಚಿತ್ತನಾಗೆ—

ವಿನಯಜಲಧೀ ಹಾ ಹಾ ಹಾ ಬಂಧುವತ್ಸಳ ಗೋತ್ರಮಂ
ಡನ ನಿಧಿಯೆ ಹಾ ಹಾ ಹಾ ಹಾ ರಾಜವಂಶ ಶಿಖಾಮಣೀ
ಮನಸಿಜವಧೂಲೀಲಾಶೃಂಗಾರ ವಾರವಧೂ ಮನೋ
ವನಜತರಣೀ ಹಾ ಹಾ ಹಾ ಪುತ್ರ ಹಾ ರಣಕೇಸರೀ ೨

ಎಂದೆನಿತಾನುಮಂದದಿಂ ಬಾಯಬಿಡಿದು ವಿಪ್ರಲಾಪಂಗೆಯ್ವ ಜಯಸೇನ ಮಹಾರಾಯನ ಕರುಣಾರುತಮಂ ಮಹಾರುತನೆಂಬಶರಸನ ಮೈದುನಂ ಮಾಣಿಸಿ

ತನಯ ವ್ಯಾಮೋಹದಿಂದಂ ಮಱುಗಿದೊಡೆಮಗಿಂ ಬರ್ಕುಮೇ ಸದ್ವಿವೇಕಂ
ಮನದಿಂ ಗೆಂಟಾಯ್ತು ಕಾಲಾನಲಕಬಳಿತರಾರಾರ್ಗೆದಾರಾರ್ಗೆ ಶೋಕಾಂ
ಧನೆಯಪ್ಪೈ ಖೇದಮಂ ನಂಬದೆ ಜಿನಮತಮಂ ನಂಬು ನೀನೆಯ್ದೆ ಧರ್ಮಂ
ನನಗಾರ್ಮಂ ನೀನುಪಶಾನುಂ ತಳರ್ವವೊಡನೆ ಸಂಸಾರ ಕಾಂತಾರದಿಂದಂ ೩

ಎಂದು ತನ್ನ ಭಾವಂಗೆ ಸಂಸಾರಸ್ವರೂಪಮನಾಮಹಾನುಭಾವನಱಿಪುವುದುಮಾತನ ಮಾತಂ ಕೇಳ್ದಪಗತಶೋಕನುಮುಪಗತವಿವೇಕನುಮಾಗಿ ಧೃತಿಯಂ ತಾಳ್ದಿಧೃತಿಷೇಣಂಗೆ ರಾಜ್ಯಾಭಿಷೇಕಪುರಸ್ಸರಂ ಸಾಮ್ರಾಜ್ಯಪದವಿಯಂ ಕೊಟ್ಟು ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗಂಗೆಯ್ದು ಪರಮತಪಸ್ಸಂಯಮಧರರಪ್ಪ ಯಶೋಧರ ಗುರುಗಳ ಪಕ್ಕದೆ ತಮ್ಮ ಮೈದುನ ಮಹಾರುತನುಂ ತಾನುಂ ಮತ್ತಂ ಪಲಂಬರರಸುಮಕ್ಕಳ್ವೆರಸು ಪರಮಜಿನದೀಕ್ಷೆಯಂ ತ್ರಿಸಾಕ್ಷಿಕನಾಗಿ ಕೆಯ್ಕೊಂಡು ಕಾಲಾವಸಾನದೊಳ್ ಸನ್ಯಸನಮರಣದಿನಾರಣಮೆಂಬ ಪದಿನೈದನೆಯ ಕಲ್ಪದೊಳ್ ರತ್ನತ್ರಯೋತ್ಸೇಧನುಂ ದ್ವಾವಿಂಶತಿ ಸಹಸ್ರವರ್ಷ ಸಂಕಲ್ಪ ವಿಕಲ್ಪತಾಮೃತಾಹಾರನುಮೇಕಾದಶಮಾಸ ನಿರ್ಯತ್ಸುರಭಿ ನಿಶ್ವಾಸನುಮಣಿಮಾದ್ಯಷ್ಟಗುಣೋಪೇತನುಮಾಗಿಯುಂ ಮಹಾಬಲನೆಂಬಂ ದೇವನಾಗಿ ಪುಟ್ಟಿ ವೈಮಾನಿಕಸುಂದರೀವದನಾರವಿಂದವಿಲೋಕವಿಲಾಸ ಮಣಿದರ್ಪಣಾಯಮಾನ ವಿಮಲಕಪೋಲ ಪುಳಕನಾದಂ. ಮಹಾರುತನುಮಾಕಲ್ಪದೊಳೆ ಮಣಿಕೇತುವೆಂಬೊಂ ದೇವನಾದನಾಗಿ ಸುರಲೋಕ ಸರೋವರ ಪರಿಸರೋತ್ತಂಸರಾಜನಾದಂ. ಅಂತವರಿರ್ವರುಂ ಗೀರ್ವಾಣಸುಖಮನನುಭವಿಸುತುಮಿರ್ದೊಂದುಸಮಯದಿನೊಮ್ಮೆ ನಮ್ಮಿರ್ವರೊಳಗಾರ್ ಮುನ್ನಂ ಮನುಷ್ಯಲೋಕಕ್ಕೆ ಪೋದರವರಂ ದೇವಲೋಕದೊಳಿದ್ದವರ್ ಪೋಗಿ ತಮ್ಮ

ಬಲ್ಲಂದದಿಂ ಪ್ರತಿಬೋಧಿಸಿ ವಿಷಯಸುಖಾನುಮುಖರಂ ದೀಕ್ಷಾಭಿಮುಖರಂ ಮಾಳ್ಪುದೆಂದು ಮಹಾಬಲಮಣಿಕೇತುಗಳ್ ಕೃತಕ ಸಂಕೇತಂ ಮಾಡೆ ಜಯಸೇನ ಚರಮಹಾಬಳಂ ದಿವಿಜಂ ದಿವಿಜಲೋಕ ಸುಖಮನನುಭವಿಸಿ ಬಂದು ಜಂಬೂ ದ್ವೀಪದ ಭರತಕ್ಷೇತ್ರದ ಕೌಶಲದೇಶದಯೋಧ್ಯಾಪುರಮನಾಳ್ವ ಇಕ್ಷ್ವಾಕು ವಂಶದ ಗುಣಮಣಿಸಮುದ್ರನೆನಿಸಿದ ಸುಭದ್ರವಿಜಯಂಗಂ ಶೃಂಗಾರ ಸಮುದ್ರವೇಲಾಲೀಲೆಯೆನಿಸಿದ ಸುವೇಲಾದೇವಗಮತಿಕರಾಳಾಲೋಕನಕಬಳಿ ತಾರಾತಿನಗರಂ ಸಗರನೆಂಬೊಂ ತನಯನಾಗಿ ಸಪ್ತತಿಲಕ್ಷಪೂರ್ವಪರಮಾಯು ಷ್ಯನುಂ ಪಂಚಾಶದಧಿಕಚತುಶ್ಶತಪ್ರಮಿತಚಾಪೋತ್ಸೇಧನುಂ ಚಂಚಚ್ಚಾರು ಚಾಮೀಕರಭಾಸನುಮೆನಿಸಿ ಪದಿನೆಂಟು ಲಕ್ಷಪೂರ್ವ ಕುಮಾರಕಾಲಂ ಪೋಗೆ ಮಹಾಮಂಡಲೇಶ್ವರ ಪದವಿಯನಲಂಕರಿಸಿ ಮಹೀಮಂಡಲಮಂ ಪ್ರತಿಪಾಲಿಸಿ ಮತ್ತಮಷ್ಟಾದಶಲಕ್ಷಪೂರ್ವಕಾಲಾತಿಕ್ರಮದೊಳ್ ಚಕ್ರರತ್ನಂ ಪುಟ್ಟೆ ಸಕಲ ಚಕ್ರವರ್ತಿಯಾಗಿ ಸಾಮ್ರಾಜ್ಯಲಕ್ಷ್ಮಿಯುಂ ತಾಳ್ದಿ,

ರಾಜವತಿಯಾಯ್ತು ಧರೆ ಕಿಂ
ರಾಜರ್ ಪರಿಪಾಲಿಸುತ್ತುಮಿರೆ ಯುವರಾಜಾ
ರಾಜಾಧಿರಾಜನಿಂ ಧರೆ
ರಾಜನ್ವತಿಯಾದುದೆಸೆಯೆ ಸೌರಾಜ್ಯಗುಣಂ ೪

ಅವನವನ್ರಾರಿನರೇಂದ್ರರುನ್ನತಿ ನಿಜಾಂಗುಷ್ಠಂಗಳೊಳ್ ಪಾಣಿಪ
ಲ್ಲವರಾಗಂ ತಲದೊಳ್ ವಿನಮ್ರ ಮಕುಟಾಲಂಕಾರಮಾಣಿಕ್ಯದೀ
ಪ್ತಿ ವಿತಾನಂ ನಖಪಙ್ಕ್ತಿಯೊಳ್, ನೆಲಸಿದಂದತ್ಯುನ್ನತಾಂಗುಷ್ಠಮೊ
ಪ್ಪುವುದಾತಾಮ್ರತಲಂ ಕನನ್ನಖಚಯಂ ಪಾದದ್ವಯಂ ಚಕ್ರಿಯಾ ೫

ಅಂತೆನಿಸಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಂ

ಮಿಸುಪ ಸುರೇಂದ್ರಚಾಪತತಿ ತೋರಣಮಾಗೆ ಮರಾಳನಿಸ್ವನಂ
ಪಸರಿಪ ಮಂಗಳಾನಕಪಟುಸ್ವನಮಾಗೆ ಶರತ್ಪ್ರವೇಶದೊಳ್
ದೆಸೆದೆಸೆಯಂ ಪೊದಟ್ದು ಧವಳಾಭ್ರಕುಳಂಗಳ ಬಳ್ಳವಳ್ಳಿ ಪೋ
ಲ್ತೆಸೆದುದು ಖೇಚರೀಜನಕೆ ಮಾಡಿದ ಬೆಳ್ಳಿಯ ಬಳ್ಳಿಮಾಡಮಂ ೬

ಅಂತು ಬಂದ ಶರತ್ಸಮಯದೊಳ್ ಸಗರಚಕ್ರವರ್ತಿ ಸಕಲ ದಿಗ್ವಿಜಯ ಯಾತ್ರೋದ್ಯುಕ್ತಚಿತ್ತನಾಗಿ ವಿಜಯಲಾಭಿಷೇಕಪೂರ್ವಂ ಪೂರ್ವಾಭಿಮುಖನಾಗಿ

ಸಂಗತಪೂರ್ಣಕುಂಭನುದಿತ ಧ್ವಜನುಲ್ಲಸಿತಾಗ್ರಪಲ್ಲವಂ
ಭೃಂಗನಿಕಾಯಗೇಯಯುತನಕ್ಷಯಹಸ್ತ ವಿಭಾಸಿ ರೋಚನಾ
ಪಿಂಗವಿಲೋಚನಂ ರುಚಿರಪುಷ್ಕರಸುನ್ನತದಂತತೋರಣಂ
ಮಂಗಳಲಕ್ಷಣಂ ವಿಜಯಸಿಂಧುರಮಿರ್ದುದು ಪಟ್ಟವರ್ಧನಂ ೭

ಅಂತು ಪಣ್ಣಿ ಬಂದಿರ್ದ ನಿಜವಿಜಯಸಿಂಧುರದ ಬೆಂಗೆವಂದು ಚತು ರಂಗಬಲಂಬೆರಸು ತಳರ್ವಾಗಳ್—

ಬತ್ತೆ ತೊಱೆ ಬೆಟ್ಟುಗಳ್ ನೆಲೆ
ವತ್ತೆ ಪಡಲ್ವಡೆ ಮಹಾದ್ರುಮಂಗಳ್ ನೆಲನಂ
ಪೊತ್ತ ಫಣಿತೆಣಱುತಿರೆ ನಡೆ
ದತ್ತಾಗಳ್ ಸಗರ ಚಕ್ರವರ್ತಿಯ ಕಟಕಂ ೮

ಮುಗಿಲಂ ಮುಟ್ಟಿತ್ತು ಸೇನಾರಜದೊಡನೆ ಜಯೇಭಧ್ವಜಶ್ರೇಣಿ ದಿಗ್ಭಿ ತ್ತಿಗಳಂ ಮುಟ್ಟಿತ್ತು ತೂರ್ಯಾರವದೊಡನೆ ಬಲಕ್ಷೋಭಶಬ್ದಂ ಪಯೋರಾ ಶಿಗಳಂ ಮುಟ್ಟಿತ್ತು ದಾನಪ್ಲವದೊಡನೆ ಪರಕ್ಷೋಣಿಪಾಲಾಂಗನಾದ್ಯ ಗ್ವಿಗಳದ್ಬಾಷ್ಪಾಂಬುಧಾರಾಪ್ರಸರಮೆನೆ ನೃಪಂ ದಿಗ್ಜಯೋದ್ಯುಕ್ತನಾದಂ ೯

ಅಂತು ಗಂಗಾತಟಂಬಿಡಿದು ನಡೆದು ಮರುದ್ದೇವನೆಂಬ ಪನ್ನೆರಡನೆಯ ಮನುವಿನ ಕಾಲದಿಂ ತಾಳ್ದತಿಪ್ರವೃದ್ಧಮಾಗಿರ್ದುಪಸಮುದ್ರಮಂ ಪುಗದೆ, ಸುಭದ್ರ ವಿಜಯ ನಂದನಂ ಗಂಗಾವನವೇದಿಕಾದ್ವಾರದಿಂ ಪೊಕ್ಕು, ನಾಲ್ವತ್ತೆಣ್ಗಾ ವುದದಗಲದಿಂ ಬೀಡಂ ಬಿಡಿಸಿ ಪುರೋಹಿತಾದಿ ಕುಲವೃದ್ಧೋಪದೇಶರಾಗದಿಂ ತ್ರಿರಾತ್ರೋಪವಾಸಂಗೆಯ್ದು, ದರ್ಭಶಯನದೊಳಿರ್ದು ಪಂಚಪರಮೇಷ್ಠಿ ಪೂಜೆಯಂ ಮಾಡಿ ಪಡೆವಳ್ಳನಂ ಪಡೆಗೆ ಕಾಪುವೇಟ್ಟು ದಶವಾಹ ಸಂವಾಹ್ಯ ಮಪ್ಪಜಿತಂಜಯಮೆಂಬ ವಿಜಯರಥಮನೇಱಿ, ಗಂಗಾದ್ವಾರದೊಳಗಣ ಲವಣ ಜಲಧಿಯಂ ಪೊಕ್ಕು, ಪನ್ನೆರಡು ಯೋಜನಂಬೋದಲ್ಲಿ ರಥಮಾಣೆಯಿಟ್ಟಂತೆ ಮಾಣೆ ಕಂಡು ರಥಾಂಗಧರನುಂ ದೃಪ್ತಕೋಪಾವೇಶಿತಾಧರನುಮಾಗಿ—

ಜನನುತ ಸುಭದ್ರವಿಜಯನ
ತನಯಂಗೆರಡನೆಯ ಚಕ್ರವರ್ತಿಗೆ ಸಗರಾ
ಧಿನೃಪತಿಗಿದಿರೆಱಗುವುದಂ
ದು ನಾಮಮಂ ಬರೆದವೋಘಶರದಿಂದೆಚ್ಚಂ ೧೦

ಅಂತೆನಿಸಿದ ಶರದಿಂದಿಸುವುದುಂ ಮಾಗಧನೆಂಬ ವ್ಯಂತರಾಧೀಶನಾ ಸ್ಫೋಟಿಸಿ ನುಡಿಯೆ ಮಱಕೊಂಡು ಕುಲವೃದ್ಧರ್ ತಂದೆಱಗಿಸೆ ರತ್ನಕುಂಡಲ ಕೇಯೂರಹಾರಪ್ರಭೃತಿಭೂಷಣಂಗಳನಲ್ಲಿ ಕೊಂಡುಬಂದು ದಕ್ಷಿಣವಿಜಯ ಕ್ಕೊಡರ್ಚಿಸಿ ವೈಜಯಂತೀದ್ವಾರದೊಳಗನೆ ಪೋಗಿ—

ಮದಕುಂಭೀರಕುಳಪ್ರಚಾರವಿಚಳದ್ವಾಚಾಳವೀಚೀಚಯಾ
ಸ್ಪದಮಂ ತುಂಗ ತರಂಗ ಸಂಗತತರಡ್ಡಿಂಡೀರ ಪಿಂಡಪ್ರಭಾ
ಸ್ಪದಮಂ ಕೌತುಕದಿಂದೆ ಚಕ್ರಪತಿ ತೀರೋಪಾಂತದೊಳ್ ನಿಂದು ನೋ—
ಡಿದನಾಘೂರ್ಣಿತದಕ್ಷಿಣಾರ್ಣವಮನಕ್ಷೀಣಾಪದಕ್ಷೀಣಮಂ ೧೧

ಅಂತು ನೋಡಿ ವರತನುವೆಂಬನೆಱಗದಿರ್ದೊಡಾತನುಮನೆಱಗಿಸಿ ಕವಚ—ಕಂಠಾಭರಣಚೂಡಾಮಣಿಕನಕಕುಂಡಳಂಗಳಂ ತಂದು ಮುಂದಿಟ್ಟು ಬಂದು ಮುಖದೊಳ್ ತನಗೆ ಸಮ್ಮುಖನಪ್ಪುದುಂ ಅಂತೆ ಪ್ರಭಾಸಾಮರನನಪಗತ ಪ್ರಭಂಮಾಡಿ ಸಂತಾನಕಮಾಲಾಮುಕ್ತಾಜಾಲಂಗಳನಲ್ಲಿಂಕೊಂಡು ಸಿಂಧುಸರಿತ್ತೀರಂಬಿಡಿದು ವಿಜಯಾರ್ಧಾಚಳಮನೆಯ್ದೆವಂದು—

ಮೃದುವಾದ್ಯಸ್ವನಗೀತ ನಿಸ್ವನ ನಟದ್ವಿದ್ಯಾಧರೀನಾಟ್ಯಸಂ
ಪದಮಂ ರತ್ನಮಯಪ್ರಸಿದ್ಧಶಿಖರಾಲಂಕಾರ ಸಿದ್ಧಾಲಯಾ
ಸ್ಪದಮಂ ಖೇಚರ ಚಕ್ರವರ್ತಿವಿಭವಪ್ರೋದ್ಭಾಸಿಯಂ ಮೆಚ್ಚಿನೋ
ಡಿದನಾ ಭೂಚರಚಕ್ರವರ್ತಿ ವಿಜಯಾರ್ಧಾದ್ರೀಂದ್ರಮಂ ರುಂದ್ರಮಂ ೧೨

ಇಡಿದಿರೆ ಗುಹಾಂಧಕಾರಂ
ಪೊಡರ್ದೆಸೆದಿರೆ ಚಂದ್ರಕಾಂತರುಚಿ ನಗದೊಂದೊಂ
ದೆಡೆಯೊಳ್ ಪೋಲ್ತೊಪ್ಪುವುದೊಂ
ದೆಡೆಯೊಳ್ ನೆಲಸಿರ್ದ ಕಾಳಮುಂ ಜೊನ್ನಮುಮಂ ೧೩

ವನದಹನಧೂಮ ನಿರ್ಜರ
ವನಪರ್ವತವಾತಸನ್ನಿಪಾತ ಪ್ರಭವಂ
ಘನಮದಜಱೊಳ್ ಕಱಿವುವು ಕಡ
ಲ ನೀರನುಪಕಾರಿಗನುಪಕಾರಿಗಳೊಳವೆ ೧೪

ಸುಮನಸೌರಭಮಾದ್ಯದುದ್ಯದಳಿಮಾಲಾಗೀತಿಯಿಂ ಮೆಚ್ಚಿ ಕೇ
ಳೆ ಮದೋನ್ಮತ್ತವಿಕಾರಕೀರಮುಖವಾದ್ಯಾತೋದ್ಯಮಂ ಕೇಳ್ದು ಮೆ
ಚ್ಚಿ ಮಯೂರೀಲಟಹಪ್ರವೃತ್ತವಿಲಸನ್ನೃತ್ಯಂಗಳಂ ಮೆಚ್ಚಿ ನೋ
ಡೆ ಮರಳ್ಚಿತ್ತು ಖಗಾದ್ರಿ ಚಕ್ರಧರನಂ ಸಂಗೀತಕಕ್ರೀಡೆಯಿಂ ೧೫

ಆಗಳ್ ವಿಜಯಾರ್ಧಾಚಳೇಂದ್ರಾಧಿಪತಿ ವಿಜಯಶಾರ್ಧಕುಮಾರಂ ವಿಜಯಶಾರ್ಧಾಭಿಷೇಕಪೂರ್ವಕಂ ಸಿಂಹಾಸನ ಕನಕಭೃಂಗಾರ ಧವಳಾತಪತ್ರ ಧವಳಚಾಮರಾದಿ ವಿಜಯಚಿಹ್ನಂಗಳಂ ಕೂಡಿಕೊಂಡು ಮಗುಳ್ದು ತಮಿಸ್ರಗುಹಾಸಮೀಪದೊಳ್ ವಿಜಯಸ್ಕಂದ ವಾರಣಮನಿರಿಸಿ ಕೃತಮಾಲಾಮರನಂ ವಿಧೇಯೀಕೃತಂಮಾಡಿ ತಿಲಕಾದಿ ಚತುರ್ದಶ ಭೂಷಣಂಗಳಂ ಮೆಯ್ಗೆಮಾಡಿಸಿ ಸಿಂಧುವನವೇದಿಕೆಯ ತೋರಣದ್ವಾರದಿಂ ಪೊಕ್ಕು ವಿಜಯಾರ್ಧಚೂಳಿಕೆಯ ಸೋಪಾನಮನೇಱಿ ಸಿಂಧುನದಿಯ ಪಡುವಣ ವೇದಿಕೆಯ ತೋರಣದ್ವಾರದಿಂದ— ಮುರ್ಚಿ ವಿಜಯಾರ್ಧಾದ್ವಾರದಿಂ ಪೊಕ್ಕು ವಿಜಯಾರ್ಧವೇದಿಕಾ ತೋರಣ—ದ್ವಾರದಿಂ ಪೊಱಮಟ್ಟು ಪಶ್ಚಿಮಖಂಡಮನಖಂಡಭುಜದಂಡಪ್ರತಾಪದಿ ನಱುದಿಂಗಳ್ಗೆ ಸೇನಾನಾಯಕಂ ಸಾಧಿಸಿ ಮಗುಳ್ದುಬರೆ ದಕ್ಷಿಣ ಭರತದ ನರರಂ ವಿದ್ಯಾಧರರನಡಿಗೆಱಗಿಸಿ ಬೞಿಯಂ ಮ್ಲೇಂಛಖಂಡಮಂ ಬಾಯ್ಕೇಳಿಸಿ ಚಕ್ರಪೂಜೆಗೆಯ್ದು ತದ್ಗಿರೀಂದ್ರಕಟಕಂಬಿಡಿದು ನಿಜವಿಜಯಕಟಕಮಂ ನಡೆಯಿಸಿ ಸಿಂಧುನದೀತೀರದ ದ್ವಿತಯಭಾಗದ ಮಹಾವೀಧೀದ್ವಯದಿಂ ಮಹಾಗುಹಾ—ದ್ವಾರಮನೆಯ್ದಿ ಮುಂದಗತ್ತಲೆಯೊಳ್ ಮಣಿರತ್ನಕಾಕಿಣೀರತ್ನಂಗಳೊಳ್ ಬರೆದ ಚಂದ್ರಾದಿತ್ಯಮಂಡಲದ ಬೆಳಗು ಬೆಳಗೆ ಸಿಂಧುವಿನ ತಡಿವಿಡಿದು ಚತುರಂಗಬಲಂಬೆರಸು ನಡೆದು ನಿಜಸ್ಥಪತಿರತ್ನ ಪ್ರಯತ್ನವಿನಿರ್ಮಿತಮಪ್ಪ ಸೇತುಬಂಧದಿಂದಮುನ್ಮಗ್ನಜಳೆಯುಂ ನಿಮಗ್ನಜಳೆಯುಮೆಂಬೆರಡಱಿಕೆಯ ತೊಱೆಗಳಂ ಱಪಯ್ದು ಮಹಾಗುಹೆಯುಂ ಪೊಱಮಟ್ಟು ವಿಜಯಶಾರ್ಧದುತ್ತರೋಪಕಂಠ

ದೊಳ್ ಬೀಡಂ ಬಿಟ್ಟು ಮುನ್ನಿನಂತೆ ಪಶ್ಚಿಮೆಕ್ಕೆ ಸೇನಾಪತಿಯಟ್ಟಿ ಬಾಯ್ಕೊಳಿಸಿ ತಾನುಮುತ್ತರಾರ್ಧಖಂಡಮನವುಂಕಿನಿಲೆ ಚಿಳಾತಾವರ್ತನರೆಂಬಿರ್ವರ್ ಮ್ಲೇಂಛ ರಾಜರ್ ತುಚ್ಛಪರಿಚ್ಛದರುಚ್ಚ ವಿಗ್ರವಮನೆತ್ತಿಕೊಂಡು ನಿಚ್ಚಗಾಳೆಗದೊಳಚ್ಚಿ ಗಂಗೊಳಿಸಿ ತಮ್ಮ ಕುಲದೈವಮಪ್ಪ ಮೇಘಮುಖರೆಂಬ ನಾಗಪ್ರಮುಖರಂ ಬೆಸಸೆ ನೆಲನೆಲ್ಲಮನವರೇಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಂ ಮೇಲೆ ಪಿಡಿದ ಛತ್ರರತ್ನಮುಂ ಕಾಯೆ ಕಾಕಿಣೀರತ್ನದೊಳ್ ಬರೆದ ಚಂದ್ರಾದಿತ್ಯರ ಬೆಳಗಿನೊಳೇಟು ದಿವಸಮಿರೆ ಭಗಳಿದೇಶಾಧೀಶತನೂಜೆಯುಪ್ಪ ವಿದರ್ಭೆಗಂ ಸಗ ರಂಗಂ ಪುಟ್ಟಿದ ಭಗೀರಥನಪ್ರಥಿರತ ಸಕಲಚಕ್ರದರ್ತಿಸ್ಕಂಧಾವಾರ ಭಾರದತ್ತ ಸ್ಕಂಧನಾಗಿ ನಿಜಪತಿಯ ವೀರಗಗನಗೋಚರರಥಂಗಳ್ ವಜ್ರದ ಗಿರಿಗಳೇಟುಂ ಬೆರಸು ಮೇಘಮುಖರೊಳ್ ಕಾದೆ ಭಗೀರಥನ ವಿಕ್ರಮಗುಣಕ್ಕಂ ಚಕ್ರವರ್ತಿ ಪ್ರತಿಬದ್ಧಗಣಬದ್ಧದೇವರ ವಿದ್ಯಾವಿಜೃಂಭಣಕ್ಕಮಳ್ಕಿ ಮೇಘಮುಖರ ಸಂಗರ ಮುಖದೊಳ್ ಪರಾಙ್ಮುಖರಾಗೆ ಚಿಲಾತಾವರ್ತನರಾತಾವರ್ತನ ಪರಿವರ್ತನ ಬಂದು ತಮ್ಮ ಮಗಳ್ದಿರಂ ದಿವ್ಯರತ್ನಂಗಳಂ ಮುಂದಿಟ್ಟು ತನ್ನಡಿಗೆಜಿಗಿಸಿ ಸಂಧಾನ ಸಂಧಿಯುಂ ಮಾಡೆ ಹಿಮವಂತ ಪರ್ವತದ ಸಿಂಧುಪ್ರಪಾತನಮನೆಯ್ದಿ ಸಿಂಧುದೇವಿಯಿಂ ವಿಹಿತ ಮಂಗಳಾಭಿಷಿಕ್ತನಾಗಿ ಭದ್ರಾಸನಮಂ ಪಡೆದು ಹಿಮವತ್ಪರ್ವತದ ಕೂಟದೊಳ್ ಪೂರ್ವಕ್ರಮದೊಳೆ ತ್ರಿರಾತ್ರೋಪವಾಸನಾಗಿ ತದ್ವಿತಯವಾಸಿಗಳಪ್ಪ ನಾಗಯಕ್ಷಾದಿಗಳಂ ಬಂದು ಕಾಣ್ಬುವೆಂದು ನಿಜವಿಜಯ ನಾಮಾಂಕಿತ ಶರದಿನಿಸೆ ಹಿಮವತ್ಕುಮರಾದಿಗಳ್ ಬಂದು ತೀರ್ಥಜಲದಿನಭಿಷೇಕಂ ಮಾಡಿ ಗೋಶೀರ್ಷಚಂದನಮುಮಂ ಮಹೌಷಧಿಗಳುಮಂ ಕೊಟ್ಟು ಪೋಗೆ ತಂಕ ಮೊಗದೆ ಬಂದುತ್ತರಭರತಮಧ್ಯಮಖಂಡಮಧ್ಯವರ್ತಿಯುಪ್ಪ ವೃಷಭಾಚಲಮಂ ಕಂಡು ಮನದೆಗೊಂಡು ನಿಜವಿಜಯ ಪ್ರಶಸ್ತಿಯನಲ್ಲಿ ಬರೆಯಿಸಲೆಂದು ಪೋಗಿ ಪುರಾತನ ಚಕ್ರವರ್ತಿಗಳ ದಿಗ್ವಿಜಯಕೀರ್ತಿಗಳಂ ಬಾಜಿಸೆ ಕೇಳ್ದು ಗಳಿತಗರ್ವನಾಗಿ ಕಿಱಿದೆಡೆಯ ದಂಡರತ್ನದಿಂ ತೊಡೆಯಿಸಿ ಕಳೆದು ಭರತೇಶ್ವರಚಕ್ರವರ್ತಿಯ ಪ್ರಶಸ್ತಿಯ ಸಮೀಪದೊಳ್ ನಿಜ ಪ್ರಶಸ್ತಿಯುಂ ಕಾಕಿಣೀ ರತ್ನದೊಳ್ ಕವಿ ರತ್ನನಿಂ ಬರೆಯಿಸಿ ಗಂಗಾದ್ವಾರಕ್ಕೆ ವಂದು ಗಂಗಾದೇವಿಯಿಂದಭಿಷಿಕ್ತನಾಗಿ ಸಿಂಹಾಸನಮಂ ಪಡೆದು ವಿಜಯಾರ್ಧಕಾಂಡಕ ಪ್ರಪಾತಗುಹೆಯ ವಜ್ರಕವಾಟ ಮಂ ದಂಡರತ್ನದಿಂ ಜರ್ಝರೀಕೃತಂಮಾಡಿ ಗುಹೆಯ ಬೆಂಕೆಯಾಱುವನ್ನೆಗಂ

ಪೂರ್ವದಿಗ್ಭಾಗದ ಮ್ಲೇಚ್ಛಖಂಡಮಂ ಬಾಯ್ಕೇಳಿಸಿ ಬರೆ ದಕ್ಷಿಣೋತ್ತರಗಿರ್ಯು-ಭಯ ಶ್ರೇಣಿಗಳ ದೇಶಾಧೀಶ್ವರರ್ ಕನ್ಯಾರತ್ನಂಗಳಂ ಕೊಟ್ಟು ಅನರ್ಘ್ಯರತ್ನಂಗಳಂ ಬಱುವಱಿಗೊಟ್ಟು ಪೋಗೆ ಮುನ್ನಮೇತೆಱದಱುದಿಂಗಳಾಱಿದ ಕಾಂಡಕ ಪ್ರಪಾತಗುಹೆಯಿಂ ಪೊಱಮಡುವಾಗಳ್ ಗುಹಾಕೂಟಗಿರಿನಿವಾಸಿ ನಾಟ್ಯಮಾಳಾಮರನಿದಿರ್ಗೊಂಡು ಕುಂಡಳದ್ವಯಮೈಕಕ್ಷ ಮಾಲೆಗಳಂ ಕುಡೆ ಕೊಂಡು ಪೂರ್ವದಿಗ್ಭಾಗದ ಮ್ಲೇಚ್ಛಖಂಡಮಂ ಬಾಯ್ಕೇಳಿಸಿ ತದ್ವೇದಿಕೆಯ ತೋರಣದ್ವಾರದಿಂ ಪೊಱಮಟ್ಟು ಷಟ್ಖಂಡಮಂಡಲಾಧೀಶ್ವರಂ· ಅಱುವತ್ತಾಱುಸಾಸಿರವರ್ಷಂ ದಿಗ್ವಿಜಯಂಗೆಯ್ದು ಸಿದ್ಧದಿಗ್ವಿಜಯನಾಗಿ ಸಮ್ಮೇದ ಮೇದಿನೀಧರಕ್ಕೆ ವಂದು ಭಗವದರ್ಹದಜಿತಭಟ್ಟಾರಕನ ಪರಿನಿರ್ವಾಣ ಕಲ್ಯಾಣಪವಿತ್ರಕ್ಷೇತ್ರಮಂ ಕಂಡು ಮೂಱುಸೂಟ್ ಬಲವಂದು ವಿವಿಧಾರ್ಚನೆಗಳಿಂದರ್ಚಿಸಿ ಕರಕಮಲಮುಕುಳಾಲಂಕೃತಶಿರಸ್ಕನುಮೇಕಾಗ್ರಮನಸ್ಕನುಮಾಗಿ —

ಪರಮಶ್ರೀಕುಲಸದ್ಮನಂ ಗುಣಗಣೋಪೇತಂ ಪ್ರಭಾನೂನ ಕೇ
ಸರಮಾಸಕ್ತ ವಿನೇಯಭೃಂಗನಿಕರಂ ಭಕ್ತಿಪ್ರಣಾಮಾಮರೇ
ಶ್ವರಚಕ್ರೇಶ್ವರಪನ್ನಗೇಶ್ವರ ಶಿಖಂಡೋತ್ತಂಸಮುಸ್ತಂ ಮನ
ಸ್ಸರಸೀಮಧ್ಯದೊಳೊಪ್ಪುತಿರ್ಕಜಿತತೀರ್ಥೇಶಕ್ರಮಾಂಭೋರುಹಂ ೧೬

ಎಂದು ದ್ವಿತೀಯತೀರ್ಥೇಶ್ವರನಂ ದ್ವಿತೀಯಚಕ್ರೇಶ್ವರನದ್ವಿತೀಯ-ಭಕ್ತಿಯಿಂ ಸ್ತುತಿಯಿಸಿ ಸಿದ್ಧಭಕ್ತಿಯಿಂ ಶ್ರುತಭಕ್ತಿಯುಂ ಚಾರಿತ್ರಭಕ್ತಿಯುಂ ಯೋಗ ಭಕ್ತಿಯುಂ ಗೆಯ್ದು ನಿರ್ವಾಣ ಭಕ್ತಿಯಿಂ ತ್ರಿಃಪ್ರದಕ್ಷಿಣಂಗೆಯ್ದು ಸಿದ್ಧಶೇಷೆಯುಂ ಕೊಂಡು ಜಗತ್ಪ್ರಸಿದ್ಧಮಪ್ಪ ಸಮ್ಮೇದಪರ್ವತದೊಳುತ್ತುಂಗ ತೋರಣಂಗಳು ಮಪ್ಪನೇಕಚೈತ್ಯಾಲಯಂಗಳಂ ಸ್ಥಪತಿರತ್ನಂಗಳಿಂ ಮಾಡಿಸಿ ಮಗುೞ್ದು ಬಂದು ನಿಜವಿಜಯರಾಜಧಾನಿಯನಯೋಧ್ಯಾಪುರಮಂ ಪುಗುವಾಗಳ್—

ಮುಸೆದಂಗಜನಲರ್ಗಣೆಯುಮೊ
ಲೆಸೆದೊಪ್ಪುವ ನಿಡಿಯ ಬಳಿಯ ತುಱುಗೆಮೊಗಣ್ ಕ
ಣ್ಗೆಸೆಯೆ ನಡೆ ನೋಡಿದರ್ ಭಾ
ವಿಸಿ ಸಗರನನಸಿಯ ಪಸಿಯ ಪೊಸಜವ್ವನೆಯರ್ ೧೭

ಆಗಟಿಯೊಳಗಬ್ಜಾಕೃತಿಯಿಂ
ಮುಗಿಲಟ್ಟಣೆಯೊಳಗೆ ಚಂದ್ರಬಿಂಬಾಕೃತಿಯಿಂ
ಮೊಗವೊಪ್ಪೆ ವಿಶಾನಲೋಚನೆ
ಮೃಗೇಕ್ಷಣದೆ ಸಗರನೃಪನನಭಿವೀಕ್ಷಿಸಿದಳ್ ೧೮

ಸ್ಖಲಿತಗತಿ ಲುಲಿತಕುಂತಲೆ
ವಲಿತನಿಜಗ್ರೀವೆ ಮಗುಟ್ದು ನೋಡಿದಳೊರ್ವಳ್
ಗಲಿತಮದೆ ಚಲಿತಮಾನಸೆ
ಲಲಿತಾಂಗನನೊಲ್ದು ಸಗರಚಕ್ರೇಶ್ವರನಂ ೧೯

ಅಂತು ನಗರಜನ ನಾರೀಜನ ವಿಲಾಸಮುಮಂ ನಗರಮುಮನೊಡನೊಡನೆಪೊಕ್ಕು ಪುರಜನಂಗಳ್ ಪಾದಾಭಿಷೇಕಂಗೆಯ್ಯೆ ಮೂರ್ಧಾಭಿಷಿಕ್ತ ಮಹಾಕ್ಷತ್ರಿಯರಿಂ ಸಾರ್ವಭೌಮ ರಾಜ್ಯಾಭಿಷಿಕ್ತನುಂ ಮಹೋತ್ತುಂಗ ಸಿಂಹಾಸನಾಸೀನನುಮಾಗಿ

ಧರಣೀಚಕ್ರಂ ಪ್ರತಾಪಕ್ಕಗಿಯೆ ಸಕಲ ದಿಕ್ಚಕ್ರಮಲ್ಲಾಡೆ ವಿದ್ಯಾ
ಧರಚಕ್ರಂ ಜೀಯ ದೇವೆಂದಡಿಗೆಱಗೆ ಜಗಚ್ಚಕ್ರದೊಳ್ ಕೀರ್ತಿಯಂ ಬಿ
ತ್ತರಿಸುತ್ತುಂ ಚಕ್ರವರ್ತಿ ಪ್ರಥಿತಭುವನ ಸಾಮ್ರಾಜ್ಯಮಂ ತಾಳ್ದಿ ಚಾತಾ
ದರದಿಂದಂ ಚಕ್ರಪೂಜಾಪರಿಕರವಿಧಿಯುಂ ಮಾಡಿದಂ ಚಕ್ರನಾಥಂ ೨೦

## ಆ) ಅಪ್ರಿಯಮಾಗಿಯುಂ ಹಿತಮಪ್ಪುದಂ ನೆಗಳ್ವಂ

ಸಗರಚಕ್ರೇಶ್ವರಂ ಅಷ್ಟಾದಶ ವಿಷಯ ಭಾಷಾ ಸಮನ್ವಿತನಪರಿವೃತ ಷಟ್ಖಂಡ ಭರಿತಮಪ್ಪ ಭರತಮಂ ಭರತನಂತೇಕ ಚ್ಛತ್ರ ಚ್ಛಾಯಾಯತ್ತಮುಮಂ ಆಜ್ಞಾವಿಧೇಯಮುಮಂ ಮಾಡಿ ಸಾಮ್ರಾಜ್ಯ ಲಕ್ಷ್ಮಿಗಧಿಪತಿಯಾಗಿ ಸಕಲ ಚಕ್ರವರ್ತಿ ಸಾಮ್ರಾಜ್ಯ ಪರಿಕರ ಪರಿವೃತ್ತನಾಗಿ ದಶಾಂಗ ಭೋಗದೊಳ್ ಕೂಡಿ ಸುಖಮಿರ್ದು ಒಂದು ದಿವಸಂ ತನ್ನ ಪೊಟಿಲ ಸಿದ್ಧವನದೊಳ್ ಶ್ರೀಭಟ್ಟಾರಕರ್ ಚತುರ್ಮುಖ ಪ್ರತಿಮಾಯೋಗಧಾರಿಗಳ್ ಉತ್ಪನ್ನ ಕೇವಳ ಜ್ಞಾನಿಗಳಾಗಿರ್ದಾರೆಂಬುದಂ ವನಪಾಲಕನಿಂ ಕೇಳ್ದು ಸಕಲ ಮಹೀಪಾಲ ಸಮುದಿತ ಧರ್ಮಾನುರಾಗ

ದಿಂದಾನಂದಭೇರಿಯುಂ ಪೊಯ್ಸಿ ಮಹಾ ಸಾಮಂತ ಮಂಡಳಿಕ ಮಕುಟ ಬದ್ಧಾದಿಗಳ್ ಷಣ್ಣವತಿ ಸಹಸ್ರಾಂತಃ ಪುರಮುಮಱುವತ್ತು ಸಾಸಿರ್ವರ್ ಮಕ್ಕಳುಂ ಶ್ರೇಷ್ಠಿ ಸೇನಾಪತಿ ತಳವಱ ದಂಡನಾಯಕ ಪ್ರಭೃತಿಗಳುಂ ಹಸ್ತ್ಯಶ್ವ ರಥ ಪದಾತಿಗಳುಂ ಬೆರಸು ವಿಭೂತಿಯಿಂ ಬಂದು ವಾಹನಂಗಳಿಂದಿೞಿದು ಮುನ್ನೆ ಬಂದಿರ್ದ ಚತುರ್ನಿಕಾಯಾಮರ ಜನದೊಡನೆ ವಿವಿಧಾರ್ಚನೆಗಳಿಂದ ರ್ಚಿಸಿ ವಿವಿಧಸ್ತುತಿಶತಂಗಳಿಂ ಸ್ತುತಿಯಿಸಿ ಕುಳ್ಳಿರ್ದು ಧರ್ಮಾವತಂಸಾಲಂಕೃತ ಕರ್ಣನಾಗಿರ್ಪಿನಂ ಅಲ್ಲಿಗಮರ ನಿಕಾಯದೊಡನೆ ಬಂದಾರಣಕಲ್ಪದಮಣಿ ಕೇತು ದೇವಂ ಬೆಸಸೆ ಮುನ್ನ ಕೆಳೆಯಂ ಜಯಸೇನ ಚರನಪ್ಪ ಮಹಾಬಲನೆಲ್ಲಿ ಪುಟ್ಟಿದನೆಂಬುದುಮಿಶಾಯಿರ್ದನೆ ಸಗರ ಚಕ್ರವರ್ತಿಯೆಂದು ಭಟ್ಟಾರಕರ್ ಬೆಸಸೆ ಸಗರನೊಳ್ ಸಂಭಾಷಣಂಗೆಯ್ದು ದಿವ್ಯಾಂಬರ ಭೂಷಣಂಗಳಿಂ ಪೂಜಿಸಿ,

ಭೂತಳವಲ್ಲಭ ರಿಪುಲಯ
ಕೇತು ಜನಾನಂದಹೇತು ಧರ್ಮೋದನ್ವ
ತ್ಸೇತು ಭವತ್ಸಖನೆಂ ಮಣಿ
ಕೇತುವನೇನಱಿವೊ ನೀಂ ಮಹಾಬಲ ಚರನೈ ೧

ತ್ರಿದಶನಿವಾಸದೊಳ್ ನೆನೆವುದಿರ್ವಮುಮಾದರದಿಂ ವ್ಯವಸ್ಥೆ ಮಾ
ಡಿದುದನಪಾರ ಸಂಸರಣಪಾರಮನೆಯ್ದುವುದೆಂದೊಡಂತರಂ
ಗದೊಳದನಾನ್ನೃಪಂ ನೆನೆದುವಶಾಱನೆ ಷಷ್ಠಿ ಸಹಸ್ರ ಪುತ್ರಮೋ
ಹದೆ ನಿಜರಾಜ್ಯಮಂ ತೊಱೆಯಲಾರ್ ಗೆಲಲಾರ್ಪರೊ ಮೋಹ
ರಾಜನಂ ೨

ಅಂತಾತನನೆಂತುಮೊಡಂಬಡಿಸಲಾಱದೆ ದಿವಿಜಂ ನಿಜನಿವಾಸಕ್ಕೆ ಪೋಗಿ ಅನೇಕ ಸಂವತ್ಸರಂಗಳಳುಪಿ ಪೋಗುತ್ತಿರೆ, ಮತ್ತಮೊಂದು ದಿವಸಮಾರಣ ಕಲ್ಪದಿಂ ಚಾರಣಋಷಿರೂಪದೆ ಮಣಿಕೇತು ಬಂದಾ ಪೊೞಲ ಜಿನಾಲಯದ ಮಂಡಪದೊಳಿರ್ಪುದುಂ; ಸಗರ ಚಕ್ರವರ್ತಿ ವಂದನಾ ಭಕ್ತಿಯಿಂ ಬಂದು ಬಂದಿಸಿ ಆ ಚಾರಣರಂ ನಿಮ್ಮ ತಪಂಬಟ್ಟ ಕಾರಣಮೇನೆಂದು ಬೆಸಗೊಳೆ ಜಾತಿ ಜರಾಮ ರಣಾನಿಷ್ಟಸಂಯೋಗಮಿಷ್ಟವಿಯೋಗ ಸಹಜಸಮುದ್ಭವ ಶಾರೀರ ಮಾನಸಾ ಗಂತುಕ ದುಃಖದಿಂ, ಪತ್ತುವಿಟ್ಟನಂತಚತುಷ್ಟಯಮಂ ಪೊರ್ದಲೆಂದು

ತಪಂಬಟ್ಟೆನೆಂದಱಿಪಿ ಕಿಱಿದುಂ ಬೇಗದಿಂ ತನ್ನ ದಿವ್ಯಸ್ವರೂಪಮಂ ತೋಱಿ ಮತ್ತಂ ತಮ್ಮ ಕೃತ ಪ್ರತಿಜ್ಞೆಯುಂ ತೋಱಿ ನುಡಿದು

ಆಳವಿಯಿನಿಂತನಂತಸುಖನಂತಜರಾಮರನಂತೆ ಮುಕ್ತಿಹೇ
ತುವನಘಕೇತುವಂ ಪರಮದೀಕ್ಷೆಯನೊಲ್ಲದೆ ರಾಜ್ಯಮೋಹದಿಂ
ಭವಜಲರಾಶಿಯೊಳ್ ಮುೞುಗಲಟ್ಟಿಯೆ ಚರ್ವಿತಚರ್ವಣಕ್ಕೆ ನೀ
ನವಚಟಬೇಡ ಸಾಲದೆ ಭವಾನುಭವಂ ಸಗರಾವನೀಶ್ವರಾ॥ ೩

ಕಡುಚಪಲನಿವಂ ತನಗೇ
ಗಿಡುಗುವೋ ಪರದುಃಖಶೀತಲಂ ಮೆಚ್ಚಿದವೊಲ್
ನುಡಿದಪನೆನ್ನದಿರೆನ್ನೀ
ನುಡಿ ನಿನಗೆ ಹಿತಾರ್ಥಮೆಂದೆ ಬಗೆ ಗಡ ನೃಪತೀ ೪

ಎಂದೊಡಂ ರಾಜ್ಯಮೋಹದೊಳಂ ಪುತ್ರಸ್ನೇಹದೊಳಂ ತನ್ನ ನುಡಿ ಗೊಡಂಬಡದನಿತಱೊಳೆ ಮಣಿಕೇತುವಾತನ ವೈರಾಗ್ಯಹೇತುವನವಧಾರಿಸಿ.

ಆ ಜಯಸೇನನಾದ ಭವದೊಳ್ ರತಿಷೇಣ ವಿಯೋಗದೊಳ್ ಮಹಾ
ರಾಜ ವಿಭೂತಿಯುಂ ತೊಱೆದನಿಲ್ಲಿಯುಮಂತೆ ಸುತವ್ಯಪಾಯಮಂ
ಯೋಜಿಸೆ ರಾಜ್ಯಮಂ ತೊಱೆಗುಮೆಂದಱಿದಾ ಮಣಿಕೇತು ಚಿತ್ತಪಂ
ಕೇಜದೊಳೊಂದುಪಾಯಮುಕರಂದಮನಿಟ್ಟೊಸೆದಿರ್ದನಿರ್ಪಿನಂ॥ ೫

ಅಂತನೇಕ ಸಂವತ್ಸರಂ ಕಱಿಪುತಿರಲೊಂದು ದಿವಸಮಱುವತ್ತು ಸಾಸಿರ್ವರ್ ಕುಮಾರರುಂ ತಮ್ಮಯ್ಯನನೋಲಗಿಸಲ್ ಬಂದು ಕಿಱಿದು ಬೇಗಮೋಲಗಿಸುತಿರ್ದು ಬೀಡಿಂಗೆ ಪೋಗಿಮೆನೆ

ಬೆಸನಂ ಬೆಸಸೆನೆ ಸಗರಂ
ಬೆಸನೇಂ ಮಕ್ಕಳಿರ ನಿಮಗಮೆಂದಿಂತೀಗಳ್
ಬೆಸಕೆಯ್ಯದರುಮನೆನಗಂ
ಬೆಸಕೆಯ್ಯಲ್ ಚಕ್ರರತ್ನಮಿರ್ದಪುದಲ್ತೆ ೬

ನೀಮಿನಿಬರುಮೆನ್ನೊಡನೆ ಸಾಮ್ರಾಜ್ಯಸುಖಮನನುಭವಿಸುತಿರ್ದಪುದಿದುವೆ ಬೆಸನೆಂಬುದುಮಾಗ್ರಹ ಬುದ್ಧಿಗಳಾಗಿ,

ಶರಣೆಂದಾರ್ ಬಂದೊಡಂ ಕಾಯಲುಮೇೞಿದ ವರ್ಗಾರ್ತ್ರೀಯಲುಂ
ಮಾಡಿದಂ ತೋ
ಳಿರಡಂ ಧಾತ್ರಂ ಜನಕ್ಕಂತೆರಡು ಗುಣಮುಮಿಲ್ಲೆಂಬಿನಂ ಬರ್ದುವರ್ದಂ
ನರಕಾವಾಸಂಗಳೊಳ್ ದುರ್ಯಶಕೆ ಗುಱಿಯುಮಪ್ಪಾಗಿರ್ದನೀ ಯುಕ್ತಿ ಮೆಯ್ವೆ
ತ್ತಿರೆಬರ್ದೇಬರ್ದೆವೇಗೆಯ್ದು ಪುವೆಮಗೆ ವೃಥಾಮಾನದೋರ್ದಂಡ
ಷಂಡಂ ೭

ಕುಲಮದವೊಂದು ಜಾತಿಮದವೊಂದು ವಯೋಮದವೊಂದು ಸಂದದೋ
ರ್ವಲಮದವೊಂದು ರಾಜ್ಯಮದವೊಂದಿನಿತುಂ ಮದಮೆಯ್ದೆ ಕೂಡೆ ಜಾ
ವಲಿಸೆ ಮದೋದ್ಧತರ್ಕಳಿರಲಾಱದೆ ಪೇೞ್ ಬೆಸನಾವುದೆಂದು ಭೂ
ತಲಪತಿಯಂ ಕದರ್ಥಿಸಿದರುಂಕದ ಷಷ್ಟಿಸಹಸ್ರನಂದನರ್ ೮

ಅಂತು ನಿಚ್ಚನಿಚ್ಚಂ ಕದರ್ಥಿಸೆ ನೀಮಿಂತು ಬೆಸಕೆಯ್ದಲ್ಲದಿರಿರಪ್ಪೊಡೆ ಕೈಲಾಸಪರ್ವತದೊಳ್ ಪ್ರಥಮತೀರ್ಥೇಶ್ವರ ತನೂಭವಂ ಭರತರಾಜಂ ಅನೇಕರತ್ನಮಯ ಪ್ರತಿಮೆಗಳಂ ಮಾಡಿಸಿದನವಕ್ಕೆ ನಿಮ್ಮ ಬಲ್ಲಂದದೆ ಭೂಮಿ ಗೋಚರರ್ಗಗೋಚರರಪ್ಪಂತು ಕಾಪಂಮಾಡುದೆನೆ ಮಹಾಪ್ರಸಾದಮಂತೆಗೆಯ್ವೆವೆಂದು ಬೆಸನಂ ಬೇಡಿಕೊಂಡು ಬೀೞ್ಕೊಂಡು ಪೋಗಿ ದಿಕ್ಕರಿಕರಾಕಾರ ಭುಜದಂಡದೋರ್ದಂಡ ರತ್ನದಿಂ ಕೈಲಾಸಮಂ ಬಳಸೆಯುಮಗೞ್ಗಳುಮಂ ಮಾಡುತ್ತಿರ್ಪನ್ನೆಗಂ ಮಣಿಕೇತುಮಿಂತೆಂದು ಬಗೆದಂ. ಮದೀಯಪ್ರಿಯವಯಸ್ಯನೊಳತಿ ರಹಸ್ಯದಿನ ಪ್ರಿಯ ಮಾಗಿಯುಂ ಹಿತಮಪ್ಪುದಂ ನೆಗೞ್ವೆನೆಂದು ವಿಷದೃಷ್ಟಿವಿಷೋರಗ ಸ್ವರೂಪದಿಂ ಸಗರನಱುವತ್ತುಸಾಸಿರ್ವರ್ ಮಕ್ಕಳುಮನೊಡನೆ ಕೃತಕದಿಂ ಭಸ್ಮಾವಲೇಪನಮಾಗಿ ಮಾಡಿ ಭಗೀರಥನೊರ್ವನುಮಂ ವಾರ್ತಾನಿವೇದನಾರ್ಥಂ ಕಾದುೞಿಪಿ ಕೃತಕಧರಾಮರವೇಷಧರನಾಗಿ ಮಣಿಕೇತು ಅಯೋಧ್ಯೆಗೆ ಬಂದು

ಅವಿಧಾ ಪಾರ್ವನೆನೊರ್ವನುಳ್ಳ ಮಗನಂ ನಿಷ್ಕಾರಣಂ ನಿರ್ಘೃಣಂ
ಜವನೊಯ್ದಂ ಸಕಲಾವನೀವಲಯಮಂ ಕಾವೀನೃಪಂ ಮತ್ತನೂ
ಭವನಂ ತಂದೆನಗೀಯವೇೞ್ದುದವನಂ ತಂದೀಯದಂದಾನುಮಿ
ಲ್ಲಿ ವಿಮುಕ್ತಾಸುವೆನಪ್ಪೆನೆಂದೊದಱಿದಂ ರಾಜಾಲಯದ್ವಾರದೊಳ್ ೯

ಅಂತು ಕೆಯ್ಯ ತೊಡಲ್ವೆರಸು ಮೆಯ್ಯಱಿಯದೆ ಪುಯ್ಯಲಿಡುವ ಪಾರ್ವನ

ಪುಷ್ಕಲಂ ಆಸ್ಥಾನಮಂಟಪದೊಳೋಲಗಂಗೊಟ್ಟಿರ್ದರಸಂ ಕೇಳ್ದಿನ್ನೆವರಮೆನ್ನ ರಾಜ್ಯದೊಳೆಲ್ಲಿಯುಂ ಮಱೆದಪೊಡಂ ಕೇಳ್ದಱಿಯೆನಿಂದಶ್ರುತಪೂರ್ವಮಪ್ಪ ಕರುಣಾಕ್ರಂದನಮಂ ಕೇಳ್ದೆನೆಂದು ವಿಸ್ಮಯಂಬಟ್ಟು ಧರಾಮರಂಗೆ ಬೞಿಯಂ ನಟ್ಟಿ ಬೆಸಗೊಳೆ

ಪರಕೆಗಳನೊಯ್ದು ಕೊಟ್ಟೆಂ
ಪರಮೇಶ್ವರಿಗಳ್ಗೆ ಪೋಗಿ ಪಾಟಿಂಬಟ್ಟೆಂ
ನರನಾಥ ಪುಣ್ಯಪುಂಜ
ಸ್ವರೂಪನಂ ಪಡೆದೆನೊರ್ವನಂ ನಂದನನಂ ೧೦

ಪಡೆದು ವಿವಾಹೋತ್ಸವಮಂ
ತಡೆಯದೆ ಮಾಟ್ಪಲ್ಲಿ ಬಂದು ಜವನೆಂಬ ಸಿಡಿಲ್
ಸಿಡಿಲೆಱಗಿದೊಡಾನುಂ ನಿ
ನ್ನಡಿಗೆಱಗಿದೆನೆನ್ನ ಮಗನನೀಯಲೆವೇಟ್ಕುಂ ೧೧

ಶರಣಾಗಾ ದ್ವಿಜನೆನ್ನಂ
ಕರುಣಿಸು ನೀನೆನ್ನ ಮಗನನಂತಕಪುರದಿಂ
ತರವೇಟ್ಪುದೆನಗೆ ಮರಣಂ
ಶರಣಂ ಮೇಣೆನಿತೆ ನಿನ್ನ ಚರಣಂ ಶರಣಂ ೧೨

ದ್ವಿಜವಂಶಮನಾ ಭರತಂ
ಸೃಜಿಯಿಸಿದಂ ಚಕ್ರವರ್ತಿ ನೀನುಂ ಚಕ್ರ
ಧ್ವಜನ್ನೆ ಬಡವನನೊರ್ವ
ದ್ವಿಜಸುತನಂ ದೇವ ಕಾವುದೇನರಿದಾಯ್ತೆ ೧೩

ಎಂದು ಕರುಣಮಾಗಿ ಬಾಯುೞಿದು ಪುಷ್ಕಲ್ಟಿ ತನ್ನಂ ಮೂದಲಿಸಿ ನುಡಿಯೆಯಶಾದ್ವಿಜನ ನುಡಿಯಂ ಕೇಳ್ದು ವಿಸ್ಮಯಶಾಕ್ರಾಂತಸ್ವಾಂತನಾಗಿ

ಬೆಸಕೆಯ್ಯದ ಮಂಡಲಮಂ
ಬೆಸಕೆಯ್ಸಿಯುಮೆಱಗದವರನೆಱಗಿಸಿಯುಮುಪಾ
ರ್ಜಿಸಿದೆನ್ನ ಯಶಃಪ್ರಸರಂ
ಮಸುಳ್ವಂತಾಗಿರ್ಕುವಿಶಾ ದ್ವಿಜನ್ಮನ ನುಡಿಯಿಂ ೧೪

ಬಡವಂ ಪಾರ್ವನಪತ್ಯಶೋಕವಿಕಳಂ ಬಂದೆನ್ನನೀಯಂದದಿಂ
ನುಡಿದಂ ಸತ್ತರನೆತ್ತಲಾರ್ಪರೊಳರರ್ಥಿಪ್ರಾರ್ಥನಾಭಂಗದಿಂ
ಕಿಡುಗುಂ ನಿರ್ಮಳಕೀರ್ತಿಲಕ್ಷ್ಮಿ ಪೆಱತೇನೇನೆಂದುಮೆಂತೆಂದು ಮೀಂ
ನುಡಿಯಲ್ಕಾವುದುಮಿಲ್ಲ ಪಾರ್ವನೊಳಿದಕ್ಕೇಗೆಯ್ವೆನೆಂತಕ್ಕುಮೋ ೧೫

ಸತ್ತರನೆತ್ತುವುದೆಂಬುದ
ದೆತ್ತಣ ಮಾತಘಟಮಾನಮೀ ಪಾರ್ವಂ ತಾ
ನೆತ್ತತ್ತ ಬಂದು ಮೂಡಿದ
ನೆತ್ತೆತ್ತೆನಗಿನಿತು ದುರ್ಯಶಂ ಮಾಡಿದನೋ ೧೬

ಎಂದು ಚಿಂತಿಸುತಿರ್ದ ತಮ್ಮರಸನ ಚಿತ್ತವೃತ್ತಿಯನಱಿದು ಬುದ್ಧಿಸಾಗರನೆಂಬ ಪುರೋಹಿತನೆಂದನೆಂದುಂ ತಮ್ಮಳೋರೊರ್ವರಪ್ಪೊಡಂ ಸತ್ತಱಿಯದರ ಮನೆಯ ಪುಲ್ಲಂ ಕಿರ್ಚುಮಂ ಕೊಂಡು ಬರ್ಪುದು, ಮೇಣ್ದಪ್ಪಡಂ ನಿನ್ನ ಮಗನಂ ಪಡೆವೆನೆಂದೊಡಾನುಡಿಯನಱಿದುಮಱಿಯದಂತೆ ಕಿರಿದಂತರಂಬರಂ ಪೋಗಿ ಮುಗುಳೆ ಬಂದೆಲ್ಲಿಯುಂ ಪಡೆದೆನಿಲ್ಲೆಂಬುದುಂ, ಆತನಂ ಮೆಲ್ಲ ಮೆಲ್ಲನೆ ಮಾತಾಡಿಸಿ .

ಪಗಲಿರುಳೆಳೆಜೊನ್ನಂ ಕಾಳವೆಂಬಃಕ್ತಿ ಚಿತ್ತಂ
ಬುಗೆ ನೆರೆದರಗಲ್ವರ್ ಪುಟ್ಟುವರ್ ಪೊಂದುವರ್ ನೀಂ
ಬಗೆಯ ಮರುಳೆ ಕಾಳಾಭೀಳವಕ್ತ್ರಾಂತಮಂ ದಲ್
ಪುಗದರೊಳರೆ ಪೇಟಱಿ ನಿಮ್ಮಜ್ಜ ಪಜ್ಜರ್ಕಳಾರುಂ ೧೭

ಮಱೆವುದು ದುಃಖಮನಱಿವಂ
ಮೆಱೆವುದು ಸೈರಿಪುದು ಮುಂತೆ ನೀಂ ಪೋಗಾನುಂ
ಪೆಱಗನೆ ಬಂದಪೆನೆಂಬೀ
ತೆಱನಲ್ಲದೆ ಜವನ ಬಾರಿಯೊಳ್ ಬರ್ದುಂಕುವರಾರ್ ೧೮

ಆರಾರಂ ನುಂಗಿದನಿ
ಲ್ಲಾರಾರಂ ನೊಣೆದನಿಲ್ಲ ಸವಿನೋಡಿದನಿ
ಲ್ಲಾರಾರಂ ಸುರ ಮಾನವ
ನಾರಕತಿರ್ಯಕ್ಸಮೂಹಮಂ ಯಮರಾಜಂ ೧೯

ಒಡವಂ ಬಾೞ್ಗಿಂಗುವೊ ಸಿರಿ
ಯೊಡೆಯಂ ಮಾಣ್ಗಿಂಗುವೋ ತಪಸ್ವಿಗಳಿವರಂ
ಕಡೆಗಣಿಸುವೆನೆಂಗುವೊ ಪೆ
ಣ್ಬಡೆಯೆಂಗುವೊ ತುೞಿದು ಪರಿಗುಮಂತಕರಾಜಂ ೨೦

ಕುಲಜಂ ಕುಲಹೀನನಿವಂ
ಕಲಿಪಂದೆಯಿವಂ ಮಹಾಭಿಮಾನಿಯಿವಂ ನಾ
ಣಿಲಿಯಿವನೆನ್ನದೆ ಪಲರಂ
ನಲಿನಲಿದಾಟಂದು ಕೊಂದಪಂ ಯಮರಾಜಂ ೨೧

ಏಂ ನಿಷ್ಕರುಣಿಯೊ ಪಸುಮಗ
ನೆನ್ನದೆ ಮುತ್ತಾಣ್ಮನೆನ್ನದೞಿವುಳ್ಳಂ ಬಾ
ೞ್ಗೆನ್ನದೆ ಮರುಳಕ್ಕಟ ಮಾ
ಣೆನ್ನದೆ ಮುಂಬಿಟ್ಟು ಕೊಂದಪಂ ಯಮರಾಜಂ ೨೨

ಮೊೞೆಯಿಡೆಯಿಡೆ ಕೂಗಿಡೆಯಿಡೆ
ದೞದೞಯೆಂದೆೞೆದು ಪುಯ್ಯಲಿಡೆಯಿಡೆ ಕೊಲ್ಗುಂ
ಕೂೞಿಯುಂ ಕೊಲ್ವಂತಿರೆ ತಿೞಿ
ಕೊೞೆಗೊಂಡು ಜಗಜ್ಜನಂಗಳಂ ಯಮರಾಜಂ ೨೩

ಮೃತಪಟಹಂ ಜಯಪಟಹಂ
ಚಿತಾಗ್ನಿಧೂಮಂ ಜಯಧ್ವಜಂ ಜನಕರುಣಾ
ರುತಿ ಜಯಮಂಗಳರುತಿಯೆನೆ
ಕೃತಾಂತರಾಜಂಗೆ ರಾಜ್ಯಚಿಹ್ನಮಿದಲ್ತೆ ೨೪

ಆ ಜಗದೇಕಕಂಟಕನನಾ ಬಹುಭಕ್ಷಿಯನಾ ತ್ರಿಲೋಕಮಂ
ಕೇಜಸಮುತ್ಥಜೀವಮಕರಂದಮದಾಳಿಯನಾ ಪರಿಸ್ಫುರ
ತ್ತೇಜನನಂಗಜಾಂತಕನ ಮೋಹನಘಾಂತಕನಂತಕಾಂತಕಂ
ಶ್ರೀ ಜಿನರಾಜನಲ್ಲನುದೆೞೊಂ ಗೆಲಲಾರ್ಕುಮೆ ಮೃತ್ಯುರಾಜನಂ ೨೫

ಎಂದು ಬುದ್ಧಿಸಾಗರನುಂ ತನಗೆ ಸಂಸಾರಸ್ವರೂಪಮನಱಿಪಿ ಸದ್ಧರ್ಮೋಪದೇಶಂಗೆಯ್ದಾಗಳಾ ಬ್ರಾಹ್ಮಣಂ [ಇ] ಮರನಿವರ ನುಡಿಯೊಳ್ ತೊಡ

ಚರ್ಯವೆನೆಂದು,

ಈ ನಿನ್ನ ಪೇಳ್ದ ಧರ್ಮಮಿ
ದೇನೆನಗೆಯೊ ನಿನಗಮುಂಟೊ ನಿನಗುಳ್ಳೊಡದಂ
ನೀನಱಿಪುವುದೆನೆ ದರಹಸಿ
ತಾನನನೆಂದಂ ನರೇಂದ್ರನೆನಗದು ಮುನ್ನಂ ೨೬

ಉಂಟೆಂಬುದು, ನಿನ್ನಱುವತ್ತು ಸಾಸಿರ್ವರ್ ಮಕ್ಕಳುಮಿಂದು ದೃಷ್ಟಿ ವಿಷ ವಿಷಮವಿಷಧರನಿಂ ಭಸ್ಮಾವಶೇಷರಾದರೆಂಬುದುಂ ಸಂಸಾರಿಜೀವಂಗಳೆಂದು ಪುಟ್ಟಿದರಂದೆ ಸತ್ತರಿದೇಂ ಚೋದ್ಯಮೆಂಬುದುಂ ಮುನ್ನಿನಂತೆ ಧರ್ಮ ಕಥಾ ಕಥನ ದೊಳಿರ್ಪನ್ನೆಗಮಶ್ರುಜಲವಿಲುಳಿತಲೋಚನನುಮಪಗತೋತ್ತರೀಯನುಂ ಮನ್ಯೂದ್ಗತಕಂತನುಮತಿಪ್ರಚುರ ವಿಪ್ರಲಾಪಾಕ್ಷರ ಮುಖರಮುಖನುಂ ಅಸಹ್ಯ ಶೋಕಪಾವಕಶಿಖಾಕಲಾಪಸಂತಪ್ತಮಾನಮಾನಸನುಂ ಭಗ್ನ ಮನೋರಥನು ಮಾಗಿ ಭಗೀರಥಂ ಬಂದು ತಂದೆಯ ಮುಂದೆ ಮೆಯ್ಯನೀಡಾಡಿ—

ಬೆಸನೆಂದು ಪೂಣ್ದು ದೇವರ
ಬೆಸನಂ ಸುಕುಮಾರರೆನಿಪ ರಾಜಕುಮಾರರ್
ಬೆಸದಪ್ಪಿದರೆನಗನಿತೊಂ
ದು ಸೈಪು ಸಮನಿಸದೆ ಬರ್ದುಕ್ಕಿ ಬಂದೆಂ ನೃಪತೀ ೨೭

ಎನಲೊಡಮಾಮಾತಂ ಕೇ
ಳ್ದನಭ್ರವಜ್ರಾಭಿಘಾತಮಾದಂತೆ ಸಭಾ
ಜನಮೆಲ್ಲಂ ಮೋಹಿಸೆ ಭೋಂ
ಕೆನೆ ಹಾಹಾಕ್ರಂದಮೊಗೆದುದಂತಃಪುರದೊಳ್ ೨೮

ಆವಿರಳಗಳದಶ್ರುಜಲ
ಪ್ರವಾಹಮುದ್ದೃಪ್ತಪುತ್ರಶೋಕಾವೇಗಂ
ವಿವಸಂ ಕಿಡೆದಿರ್ದುದು ಷ
ಣ್ಣವತಿ ಸಹಸ್ರಾಂಗನಾಳಿ ನೃಪನಡಿ ಮೊದಲೊಳ್ ೨೯

ಬಿರ್ದು ನಿನಗೆ ಚತುರ್ದಶರತ್ನಂ
ಜನೇಶ ಬೆಸಕೆಯ್ದುಮಮರರೆಲ್ಲಂ ಬೆಸನೇ

ನೆನೆಂತಿರ್ಪರ್ ಬೆಸದಪ್ಪಿದ
ತನೂಜರಂ ಜವನೊಳಿಱಿದು ಬರಿಸಲ್ವೇೞ್ಕುಂ ೩೦

ಬಾಳಂ ಕಿತ್ತಂಜಿಸಿ ಬಾ
ಯ್ಕೇಳಿಸಿ ಷಟ್ಖಂಡ ಭರತಮಂ ಕಲಿಯ್ಯೈ ಬ
ಲ್ಲಾಳಿನೆ ನೆಗೞ್ದ ಧರಣೀ
ಪಾಳ ನಿಜಾತ್ಮಜರನೇಕೆ ರಕ್ಷಿಸದಿರ್ಪೈ ೩೧

ಎಲ್ಲಿತ್ತೊ ಚಕ್ರರತ್ನಮ
ದೆಲ್ಲಿತ್ತಸಿರತ್ನಮಶ್ವಗಜರತ್ನಂ ತಾ
ಮೆಲ್ಲೆತ್ತವೋಯ್ತೊಂ ಜಗತೀ
ವಲ್ಲಭ ನಿಜಸುತರನುೞದೆ ಜವನುಯ್ವಾಗಳ್ ೩೨

ಉರಿದೞಿದಪ್ಪುದು ಎಮ್ಮಯ
ಶರೀರವೋವೆಮ್ಮ ಪುತ್ರಶೋಕಾದಲಸಿಂ
ನರಪಾಲ ಮತ್ತಮನಲಾಂ
ತರಮೇವುದೊ ದಗ್ಧವಾರಿಯೆಂಬುದುಮುಂಟೆ ೩೩

ಕುಡುವುದು ಕಿಚ್ಚಂ ದೇವರ್
ತಡೆಯದೆ ಕತ್ತಿಗೆಯನೆಮಗೆ ಬೆಸಸುವುದಿನ್ನೇಂ
ಪಡೆವರಾತೊ ತನಯರಿಲ್ಲದೆ
ತಡೆದಿರ್ಪುದು ತಕ್ಕುದಲ್ತು ಭುವನಾಧಿಪತೀ ೩೪

ಒಗೆದ ಪತಿವಿರಹತಾಪದೆ
ಪುಗಲಿರ್ದರ್ ಜಿನಗೃಹಂಗಳಂ ಶಿಖಿಶಿಖೆಯಂ
ಪುಗಲಿರ್ದ ಸೊಸೆವಿರೆಲ್ಲರ
ಮೊಗಂಗಳಂ ದೇವ ನೋಡಿ ಕರುಣಿಸವೇಡಾ ೩೫

ಪಡೆವುದು ಮೇಣ್ ನಂದನರಂ
ನಡೆವುದು ಮೇಣ್ ತಪಕೆ ಸಗರವಲ್ಲಭ ಮತ್ತಂ
ಪಡೆವುದೊ ತನಯರ್ಕಳ ಪಿಂ
ಬಡಿನೊಳ್ ಪೇೞ್ವಿಮಗಮರಸ ಮಱಾನಸವಾಳೇ ೩೬

ಎಂದು ವಿಪ್ರಲಾಪಂ ಗೆಯ್ಯೆ

ದವರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿಕೈಗಣ್ಮೆ ಪೊ
ಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಣ್ಮೆ ಪೊ
ಣ್ಮುವ ನೇತ್ರಾಂಜನಮಿಶ್ರ ಭಾಷ್ಪಜಲಧಾರಾಬಿಂದುಗಳ್ ಕೂಡೆ ಕಂ
ಠವಿಮುಕ್ತಚ್ಯುತನೀಲಕಂಠಿಕೆವೊಲಾಯ್ತಂತಃಪುರಸ್ತ್ರೀಯರಾ ೩೭

ಅರಸನನೋಲಗಿಸುತ್ತಾ
ದರದಿಂದಂ ಮುಗಿದ ಕೆಯ್ಯುಮುಮೆಗಿದ ತಲೆಯುಂ
ಬೆರಸಿಪ್ಪರಸುಗಳಿರದೆಱ
ಗಿರೆ ತಲೆಯುಮನೆತ್ತದೆಱಗಿ ಶೋಕಾಕುಲಿತರ್ ೩೮

ಅನಿತೊಂದು ಶೋಕವೇಗಂ
ತನಗಾಗೆಯುಮಚಲಿತ ಸ್ವರೂಪದಿನಿರ್ದಂ
ಕನಕನಗಂಬೊಲ್ ಸಗರನ
ಮನಮಂ ಸಾಗರದ ಗುಣ್ಪನಱಿವರುಮೊಳರೆ ೩೯

ಅನಿಲಾಹತಿಯಿಂ ಚಳಿಯಿಕು
ಮನೋಕಹಾನೀಕಮದ್ರಿಚಳಿಯಿಕುಮೆ ಪೃಥ
ಗ್ಜನದಂತುದಾತ್ತ ಚಿತ್ತಂ
ಜನಪತಿ ಧೈರ್ಯಾಂಬುರಾಶಿ ಚಳಿಯಿಸಿದಪನೆ ೪೦

ಅವಿವೇಕಿಗಳ ಮನಂಗಳ
ನವಿರಳಬಹಳಸ್ವರೂಪಮಜ್ಞಾನತಮಂ
ಕವಿದತ್ತರಸನ ಮನಮಂ
ವಿವಿಕ್ತವಿಶದಮನದೆಂತುಮಾಱದೆ ಪೊರ್ದಲ್ ೪೧

ಘೋರತಮಮೊಡ್ಡಿಸುವೊಡಾ
ತಾರಕಮಂಡಳಮನೊಡ್ಡಿಕುಂ ಗಗನಾಲಂ
ಕಾರನನುಜ್ವಲತೇಜೋ
ಭಾರನನೇನಹಿಮಕರನನೊಡ್ಡಿಸಿದಪುದೇ ೪೨

ಅಂತು ಧೈರ್ಯರ್ಪಾವಷ್ಟಂಭ ಗಂಭೀರನಾಗಿ—

[ಅಡಸಿ] ಕೃತಾಂತನುಯ್ದು ಸುತರಂ ಪಡೆದೀಯೆಮಗೆಂದು ಕಾಂತೆಯರ್
ನುಡಿದಪರೆನ್ನ ಪೆತ್ತಮಗನಂ ಪಡೆದೀಯೆನಗೆಂದು ಪಾರ್ವನುಂ
ನುಡಿದಪನಯ್ಯ ಸತ್ತವರನೆತ್ತುವರಾರ್ ಮತಿಗೆಟ್ಟರಕ್ಕಟಾ
ಬಡವುಗಳೀಕುಲಾಂಗನೆಯರೀ ಬಡಪಾರ್ವನ ನಂಟರಾಗರೇ ೪೩

ಎಂದು "ಸಮಶೀಲವ್ಯಸನೇಷು ಸಖ್ಯಂ" ಎಂಬವರ ದೀನಾನನಂಗಳಂ ನೋಡಲಾಱದೆ ಮನಮಂ ಬಲಿದು ನಿಲೆ

ಪರಿಜನಮುಂ ಪುರಜನಮುಂ
ನೆರೆದನಿಬರ್ತಮ್ಮೊಳರಸನೇಂ ಕಲ್ಲೆರ್ದೆಯೋ
ಮರವಾನಿಸನೋ ಕಲ್ಲುಂ
ಮರನಿರ್ಪಂತಿರ್ಪನಿಂತು ನಿಷ್ಕರುಣನೊ ಪೇೞ್ ೪೪

ಎಂಬ ಜನಾಪವಾದಮಂ ಕೇಳ್ದು ಬುದ್ಧಿಸಾಗರಂ ಸಗರನ ಮೇಲೆ ಸಿತಸರ್ಷಪಂಗಳನಿಟ್ಟಿಯೆ ಸುರಿವುದುಂ ತಪ್ತಾಯಃಕಟಾಹಪತಿತಲಾಜಃಪುಂಜದಂತೆ ದೆಸೆದೆಸೆಗೆ ಚಿಳಿಲ್‌ಚಿಳಿಲೆನೆ ಸಿಡಿಲ್ದು ಪಾಱುವುದುಮೋರೋರ್ವರ್ಗೋರೋರ್ವರ್ ಮಕ್ಕಳ ದುಕ್ಕಮಂತರಸಂಗಱುವತ್ತು ಸಾಸಿರ ಮಕ್ಕಳದುಕ್ಕಂ ಸಾಮಾನ್ಯಮಕ್ಕುಮೆ ಮಹಾಸತ್ವನುಂ ಧೈರ್ಯಾಂಬುರಾಶಿಯುಮಪ್ಪುದಱಿನಸಹ್ಯಮಪ್ಪ ದುಃಖೋದ್ರೇಕಮಂ ಸೈರಿಸಿರ್ದನೆಂದು ಸಕಲ ಜನಕ್ಕೆಲ್ಲಂ ಪ್ರಕಟಂ ಮಾಡೆ ಸಗರನಾ ಬ್ರಾಹ್ಮಣಂಗಂಮತಃಪುರಕ್ಕಂ ಮಱುಮಾತುಗುಡಲರಿಯದೆ 'ಮೌನಂ ಸರ್ವಾರ್ಥ ಸಾಧನ' ಮೆಂಬುದಂ ಮನದೊಳೆ ಬಗೆದು,

ಕಡೆಯೆಯ್ದಿತ್ತೆನಗಿಂದು ರಾಜ್ಯವಿಭವಂ ಪೊಣ್ಮಿರ್ದ ಮೋಹೋದಯಂ
ತಡಿಸಾರ್ದಿರ್ದಪುದಕ್ಕೆ ಮಂಗಳಮಹಾಶ್ರೀ ಪೋಪೆನೀಗಳ್ ತಪಂ
ಬಡಲೆಂದುತ್ತಮಸತ್ವನೂರ್ಜಿತಗುಣಂ ಸಿಂಹಾಸನಂ ಭೇರಿ ಬೆ
ಳ್ಗೊಡೆಯಿಂತೆಲ್ಲಮನೊಲ್ಲದಿರ್ದನರಸಂ ತಳ್ವಿಲ್ಲದಾಸ್ಥಾನದಿಂ ೪೫

ಶ್ರೀ ಮಹಿತ ಮಹೀರಾಜ್ಯ
ವ್ಯಾಮೋಹಂ ಮಾಣ್ಗೆ ಶರಣಮಕ್ಕೆಮಗಜಿತ

ಸ್ವಾಮಿ ಭವಭಯಹರಂ ಸಕ
ಳಾಮರಜನವಿನುತಚರಿತನಪಗತದುರಿತಂ ॥೩೬॥

ಎಂದು ತಱಿಸಂದು ಷಟ್ಖಂಡಮಂಡಳ ಮಹೀಮಂಡಳೇಶ್ವರನಾಸ್ಥಾನ ಮಂಡಪದಿನೆರ್ದು ದೀಕ್ಷಾಗ್ರಹಣ ಮನೋರಥಂ ಮಹಾರಥಂ ಭಗೀರಥಂಗೆ ಸಾಮ್ರಾಜ್ಯಪದವಿಯಂ ದಯೆಗೆಯ್ದು

ಜಳಧಿತರಂಗತಾಟಿತಮಹೀಪತಿ ಚಕ್ರಧರಂ ತಪಂಬಡಲ್
ತಳರ್ವುದುಮೀಗಳೆನ್ನ ಬಗೆ ಕೂಡಿದುದಸ್ತಭವಾಬ್ಧಿ ಮಾಡಿದಂ
ಕೆಳಯನನೆಂದು ಸಂತಸದಿನಾಮಣಿಕೇತು ವಿಚಿತ್ರಕೇತುಗಳ್
ಮಿಳಿರೆ ವಿಚಿತ್ರನರ್ತನಮನಾಡಿಸಿದಂ ಖಗಮಾರ್ಗರಂಗದೊಳ್

ಆಗಳ್ ಸಗರಚಕ್ರವರ್ತಿ ದೀಕ್ಷಾಗ್ರಹಣದೃಢಚಿತ್ತನಾಗಿ ದೃಢಧರ್ಮ ರೆಂಬ ಕೇವಳಿಗಳ ಪಕ್ಕದೆ ಸರ್ವಸಂಗಪರಿತ್ಯಾಗಪುರಸ್ಸರಂ ಸಂಯಮಮಂ ಕೈ ಕೊಂಡಂ. ಇತ್ತ ಕಪಟ ಬ್ರಾಹ್ಮಣನುಂ ತನ್ನ ವಿಕ್ರಿಯೆಯಿಂ ಮಱೆದಿರ್ದ ಕುಮಾರರಲ್ಲಿಗೆ ಕಾಳೆಗಕ್ಕಮೊಳಂ ಪುಯ್ಯಲ್ಲಮೊಳನೆಂಬಂತೆ ಬೇಗಂ ಬಂದು ಚಕ್ರ ಧರದೀಕ್ಷಾಗ್ರಹಣಮನಱಿಪಲೊಡಂ ಅವರುಮಂತೆ ಸಂವೇಗನಿರ್ವೇಗಪರರಾಗಿ ದೃಢಧರ್ಮಕೇವಳಿಗಳ ಸನ್ನಿಧಿಯೊಳ್ ತಪೋನಿಧಿಗಳಾದರ್. ಆ ವೃತ್ತಿ ಕರಮಂ ಭಗೀರಥಂ ಕೇಳ್ದು ತಾನುಮವರಲ್ಲಿಗೆ ಬಂದು ಪಂಚಮುಷ್ಟಿಯಿಂ ಬಂದಿಸಿ ಕುಳ್ಳಿರ್ದು ಧರ್ಮಶ್ರವಣಾನಂತರಂ ಜೀವಸ್ವರೂಪಮುಮನಱಿಯೆ ಬೆಸಸುವುದೆಂದು ಮುಕುಳಿತಾಂಜಲಿಯಹಾಗಿ ಬಿನ್ನಪಂಗೆಯ್ದಾಗಳ್ ನಿನ್ನ ಬೆಸ ಗೊಂಡ ಪರಮೇಶ್ವರ ಧರ್ಮತತ್ವಾರ್ಥಕಥನದೊಳ್ ಅಷ್ಟವಿಧೋತ್ಕೃಷ್ಟ ಗುಣಂಗಳಿಂದಂ ನೆಱೆದನಾಚಾರ್ಯನಕ್ಕುಂ. ದಶವಿಧ ಶುದ್ಧ ಗುಣಂಗಳಿಂ ನೆರದಂ ಶ್ರೋತೃವೆಂಬೊನಕ್ಕುಂ. ಅದಱಿನಿನಿ [ತು] ಗುಣಂಗಳ್ಗೆ ಪಾತ್ರ ಭೂತನಾದ ನೀನನವಹಿತಚಿತ್ತನಾಗಿ ಕೇಳ್ವುದು, [ಅಂತು] ಮೂಲೋತ್ತರ ಭೇದದಿಂ ಭಿನ್ನಕರ್ಮಪ್ರಕೃತಿಗಳಂ ಸಂಕ್ಷೇಪಕ್ರಮದೊಳಱಿಪಿ ಕರ್ಮಾವೃತಂಗಳುಂ ರ್ಮವಿಮುಕ್ತಂಗಳುಮಪ್ಪ ಜೀವಾದಿದ್ರವ್ಯಂಗಳಾಧಾರಭೂತಮಪ್ಪ [ಲೋಕ ವಿಭಾಗಮುಮಂ ಜೀವಸ್ವರೂಪಮುಮನಱಿಯೆ ಬೆಸಸಿ]

ಪರಮಜಿನಧರ್ಮಮುಂ ತ
ತ್ಸ್ವರೂಪದಿಂ ನಂಬಲ್ಲೊಲ್ಲದೀ ಸಂಸೃತಿಯೊಳ್
ತಿರಿದಪುವು ಜೀವಮದನಾ
ದರದಿಂ ನಂಬಿದೊಡೆ ತಿರಿವ ಬೇವಸಮುಂಟೆ ೪೮

ನಾರಕತಿರ್ಯಗ್ಗತಿ ಸಂ
ಸಾರಿಗೆ ಪಾಪೋಪಚಯದೆ ಸುರಗತಿ ಪುಣ್ಯ
ಪ್ರೇರಿತದೆ ನೃಗತಿ ಮಿಶ್ರದೆ
ಸಾರೆ ವಲಂ ಸುಗತಿ ಪುಣ್ಯಪಾಪಕ್ಷಯದಿಂ ೪೯

ದೊರೆಕೊಂಡಿರ್ದ ಶುಭಾಶುಭ
ಪರಿಣಾಮಮೆ ಪುಣ್ಯಪಾಪಕಾರಣಮದಱಿಂ
ಪರಿಣಾಮ ಶುದ್ಧಿಯಿಂದಾ
ಚರಿಪುದು ಪರಲೋಕಹಿತಮನಿದೆ ಜಿನತತ್ವಂ ೫೦
ಎಂದು

ಮೊದಲಿಂತಗೆಟ್ಟಿಧೋಲೋ
ಕದ ಮಧ್ಯಮ ಲೋಕದೂರ್ಧ್ವ ಲೋಕದ ತೆಱನಂ
ವಿದಿತಂ ಮಾಡೆ ಮುನೀಂದ್ರನ
ಪದಪದ್ಮಕ್ಕೆಱಗಿದಂ ಭಗೀರಥರಾಜಂ ೫೧

ಅಂತೆಱಗಿ ಪೊಡವಟ್ಟು

ಬಗೆಯೊಳ್ ಧರ್ಮಾನುರಾಗಂ ನೆಗೞೆ ನೃಪಸಭಾ ಸೇವ್ಯನಾಸನ್ನ ಭವ್ಯಂ
ವಿಗಳದ್ಬಾಷ್ಪಾಂಬುನೇತ್ರಂ ವಿಪುಳಪುಳಕ ಸಂದೋಹ ಸಂಛನ್ನ ಗಾತ್ರಂ
ಸಗರಕ್ಷ್ಮಾಪಾಲಪುತ್ರಂ ಸಕಲವಸುಮತೀಪ್ರಾಜ್ಯಸಾಮ್ರಾಜ್ಯಪಾತ್ರಂ
ವಿಗತವ್ಯಾಮೋಹಭೇದಂ ಜಿನಪತಿಮತಮಂ ಕೇಳ್ದು ಸಂತುಷ್ಟನಾದಂ ೫೨

[ಇಂತು] ಸಂತುಷ್ಟಚಿತ್ತನಾಗಿ ಮೋಕ್ಷಪುರಪ್ರಸ್ಥಿತ ಭವ್ಯ ಪಥಿಕ ಪಾಥೇಯಮಪ್ಪ ಸಮ್ಯಕ್ತ್ವಮುಮಂ ಸ್ವರ್ಗಾಪವರ್ಗ ಸೋಪಾನಮಾರ್ಗಂಗಳಪ್ಪ ಪರಮಶ್ರಾವಕವ್ರತಂಗಳುಮಮಂ ಭಗೀರಥಮಹೀಪತಿ ಕಯ್ಕೊಂಡು ದೃಢಧರ್ಮಕೇವಳಿಗಳಂ ಪೂಜಿಸಿ ಪೊಡವಟ್ಟು ಮನೋರಥಂಬೆರಸು ಪೋದಂ.

ಆಗಳ್ ಮಣಿಕೇತು ತನ್ನ ಗೆಯ್ದ ಷಟ್ಪ್ರಪಂಚಮಂ ಪ್ರಕಟಂ ಮಾಡಿ ನಿಶ್ಶಲ್ಯಂಗೆಯ್ದು ನಿಜನಿವಾಸಕ್ಕೆ ಪೋದಂ.

ಇತ್ತ ಸಗರಮುನಿವೆರಸಱುವತ್ತು ಸಾಸಿರಕುಮಾರಮುನಿಗಳುಂ ಚರಮ ದೇಹಧಾರಿಗಳಾತನ ಪರೋಪಕಾರಬುದ್ಧಿಯುಮಂ 'ಇಷ್ಟಂ ಧರ್ಮೇಣ ಯೋಜಯೇತ್' ಎಂಬ ವಾಕ್ಯಮುಮಂ ನೆನೆದಾ ಕಲ್ಯಾಣಮಿತ್ರಂ ಆಪ್ಪೊಡಿಂತಾ ಗಲ್ವೇಟ್ಕುಮಾತನಂತು ನಮಗೆ ಪರೋಪಕಾರಿಗಳಾರುಮಿಲ್ಲ. ಅನಂತಸಂಸಾರ ಚಕ್ರದೊಳ್ ತಿಱ್ರನೆ ತಿರಿವ ನಮ್ಮನಿಬರುಮನಪವರ್ಗಮಾರ್ಗಮಂ ಕಾಣಿಸಿದ ನೆಂದು ಪರಮಾನಂದಭರಿತನಾಗಿ ಪೊಗಟ್ಟು ಸಮ್ಮೇದಾಗ್ರದೊಳುಗ್ರೋಗ್ರತಪ ದೊಳ್ ನೆಗಟ್ಟು ಕೆಲವು ಕಾಲದಿಂ ಸಗರ ಮುನಿಕುಂಜರಂ ಸಂಸಾರಬಂಧಕಾರಣ ನಿಗಳಬಂಧಂಗಳಂ ಪಱಿಯೆಪೊಯ್ದು, ಕರ್ಮವೀರರಂ ಬೆದಱೆ ಬೆಂಕೊಂಡು, ಸನ್ಮಾರ್ಗವೀಥಿಯೊಳ್ ಪರಿದು ಪರಮಗತಿಯನೆ [ಯ್ದಿದರ್]

## ಉಪಸಂಹಾರಂ

## ಅ) ಕವಿಕಾವ್ಯಪ್ರಶಸ್ತಿ

ಎನಿತೊಳವು ಮನದ ಸಂದೆಯ
ಮನಿತುಮಸಂದಿಗ್ಧಮೆನಿಸುಗುಂ ಧರ್ಮದೊಳ
ಪ್ಪನುರಾಗಮೊದವುಗುಂ ರ
ತ್ನನ ಪೇಟ್ದಜಿತನ ಪುರಾಣಮಂ ಕೇಳಲೊಡಂ ೧

ಪೆಱವುಳ್ಳುವಿಲ್ಲಿಯೊಳವಾಗಮ ಭಾಷೆಗಳಲ್ಲಿಯುಳ್ಳುವಂ
ಪೆಱವುಳಿ ಕಾಣಲಾಗದೆನೆ ಪಂಪನ ರನ್ನನ ಪೇಟ್ದ ಕಬ್ಬದೊಳ್
ನೆಱೆಯೆ ಪರಿಸ್ಫುಟಂ ನೆಱೆಯದಿರ್ದುದುಮಂ ನುಡಿದೆಯ್ದೆ ಬಲ್ಮೆ ಕ
ಣ್ದೆಱೆಯೆ ನೆಗಟ್ಚಿದಂ ಕವಿಚತುರ್ಮುಖನಾಗಮ ವೇದಿಯಪ್ಪುದಂ ೨

ಈ ದೊರೆಯ ಕಥಾನಾಯಕ
ನೀ ದೊರೆಯ ಮಹಾಪ್ರಸಿದ್ಧಕವಿ ಪೋದರೊಳಿ
ಲ್ಲಾದರೊಳಿಲ್ಲಪ್ಪರೊಳಿ
ಲ್ಲೀ ದೊರೆಯುವು ಕೃತಿಗಳಿಲ್ಲ ಸದಲಂಕೃತಿಗಳ್ ೩

ಉಪಮಾತೀತಮೆನಿಪ್ಪಾ
ದಿಪುರಾಣದ ರೇಖೆಗಂ ಬರಲ್ ನೆಱೆಗುಮೆ ಶಾಂ
ತಿ ಪುರಾಣದ ರೇಖೆಗಮಜಿ
ತಪುರಾಣದ ರೇಖೆಗಂ ಪುರಾಣದ ಕೃತಿಗಳ್ ೪

ಕವಿಜನದೊಳ್ ರತ್ನತ್ರಯ
ಪವಿತ್ರಮೆನೆ ನೆಗೞ್ದ ಪಂಪನುಂ ಪೊನ್ನಿಗನುಂ
ಕವಿರತ್ನನುಮೀಮೂವರ್
ಕವಿಗಳ್ ಜನಸಮಯ ದೀಪಕರ್ ಪೆಱರೊಳರೆ ೫

ಣ್ಯವಂತರಿರ್ವರೆ ಕೃತಾರ್ಥರಿರ್ವರೆ ಸೊಬಗರ್
ಕವಿತಾಗುಣಾರ್ಣವಂ ಮೇಣ್
ಕವಿರತ್ನಂ ಮೇಣ್ ಗುಣಕ್ಕೆ ಮಚ್ಚರಮುಂಟೆ ೬

ಬೆಳುಗಲಿಯುಮ್ಮೂಱರೊಳ
ಗ್ಗಳೆಮೆನಿಸುವ ಜಂಬುಖಂಡಿಯೆಪ್ಪತ್ತರ್ಕಂ
ತಿಳಕಮೆನೆ ನೆಗೞ್ದ ಮುದುವೊಳ
ಲೊಳೆ ಪುಟ್ಟಿ ಸುಪುತ್ರನೆನಿಸಿದಂ ಕವಿರತ್ನಂ ೭

ಸಂದ ಪತಿವ್ರತಾಗುಣವಿಭೂಷಣದಿಂ ನೆಗೞ್ದಬ್ಬಲಬ್ಬೆ ತಾಯ್
ತಂದೆಜಿನೇಂದ್ರ ಪಾದಕಮಲ ಭ್ರಮರಂ ಜಿನವಲ್ಲಭೇಂದ್ರನ
ಣ್ಣಂ ದೃಢಬಾಹುರೇಚಣನುದಾರಗುಣಂ ಗುಣಿಮಾರಮಯ್ಯನೆಂ
ದಂದೆ ಮಣಿಕ್ಕಳಾರ್ಕನೆನಿಸಿತ್ತೆಸಕಂ ಕವಿಚಕ್ರವರ್ತಿಯಾ ೮

ಗುರುಗಳಜಿತಸೇನಾಚಾರ್ಯರಿಂದ್ರಾದಿವಂದ್ಯಾ
ಚರಿತರಜಿತಶೌರ್ಯಸ್ವಾಮಿ ಚಾವುಂಡರಾಯಂ
ವರದನಜಿತನಾಥಂ ಸತ್ಯನೆಂದಂದು ರತ್ನಂ
ಬರೆಗಮಧಿಕಪುಣ್ಯಂನೋಡೆಯೇಂ ನೋಂತನಾವೊಂ ೯

ಮದನಾವತಾರಮಂ ಕನ
ಕದಂಡಚಾಮರ ಮಸುನ್ಮದೇಭಮನುತ್ತುಂ

ಗದ ಭತ್ತಗಾವೆಯುಂ ಪಡೆ
ಮುದಾತ್ತಕವಿತಿಲಕನೆನಿಸಿದಂ ಕವಿರತ್ನಂ ೧೦

ಸಂತತದೇವಭಕ್ತಿ ಪತಿಭಕ್ತಿಗುಣಂಗಳೆ ಭೂಷಣಂಗಳಿ
ರ್ಪಂತೆಸೆದಿರ್ಪಿನಂ ತನಗೆ ಧರ್ಮಕುಲೋಚಿತ ಶುದ್ಧವೃತ್ತಿಯಿಂ
ಕಾಂತೆಯರೊಳ್ಗುಣಂಬಡೆದ ಧರ್ಮದ ಪೆರ್ಮೆಗೆ ನೋಂತ ಜಕ್ಕಿಯುಂ
ಶಾಂತಿಯುಮೆಂಬರಿರ್ವರೆ ಕುಲಾಂಗನೆಯರ್ ಕವಿಚಕ್ರವರ್ತಿಯಾ ೧೧

ನೆಗಟ್ದಿವರಿರ್ವರ ಪೆಸರ್ಗಳ್
ನೆಗಟ್ದಿವು ತನ್ನೆರಡು ಮುದ್ಧ ಕೃತಿಗಳ್ ರಾಯುಂ
ಮಗನತ್ತಿಮಬ್ಬೆ ಮಗಳೆನೆ
ನೆಗಟ್ದಿಂ ಸಂತಾನವೃದ್ಧಿಯಿಂ ಕವಿರತ್ನಂ ೧೨

## ಆ) ಮಂಗಳಂ

ವಿನುತಾರ್ಥಿಗೆ ಗಡ ಮಾಣಿಕ
ಮನೆ ನಚ್ಚುವ ನಾಗದೇವನಗ್ರಸುತಂ ಮಾಂ
ತನದಿಂ ಮಕ್ಕಳ ಮಾಣಿಕ
ಮೆನಿಸಿದನಭಿಮಾನಿ ದಾನಿ ಪಡೆವಳತೈಲಂ ೧

ಆದಿರವ ಗಂಡನೆಂಬುದುದಿತೋದಿತನೆಂಬುದಗಣ್ಯಪುಣ್ಯನೆಂ
ಬುದು ಗುಣವಂತನೆಂಬುದು ದಯಾಪರನೆಂಬುದು ಧರ್ಮಚಿತ್ತನೆಂ
ಬುದು ಶುಭವೃತ್ತನೆಂಬುದು ಮಹೋದಯನೆಂಬುದು ದೇವಭಕ್ತನೆಂ
ಬುದು ಪತಿಭಕ್ತನೆಂಬುದು ಜಗದ್ವಳಯಂ ಪಡೆವಳ್ತೈಲನಂ ೨

ಜಗತೀಚಕ್ರಮನಾಳ್ಗೆ ತೈಲನೃಪನೇಕಚ್ಛತ್ರದಿಂ ಚಕ್ರವ
ರ್ತಿಗೆ ದಿಗ್ಭಿತ್ತಿವರಂ ನಿಮಿರ್ಗೆ ನೆಲನಾಸ್ವಾಮಿ ಪ್ರಸಾದೋದಯಂ
ಮಿಗೆ ತೈಲಂ ನೆಗಟ್ದತ್ತಿಮಬ್ಬೆಯ ಮಗಂ ಮತ್ಕಾವ್ಯಮಂ ಮೆಚ್ಚಿಕೇ
ಳ್ವಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂಮಂಗಳಂ ೩

# ಟಿಪ್ಪಣಿಗಳು

## ಪ್ರಾರ್ಥನೆ

೧. ಶ್ರೀಮತ್=ಪುಣ್ಯಸಂಪನ್ನನಾದ, ನಮ್ರ=ವಿನಯದಿಂದ ಬಾಗಿದ-ನಮಸ್ಕರಿಸಿದ, ಅಮರೇಂದ್ರ=ಅಮರರ ಇಂದ್ರ, ಮಣಿಮಕುಟ=ರತ್ನಖಚಿತವಾದ ಕಿರೀಟ, ದ್ಯೋತಿ=ಪ್ರಕಾಶ, ಬಾಲಾರ್ಕ (ಬಾಲ+ಅರ್ಕ)=ಬಾಲಸೂರ್ಯ ಉದ್ದಾಮ=ಶ್ರೇಷ್ಠ, ಕಾಶ್ಮೀರರಾಗ=ಕುಂಕುಮಕೇಸರಿಯ ಬಣ್ಣ-ಕೆಂಪುಬಣ್ಣ ಹಸ್ತಾರುಣಾಬ್ಜಂ=ಕಮಲದಂತೆ ಕೆಂಪಾದ ಕೈಗಳು, ಹೈಮಂ=ಹೇಮಮಯ ವಾದ, ಕರ್ಣಾವತಂಸ=ಕಿವಿಯ ಆಭರಣ, ಕರಂ=ವಿಶೇಷವಾಗಿ ಆರ್ಹಂತ್ಯ ಲಕ್ಷ್ಮೀ=ಮೋಕ್ಷಲಕ್ಷ್ಮೀ, ಧಾಮಾ=ವಾಸಸ್ಥಾನ, ಹೃತ್ಪದ್ಮ=ಹೃದಯ ಕಮಲ, ಕ್ರಮ=ಪಾದ, ಅಂಭೋರುಹಶ್ರೀ=ಮಂಗಲಕರವಾದ ಕಮಲ, ಮಾೞ್ಕೆ= ಮಾಡಲಿ,

ಶ್ರೀಮತ್—ಮಂಗಲವಾಚಕ, ಶ್ರೀಕಾರದಿಂದ ಮೊದಲಾದ ಸ್ತುತಿ ಶ್ರೀಕಾರದಿಂದಲೇ ಮುಗಿದಿರುವುದನ್ನು ಗಮನಿಸಬೇಕು, ಅಮರೇಂದ್ರ—ಜೈನ ಪುರಾಣಗಳಲ್ಲಿ ದೇವೇಂದ್ರ ಒಬ್ಬನಲ್ಲ ; ಹನ್ನೆರಡುಮಂದಿ ; ಸೌಧರ್ಮೇಂದ್ರನೇ ಪ್ರಧಾನ. ಅಜಿತಜಿನೇಂದ್ರ ಕ್ರಮಾಂಭೋರುಹಶ್ರೀಯೇ ಆರ್ಹಂತ್ಯ ಲಕ್ಷ್ಮೀ ಧಾಮ. ಆರ್ಹಂತ್ಯ ಲಕ್ಷ್ಮೀ ಕರಂ ಒಪ್ಪಿದರ್ೊಳ್.

ಶ್ರೀಮನ್ನಮ್ರಾಮರೇಂದ್ರ=ಪುಣ್ಯಸಂಪನ್ನರಾಗಿ, ವಿನಯದಿಂದ ನಮಿಸುತ್ತಿರುವ ದೇವೇಂದ್ರರ, ಅರುಣ ಮಣಿ ಮಕುಟದ್ಯೋತಿ=ರತ್ನಖಚಿತವಾದ ಕಿರೀಟಗಳ ಕಾಂತಿಯು. ಬಾಲಾರ್ಕ ಲೀಲೋದ್ದಾಮಂ-ಬಾಲಸೂರ್ಯನ ಲೀಲೆಗಿಂತ ಶ್ರೇಷ್ಠವಾದುದಾಗಿ, ಕಾಶ್ಮೀರರಾಗಂ ತನಗೆ=ತನಗೆ ಕುಂಕುಮ ಕೇಸರಿಯ ಲೇಪದಂತಿರಲು, ವಿನತ ನಾಗೇಂದ್ರ ಹಸ್ತಾರುಣಾಬ್ಜಂ=ವಿನಯದಿಂದ ಬಾಗಿರುವ ನಾಗಲೋಕಾಧಿಪತಿಗಳ ಕೈಯೆಂಬ ಕಮಲಗಳು, ಹೈಮಂ ಕರ್ಣಾವತಂಸಂ—ತನಗೆ ಸುವರ್ಣಮಯವಾದ ಕರ್ಣಾಭರಣವಾಗಿದೆಯೋ, ಎನೆ=ಎಂಬಂತೆ, ಕರಮೊಪ್ಪಿದರ್ೊಳ್=ವಿಶೇಷವಾಗಿ ಶೋಭಿಸುತ್ತಿರುವಂಥ, ಅಜಿತ ಜಿನೇಂಧ್ರ ಕ್ರಮಾಂಭೋರುಹಶ್ರೀ=ಅಜಿತ ಜಿನೇಶ್ವರನ ಮಂಗಲಕರವಾದ ಪಾದಕಮಲಗಳು, ಎಮ್ಮ

ಹೃತ್ಪದ್ಮಮಂ—ನಮ್ಮ ಹೃದಯಕಮಲಗಳನ್ನು, ಆರ್ಹಂತ್ಯ ಲಕ್ಷ್ಮೀಧಾಮಂ ಮಾಳ್ಕೆ=ಅರ್ಹತ್—ಮೋಕ್ಷ ಲಕ್ಷ್ಮಿಯ ನಿವಾಸ ಸ್ಥಾನವನ್ನಾಗಿ ಮಾಡಲಿ. [ಎಂಬುದಾಗಿ ಕವಿಯ ಪ್ರಾರ್ಥನೆ] ಮಾಡು+ಕೆ=ಮಾಳ್ಕೆ—ಶ. ದ. ಸೂ. ೨೩೦;

'ಆದೌ ಮಧ್ಯೇsವಸಾನೇಚ ಮಂಗಲಂ ಭಾಷಿತಂ ಬುಧೈಃ। ತಜ್ಜಿನೇಂದ್ರ ಗುಣಸ್ತೋತ್ರಂ ತದವಿಘ್ನ ಪ್ರಸಿದ್ಧಯೇ' ಎಂಬ ಆರ್ಷೇಯ ವಚನಾನುಸಾರ ಕವಿಯು ತನ್ನ ಕಾವ್ಯವು ನಿರ್ವಿಘ್ನವಾಗಿ ಮುಗಿದು, ಪ್ರಸಿದ್ಧಿಗೆ ಬರಲಿ ಎಂದು ಬಯಸಿ, ಪುರಾಣ ತಿಲಕದ ಆದಿಯಲ್ಲಿ ಜಿನಸ್ತುತಿಯನ್ನು ಮಾಡಿದ್ದಾನೆ.

೨. ವೃಂದಾರಕ=ದೇವ, ಅಕ್ಷಯಸುಖ=ನಾಶವಿಲ್ಲದ—ಶಾಶ್ವತವಾದ ಮೋಕ್ಷಸುಖ, ಈಗೆ=(ಈ+ಗೆ) ದಯಪಾಲಿಸಿಕೊಡಲಿ—ವಿಧ್ಯಾದ್ಯರ್ಥ ಕ್ರಿಯಾ ಪದ (ಶ. ದ ೨೩೦) ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ಇವರ ಯಕ್ಷರು ಇಪ್ಪತ್ತನಾಲ್ಕುಮಂದಿ, ಯಕ್ಷಿಯರು ಇಪ್ಪತ್ತನಾಲ್ಕುಮಂದಿ—ಇವರು ನಮಗೆ ಮೋಕ್ಷ ಸುಖವನ್ನು ಅನುಗ್ರಹಿಸಲಿ. ಯಕ್ಷಯಕ್ಷಿಯರು ತೀರ್ಥಂಕರರ ತಪೋ ರಕ್ಷಣೆಯನ್ನು ಮಾಡುತ್ತ ಸೇವೆ ಸಲ್ಲಿಸುವ ದಂಪತಿಗಳು.

೩, ಭುವನದಿಂ=ಲೋಕದಲ್ಲಿ, ತಮಗೆ, ಸುರಪತಿಪೂಜಿತಂ, ನೃಪತಿ—ರಾಜರಿಂದ—ಸೇವಿತಂ, ಉನ್ನತ ಗಂಗಮಂಡಲೇಶ್ವರ ಮಕುಟಾರ್ಚಿತಂ=ಯಾರಿಗೂ ತಲೆಬಾಗದಂತಹ (?) ಹಿರಿಯನಾದ ಗಂಗಮಂಡಲಾಧಿಪತಿಯಾದ ಮೂರನೆ ಮಾರಸಿಂಹ(....೯೭೪)ನ ಕಿರೀಟದಿಂದ ಅರ್ಚಿಸಲ್ಪಡುವುದು, ಎಂಬ, ನೆಗೞ್ತೆವೆತ್ತು=ಖ್ಯಾತಿಯನ್ನು ಪಡೆದು,ಅಲಂಕರಿಸಿ=ಅಲಂಕಾರಪ್ರಾಯವನ್ನಾಗಿ ಮಾಡಿ—ಶೋಭಿಸಿ, ಜಗತ್ಪವಿತ್ರಂ=ಜಗತ್ತಿನಲ್ಲಿ ಪವಿತ್ರವಾದುದು, ಎನೆ=ಎನ್ನಲು, ಸಂದುದಱಿಂದೆ=ಯೋಗ್ಯವಾದುದರಿಂದ—ಕೀರ್ತಿ ಪಡೆದುದರಿಂದ ಅಜಿತಸೇನ ಮುನೀಂದ್ರ, ಪದಾಂಬುಜದ್ವಯಂ=ಪಾದಕಮಲಗಳೆರಡೂ, ಎಮಗೆ, ಇಷ್ಟ ಸಿದ್ಧಿಯಂ ದೊರೆಕಿಸಿಕೊಳಿಸುತ್ತಂ=ಪ್ರಾಪ್ತವಾಗಿಸುತ್ತ. ಇಕ್ಕೆ=ಇರಲಿ. ಇರ್+ಕೆ=ಇರ್ಕೆ=ಇಕ್ಕೆ—ಶ.ದ.ಸೂ ೨೨೯

೪. ಶ್ರುತದ=ಶಾಸ್ತ್ರದ, ಒಳಪೊಕ್ಕಂದು=ಒಳಹೊಕ್ಕಾಗ—ಆಳವಾಗಿ ಅಭ್ಯಾಸಮಾಡಿದಾಗ, ಬೋಧಂ=ತಿಳಿವು—ಸಮ್ಯಜ್ಞಾನವು, ಅಕ್ಕುಂ=ಆಗುತ್ತದೆ ಆ ಭೋಧದಿಂದೆ, ಸುಗತಿಯಂ=ಒಳ್ಳೆಯಗತಿ—ಮೋಕ್ಷ—ಯನ್ನು, ಎಯ್ದಲ್ಕೆ

ಅಕ್ಕುಂ=ಹೊಂದಲಾಗುತ್ತದೆ. ಆದರಿಂದಂ=ಆದುದರಿಂದ, ಉಭಯಭವಕ್ಕಂ=ಇಹಪರ—ಮನುಷ್ಯ ಮತ್ತು ದೇವ—ಗಳ ಹುಟ್ಟುಗಳೆರಡಕ್ಕೂ, ಶ್ರುತದಿಂದೆ, ಹಿತಕರಂ, ಪೆಱತು ಉಂಟೆ=ಬೇರೆ ಒಂದಿದೆಯೇ ? —ಅಲಂಕಾರಿಕ ಪ್ರಶ್ನೆ, ಬೇರಾವುದೂ ಇಲ್ಲವೆಂದೇ ಅಭಿಪ್ರಾಯ. 'ತತ್ತ್ವ ಲೋಕದಿನಾಕಾಂಕ್ಷಿಪ ಮುಕ್ತಿಯಕ್ಕುಂ'—ಕೇಶಿರಾಜ. ಶ್ರುತ=ಜೈನವೇದ, ಗ್ರಂಥ, ಇದೇ ಶ್ರುತಸ್ಕಂಧ, 'ತೀರ್ಥಂಕರರ ದಿವ್ಯ ಧ್ವನಿಗನುಸಾರವಾಗಿ ಗಣಧರರು ರಚಿಸಿದ ದ್ವಾದಶಾಂಗ ಸೂತ್ರಗಳು. ಅವು ನಾಲ್ಕು ಭಾಗ. ಇವುಗಳಲ್ಲಿ ಒಂದೊಂದಕ್ಕೂ ಅನುಯೋಗ ಎಂದು ಹೆಸರು.'

೫, "ಕಾವ್ಯಕ್ಕೆ ರಸಗಳೂ ಅಲಂಕಾರಗಳೂ ಬೇಕಾದವು : ಸ್ತ್ರೀಯರಲ್ಲೂ ಇವು ಇರತಕ್ಕವು, ಇವುಗಳ ವಿಷಯದಲ್ಲಿ ಸ್ತ್ರೀಸಾಮಾನ್ಯಕ್ಕಿಂತ ವಾಗ್ದೇವಿ ಮಿಗಿಲೆಂಬುದನ್ನು ರನ್ನನು ಲೆಕ್ಕ ಮಾಡಿ ತೋರಿಸಿ. ತನ್ನ ಕಾವ್ಯ ಸಿದ್ಧಿಗಾಗಿ ಆಕೆಯ ಸಾನ್ನಿಧ್ಯವನ್ನು ಕೋರುತ್ತಾನೆ.

ಸ್ತ್ರೀಯರ ಅಲಂಕಾರಗಳು ಹದಿನಾರು–ಸ್ನಾನ, ವಿಲೇಪನ, ವಸ್ತ್ರ, ಶಿರೋಭೂಷಣ, ತಿಲಕ, ಕಜ್ಜಲ (ಕಾಡಿಗೆ) ನಾಸಾಭೂಷಣ, ಮಕರ ಪತ್ರ, (ಕೆನ್ನೆಗಳ ಮೇಲೆ ಚಿತ್ರಿಸಿಕೊಳ್ಳುವ ವರ್ಣವಿನ್ಯಾಸ) ಕುಂಡಲ, ಹಾರ, ಕೇಯೂರ (ಭುಜಗಳ ತೊಡಿಗೆ) ಮಣಿಭೂಷಣ. ಅಂಗುಲೀಯಕ, ಕಾಂಚೀಧಾಮ (ಒಡ್ಯಾಣ) ನೂಪುರ (ಕಾಲಂದುಗೆ) ಅಲಕ್ತಕ (ಅರಗಿನ ರಸದ ಲೇಪನ)

ಕಾವ್ಯದೇವಿಯ ಅಲಂಕಾರಗಳು ಹದಿನಾರಲ್ಲ, ಮೂವತ್ತಾರು. ಈ ಮೂವತ್ತಾರು ಯಾವುವು ಎಂಬುದು ಸ್ಪಷ್ಟವಾಗಿಲ್ಲ. ರನ್ನನ ಕಾಲಕ್ಕೆ ಪ್ರಚುರವಾಗಿದ್ದ ಭಾಮಹನ ಕಾವ್ಯಾಲಂಕಾರ. ದಂಡಿಯ ಕಾವ್ಯಾದರ್ಶ, ಕನ್ನಡದ ಕವಿರಾಜಮಾರ್ಗ — ಈ ಮೊದಲಾದ ಅಲಂಕಾರ ಗ್ರಂಥಗಳಲ್ಲಿ ನಲವತ್ತಕ್ಕೆ ಮೇಲ್ಪಟ್ಟು ಅಲಂಕಾರಗಳು ಉಕ್ತವಾಗಿವೆ. ಭರತನ ನಾಟ್ಯ ಶಾಸ್ತ್ರದಲ್ಲಿ ಮೂವತ್ತಾರು 'ಲಕ್ಷಣ'ಗಳನ್ನು ಹೇಳಿದೆ. ಇವೇ ರನ್ನನ 'ಅಲಂಕಾರ'ಗಳಾಗಿರಬಹುದೇ ?

ಒಂದಿದ=ಹೊಂದಿಕೆಯಾದ (ಧಾ. ಒಂದು) ಸ್ತ್ರೀಯರಿಗೆ ಹೊಂದತಕ್ಕದ್ದು ಪ್ರೇಮಾತ್ಮಕವಾದ ಶೃಂಗಾರ ರಸವೊಂದೇ ಎಂದು ರನ್ನನ ಅಭಿಪ್ರಾಯ, [ಪ್ರಾಚೀನರನೇಕರ ಅಭಿಪ್ರಾಯವೂ ಹಾಗೆಯೇ, ಇದನ್ನು ಒಪ್ಪಬಹುದೇ ಎಂಬುದರ

ವಿಚಾರ ಇಲ್ಲಿ ಅಪ್ರಸಕ್ತ] ಒಂದಿದ ಶೃಂಗಾರಂ ಅದು ಅಲ್ಲಂ ಒಂದೆ ರಸಂ : ಒಂಬತ್ತು ಎಯ್ದೆ ಒಡಂಬಟ್ಟುವು ಎಂದು ಪದ ವಿಭಾಗ, ಕಾವ್ಯರಸಗಳು ಒಂಬತ್ತು : ಶೃಂಗಾರ. ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಭೀಭತ್ಸ ರೌದ್ರ, ಶಾಂತ '' [ಗದಾಯುದ್ಧ ಸಂಗ್ರಹ : ಪು ೯೪–೯೫]

೬. ಶ್ರೀಮದಗಣ್ಯ ಪುಣ್ಯನಿಧಿ=ಮಂಗಲಕರವಾದ, ಅಪರಿಮಿತವಾದ ಪುಣ್ಯಕ್ಕೆ ಆಶ್ರಯ ಸ್ಥಾನ, ಜೈನ....ಭೃಂಗಿ=ಜಿನೇಶ್ವರ—ಅಜಿತ ಜಿನೇಶ್ವರ–ನ ಪಾದಕಮಲಗಳಲ್ಲಿ ತುಂಬಿ. ಜೈನ....ಭೂಮಿ=ಜೈನಧರ್ಮವೆಂಬ ಅಮೃತದ ನೀರಿನಿಂದ ವರ್ಧಿಸುತ್ತಿರುವ. ವಿನಯದಿಂದ ಕೂಡಿದ, ಭಕ್ತಜನರ ಸಂತೋಷ ವೆಂಬ ಸಸ್ಯವು ಬೆಳೆಯುವ ಭೂಮಿ. ಮದ್ಭೂಮಿಗೆ ತಾನೆ ಬೇಲಿ=ನನ್ನ ಈ ಭೂಮಿಗೆ ತಾನೇ ಬೇಲಿಯಂತಿದ್ದು ರಕ್ಷಿಸುವವಳು. ಅಂಕ=ಪ್ರಸಿದ್ಧಿ, ರೋಹಿಣಿ —ಅಜಿತತೀರ್ಥಂಕರನ ಯಕ್ಷಿ. ಭವ್ಯಜೀವಿ, ಹೀಗೆ ಅನ್ವರ್ಥಕವಾಗಿ ರೋಹಿಣಿ ಯಕ್ಷಿಯನ್ನು ಸ್ತುತಿಸುತ್ತಿರುವಾಗ ಕವಿಗೆ ದಾನ ಚಿಂತಾಮಣಿ ಅತ್ತಿಮಬ್ಬೆಯ ಸ್ಮರಣೆ !' ರೋಹಿಣಿ ಯಕ್ಷಿ ' ದಾನ ಚಿಂತಾಮಣಿಯಂತೆ ! ಚಿಂತಿತ ಮನೋರಥ =ಬಯಸುತ್ತಿರುವ ಇಷ್ಟಾರ್ಥ—ಕಾವ್ಯಸಿದ್ಧಿ, ಮಾಟ್ಕೆ=ನೆರವೇರಿಸಲಿ

೭. ಆಯತ=ವಿಶಾಲ, ಅಂಬು→ಅಂಬುರುಹ→ಅಂಬುರುಹಪತ್ರ→ ಅಂಬುರುಹ ಪ್ರತ್ರಾಕ್ಷ=ತಾವರೆಯ ದಳಗಳಂತೆ ಕಣ್ಣುಳ್ಳ. ಪಂಕ→ಪಂಕ ರುಹ=ತಾವರೆ. ಜಿನೇಂದ್ರಾಂಘ್ರಿ........ಕಲ್ಪವೃಕ್ಷನ್=ಜಿನೇಶ್ವರನ ಪಾದ ಕಮಲದಂತೆ ಆನಂದವನ್ನು ಕೊಡುವುದರಲ್ಲಿ ಕಲ್ಪವೃಕ್ಷ, ಅಜಿತಶ್ರೀ............ ವಿಷ್ಟರ=ಅಜಿತಭಗವಾನರ ಪವಿತ್ರವಾದ ಉಪದೇಶಕ್ಕಾಗಿ ರಚಿತವಾದ ಸಮವಸ ರಣದೊಳಗಿನ ಸಿಂಹಪೀಠ. ಅಕ್ಷಯ ಫಲಾಪೇಕ್ಷಂ=ಅತಿಶಯವಾದ ಫಲ— ಮೋಕ್ಷ ಫಲ—ವನ್ನು ಅಪೇಕ್ಷಿಸುವವನು – ಮಹಾಯಕ್ಷ. ಈ ಹಿಂದೆ ಹೇಳಿದ ಗುಣ ವಿಶೇಷಗಳಿಂದ ಕೂಡಿದ ಅಜಿತ ತೀರ್ಥಂಕರನ ಯಕ್ಷ ; ಭವ್ಯಜೀವಿ, ಉಪಾ ಸಕಗಣಶ್ರೀ=ಅಜಿತ ತೀರ್ಥಂಕರನನ್ನು—ತೀರ್ಥಂಕರೋಪದಿಷ್ಟ ಧರ್ಮವನ್ನು ಸೇವಿಸುವ ಗಣಧರ ಶ್ರೇಷ್ಠರು, ಸೇವ್ಯ=ಸೇವೆ ಮಾಡಲು ಯೋಗ್ಯ, ಭವ್ಯ= ಮೋಕ್ಷಕ್ಕೆ ಅರ್ಹನಾದವ.

೮. ಕುತೀರ್ಥ—ಕೆಟ್ಟಗುರು, ದುಷ್ಟ—ಹೀನವಾದ ಧರ್ಮ, ಕುತೀರ್ಥ ಧ್ವಾಂತ=ಹೀನವಾದ ಮತಗಳೆಂಬ ಕತ್ತಲು, ತೂಳ್=ಹಿಮ್ಮೆಟ್ಟಿಸು, ಓಡಿಸು ;

ನಾಶಗೊಳಿಸು, ಭವ್ಯಪ್ರಸರ=ಭವ್ಯಸಮೂಹ, ಬೋಧಾವಾಪ್ತಿಯಿಂತಾಳ್ದಿ — ಜ್ಞಾನಸಂಪನ್ನತೆಯನ್ನು ಹೊಂದಿ, ವಿಶದ........ಬೋಲ್=ಶುಭ್ರವೂ (?) ವೈಭವೋಪೇತವೂ—ಸೊಗಸುವಂತಹುದೂ, ತೇಜೋಯುಕ್ತವೂ ಆದ ಸೂರ್ಯಮಂಡಲದಂತೆ, ಉದ್ಯೋತಿಸು (ಉದ್ಯೋತ+ಇಸು) ಪ್ರಕಾಶಿಸು—ಕಾಂತಿಯಿಂದ ಬೆಳಗು. ಸಕಲ ಧಾತ್ರೀ ಚಕ್ರ=ಸಮಸ್ತಭೂಮಂಡಲ. ಧರ್ಮಚಕ್ರಂ= ಧರ್ಮ ಸಾಮ್ರಾಜ್ಯ—ಧರ್ಮವುಳ್ಳ ಚಕ್ರಾಧಿಪತ್ಯ. ತೀರ್ಥಂಕರನು ವಿಹಾರ ಮಾಡುವ ಸಮಯದಲ್ಲಿ ಆತನ ಮುಂದೆ ಚಲಿಸುವ, ಸೂರ್ಯನನ್ನು ವಿಡಾರಿಸುವ ಪ್ರಕಾಶದಿಂದ ಕೂಡಿದ, ಸಾವಿರ ಅರಗಳನ್ನುಳ್ಳ. ಚಕ್ರಪೆಂಪಿಂ ಉದ್ಯೋತಿಸುಗೆ— ಕ್ರಿ. ಪ—ಆಶೀರರ್ಥದಲ್ಲಿ—ಗೆ ಪ್ರತ್ಯಯ.

ಇಲ್ಲಿ ಕುತೀರ್ಥ(ಹೀನಮತ)ವನ್ನು ಧ್ವಾಂತ (ಕತ್ತಲೆ) ವಾಗಿ ಭವ್ಯ ಪ್ರಸರ (ಜೈನಧರ್ಮ) ವನ್ನು ಕಮಲವನ್ನಾಗಿ ರೂಪಣ ಮಾಡಲಾಗಿದೆ. ಸೂರ್ಯನು ಶುದ್ಧವೂ ಜಾಜ್ವಲ್ಯಮಾನವೂ ಆದ ಕಿರಣಾವಳಿಗಳಿಂದ ನಿತ್ಯನಿಯಮದಂತೆ ಭೂಮಂಡಲವನ್ನು ಬೆಳಗಿಸುತ್ತಾನೆ. ಹಾಗೆಯೇ ಜೈನಧರ್ಮವು ತನ್ನ ಪ್ರಭಾವದಿಂದ ಕುಮತಗಳನ್ನು ಖಂಡಿಸಿ, ಭೂಮಂಡಲದಲ್ಲಿ ಶೋಭಿಸುವಂತಾಗಲಿ, ಇಲ್ಲಿ ರೂಪಕ ಅಲಂಕಾರವಿದೆ.

## ಅತ್ತಿಮಬ್ಬೆ ಚರಿತಂ

೧. ಅಜಿತ....ಭೃಂಗಿ=ಅಜಿತತೀರ್ಥಂಕರನ ಪಾದಕಮಲಗಳ ಧೂಳಿನಲ್ಲಿ ಆಸಕ್ತವಾದ ದುಂಬಿಯೆಂದೂ, ಗುಣ....ಧ್ವಜೆ=ಗುಣಶೀಲ ದಯೆಯೆಂಬ ಬಾವುಟ—ಸನ್ಮಾನನೀಯಗೃಹಸ್ಥೆ—ವೆಂದೂ, ಸುವಿನೇಯಜನಂ—ತುಂಬು ವಿನಯಶೀಲರು—ಜಿನಭಕ್ತರು, ದಾನಚಿಂತಾಮಣಿಯುಂ=ದಾನಚಿಂತಾಮಣಿ [ದಾನ ಮಾಡುವುದರಲ್ಲಿ ಬೇಡಿದವರ ಬಯಕೆಯನ್ನು ಪೂರೈಸುವವಳು] ಎಂದು ಸುಖ್ಯಾತಳಾದ ಅತ್ತಿಮಬ್ಬರಸಿಯನ್ನು, ಬಣ್ಣಿಪುದು. ಚಿಂತಾಮಣಿ=ಬಯಸಿದುದನ್ನು ಕೊಡಬಲ್ಲ ದೇವಲೋಕದ ದಿವ್ಯರತ್ನ.

೨. ದಿಗಿಭ (ದಿಕ್+ಇಭ) ದೊಳಗೆ=ದಿಗ್ಗಜಗಳಲ್ಲಿ, ಅಮರಕರಿ= ದೇವತೆಗಳ ಆನೆಯಾದ ಐರಾವತವೂ, ದಾನಿಗಳೊಳಗೆ, ಅಗ್ಗಳದ=ಶ್ರೇಷ್ಠಳಾದ,

ದಾನಚಿಂತಾಮಣಿ, ಚಕ್ರಿಗಳೊಳಗೆ, ಆಹವಮಲ್ಲಂ=ಯುದ್ಧಮಲ್ಲನಾದ ಇಮ್ಮಡಿ ತೈಲಪನೂ, ವಿಷಯುದೊಳಗೆ=ದೇಶಗಳಲ್ಲಿ, ವೆಂಗೀವಿಷಯಂ=ವೆಂಗೀಮಂಡಳವೂ, ಮಿಗಿಲು ಎನಿಕುಂ=ಅತಿಶಯ ಎನಿಸುತ್ತವೆ. ತೈಲಪ-ಚಾಲುಕ್ಯಾಭರಣನೂ ಆಹಮಲ್ಲನೂ ಎನಿಸಿದ ಇಮ್ಮಡಿ ತೈಲಪ ಚಕ್ರವರ್ತಿ; ಈತನ ಆಳಿಕೆ ಕ್ರಿ. ಶ. ೯೭೩-೯೯೭.

೩. ಅಳಿಗೀತ=ದುಂಬಿಗಳ ಹಾಡು, ಕುಸುಮ ಪರಿಮಳ=ಹೂವಿನ ಸುವಾಸನೆ, ಫಲರಸ=ರಸಭರಿತವಾದ ಫಲಗಳು, ಮಂದಾನಿಲ=ಮಂದಮಾರುತ ಅದ್ರಿ=ಬೆಟ್ಟ, ಕಾನನ=ಕಾಡು [ಇವುಗಳ] ಲೀಲಾ. ವಿಲಸನದಿಂ=ವಿಲಾಸದಿಂದ, ವೇಂಗೀವಿಷಯಂ=ವೆಂಗೀಮಂಡಳವು, ವಿಷಯಜನಕೆ=ಈ ದೇಶದ ಜನಕ್ಕೆ—ಈ ದೇಶವನ್ನು ಪ್ರೀತಿಸುವ ಜನಕ್ಕೆ, ಭೋಗ ಮಹೀತಳಂ=ಭೋಗ ಭೂಮಿ, ಎನಿಪುದು=ಎನ್ನಿಸುತ್ತದೆ, ವಿಷಯಿ= 'Lovers', ವಿಷಯ ಸುಖವನ್ನು ಬಯಸುವ ಜನಕ್ಕೆ ಇದು ಭೋಗಭೂಮಿಯಾಗಿದೆ ಎಂದೂ ಅರ್ಥೈಸಬಹುದಾಗಿದೆ.

೪. ಜಳಧಿ....ದೊಳ್=ಸಮುದ್ರದ ಅಲೆಗಳಿಂದ ಅಪ್ಪಳಿಸಲ್ಪಡುವ ಭೂಮಂಡಳದಲ್ಲಿ, ವೆಂಗಿಮಂಡಳಂ, ನೆಗಟ್ದಿತ್ತು=ಪ್ರಸಿದ್ಧವಾಗಿದ್ದಿತು. ಅದಱೊಳ್, ಜಿತಾನ್ಯ ವಿಷಯಂ=ಎಲ್ಲ ದೇಶಗಳನ್ನೂ ಮೀರಿಸಿದ, ಕಂಮೇದೇಶಂ ನೆಗೞ್ದಿರ್ದುದು. ಅಗ್ಗಳಿಕೆಯ—ದೊಡ್ಡ ಹೆಸರಿನ, ಕಂಮೆದೆಂಶಮಂ, ಜಗತ್ತಿಲಕಂ—ಜಗತ್ತಿಗೇ ತಿಲಕಪ್ರಾಯವಾದ, ಪುಂಗನೂರ್, ಅಲಂಕರಿಸಿರ್ದುದು. ಅದರ್ಕೆ=ಆ ನಗರಕ್ಕೆ, ಮುಖ್ಯಂ ಎನೆ, ನಾಗಮಯ್ಯನ-ಅತ್ತಿಮಬ್ಬೆಯ ಅಜ್ಜ (ತಂದೆಯ ತಂದೆ) ನಾದ ನಾಗಮಯ್ಯನ, ಪೆಂಪು=ಘನತೆಯು, ಎಸೆದಿರ್ದುದು =ಶೋಭಿಸುತ್ತಿದ್ದಿತು. ನಾಗಮಯ್ಯ-ಒಬ್ಬ ಬ್ರಾಹ್ಮಣ.

೫. ಸೂನು=ಮಗ, ದಲ್=ನಿಶ್ಚಯವಾಗಿ-ನಿಶ್ಚಯಾರ್ಥದಲ್ಲಿ ಬರುವ ಅವ್ಯಯ—ಶದಸೂ ೩೧೦, . ವಿದ್ಯಾನಿಧಿ=ವಿದ್ಯೆಯೆಂಬ ಸಂಪತ್ತಿಗೆ ಆಗರನಾದವನು. ಅನುಜ=ಒಡಹುಟ್ಟಿದವ—ತಮ್ಮ, ಅನೂನಗುಣಂ=ಯಾವ ಕೊರತೆಯೂ ಇಲ್ಲದ ಗುಣವುಳ್ಳವನು. ಈ ತಮ್ಮ ಅಣ್ಣನ ಭಕ್ತನಂತೆ !

೬. ಕೌಂಡಿನ್ಯ ಕುಲಪ್ರದೀಪ—ಕೌಂಡಿನ್ಯ ಮಹರ್ಷಿಗಳಿಂದ ಪ್ರತೀತವಾದ ಕುಲವನ್ನು ಬೆಳಗುವವನು, ಕೆಯ್ಕೊಂಡು—ಸ್ವೀಕರಿಸಿ, ಮಲ್ಲಪನು ವಿದ್ಯಾ

ನಿಧಿ ಮಾತ್ರನಲ್ಲದೆ, ವಿದ್ವಜ್ಜನಾಶ್ರಯನೂ ಆಗಿದ್ದನು. ತಮರ್ಮನೆ (ತಮರ್ + ಮನೆ) —ತವರ್ಮನೆ—ತೌರ್ಮನೆ—ತೌರುಮನೆ, (ಹೆಣ್ಣಿನ) ಹುಟ್ಟಿದಮನೆ.

೭. ಶಾಸ್ತ್ರ ವಿದ್ಯೆಯನ್ನು ಅರಿಯುವುದರಲ್ಲಿ ಸದಾಕಾಲವೂ, ಶತ್ರುಗಳ ಮೇಲೆ ಬಿದ್ದು ಇರಿಯುವುದರಲ್ಲಿ ತನ್ನ ಶೌರ್ಯವನ್ನೂ ಪರಾಕ್ರಮವನ್ನೂ ಮೆರೆದವನು ಈ ಮಲ್ಲಪ. ಈ ಎರಡೂ ವಿದ್ಯೆಗಳಲ್ಲೂ, ಸಮಾನ ಶಕ್ತಿಯಿಂದ ಮೆರೆದವನು ಬೇರೆ ಯಾರಿದ್ದಾನೆ ? ಇದೊಂದು ಅಲಂಕಾರಿಕ ಪ್ರಶ್ನೆ. ಬೇರೆ ಯಾರು ಇಲ್ಲ ಎಂದೇ ಇದರ ಭಾವ.

೮. ಈ ಅಣ್ಣ ತಮ್ಮಂದಿರ ಅತಿಶಯತೆ ಎಂಥದಾಗಿದೆ ! ಇಟಿಪು= ಕೀಳುಮಾಡು. ಒಳ್ಪು=ಒಳ್ಳೆಯತನ, ಪೆಂಪು=ಘನತೆ, ಬಲದೇವ, ವಾಸು ದೇವ—ತ್ರಿಶಷ್ಠಿ (ಅರವತ್ತಮೂರು)ಶಲಾಕಾ ಪುರುಷರಲ್ಲಿ ಮಹಾಮಹಿಮರಾದ ವರು, ಅಣ್ಣ ತಮ್ಮಂದಿರು. ಅಣ್ಣ ತದ್ಭವ ಮೋಕ್ಷಗಾಮಿ, ತಮ್ಮ ಶೀಘ್ರ ಮೋಕ್ಷಗಾಮಿ, ಇವರ ಶತ್ರು ಪ್ರತಿ ವಾಸುದೇವ. ಉ : ಬಲದೇವ—ರಾಮ ವಾಸುದೇವ—ಲಕ್ಷ್ಮಣ, ಪ್ರತಿವಾಸುದೇವ-ರಾವಣ. ಮಲ್ಲಪನ ಪೊನ್ನಮಯ್ಯನ ಚರಿತಂ, ಗುಣದೊಳ್ಪು, ಪೆಂಪು—ಇಟಿಪುದು ಎಂದು ಅನ್ವಯ. ಮಲ್ಲಪ ಮತ್ತು ಪೊನ್ನಮಯ್ಯರ ಗುಣದ ಒಳ್ಳೆಯತನವು ಬಲದೇವ ವಾಸುದೇವರನ್ನೂ ರಾಮ ಲಕ್ಷ್ಮಣರನ್ನೂ ಭೀಮಾರ್ಜುನರನ್ನೂ ಕೀಳು ಮಾಡುತ್ತದೆ.

೯. ತಂಮುತಿರ್ವರುಂ=ತಾವಿಬ್ಬರೂ, ಗುರು........ಪರೋಕ್ಷದೊಳ್ =ತಮ್ಮ ವಿದ್ಯಾಗುರುಗಳಾದ ಜಿನಚಂದ್ರ ಮಹಾಮುನಿಗಳು ಗತಿಸಿದ, ನಂತರ—ಬಹುಶಃ ಅವರ ನೆನಪಿಗಾಗಿ—ಅವರ ಕೃಪಾಕಟಾಕ್ಷದಿಂದ, ಸಲೆ= ಸಲ್ಲುವಂತೆ ,ಪರೆ (ಧಾ) + ಇಸು=ಪರೆಯಿಸು, ಪರೆ=ವ್ಯಾಪಿಸು—ಹರಡು. ಇದಕ್ಕೆ —ಇಸು ಪ್ರತ್ಯಯ ಸೇರಿ ವ್ಯಾಪಿಸುವಂತೆ ಮಾಡು—ಹರಡಿಸು ಎಂದಾಗುತ್ತದೆ. ಪುರಾಣ ಚೂಡಾಮಣಿ—ಕವಿ ತನ್ನ 'ಶಾಂತಿನಾಥ ಪುರಾಣ'ಕ್ಕೆ ಕೊಟ್ಟಿರುವ ಹೆಸರು 'ಪೊನ್ನನು ಈ ಗ್ರಂಥಕ್ಕೆ ' ಪುರಾಣ ಚೂಡಾಮಣಿ ' ಎಂಬ ಹೆಸರನ್ನು ಕೊಟ್ಟು, ಶಾಂತಿ ತೀರ್ಥೇಶ್ವರನ ಮೇಲ್ಮೆಯನ್ನು ಸೂಚಿಸಿರುವನು.' ಶಾಂತಿಪುರಾಣ ಜಗತ್ಪ್ರ ಸಿದ್ಧವಾಗಿದೆಯಂತೆ !

ವ : ಅಪ್ರತಿಮ=ಎಣೆಯಿಲ್ಲದ, ವಿಪ್ರಕುಲ=ಬ್ರಾಹ್ಮಣವಂಶ- ಜೈನ ಬ್ರಾಹ್ಮಣವಂಶ. ಜೈನ ಧರ್ಮಾನುಯಾಯಿಗಳಲ್ಲೂ ವೃತ್ತಿ ಆಧಾರಿತ ಚತು

ವರ್ಗಗಳಿವೆ. ಅಸಹಾಯ........ಸಂಪನ್ನನುಂ=ಯಾರ ಸಹಾಯವನ್ನೂ ಬಯ ಸದ ಸಾಹಸದ ಉತ್ಸಾಹದಿಂದ ಸಂತುಷ್ಟವಾದ ಸಂಪತ್ತುಳ್ಳವನು. ರತ್ನತ್ರಯ =ಮೂರು ರತ್ನಗಳು-ಸಮ್ಯಗ್ದರ್ಶನ, ಸಮ್ಯಜ್ಞಾನ. ಸಮ್ಯಕ್ಚಾರಿತ್ರ ಚಾಳುಕ್ಯಾಭರಣನುಂ=ಚಾಳುಕ್ಯ ವಂಶಕ್ಕೆ ಶ್ರೇಷ್ಠನಾದವನೂ ಆಹವಮಲ್ಲ= ಯುದ್ಧದಲ್ಲಿ—ಜಟ್ಟಿ--ಇಮ್ಮಡಿ ತೈಲಪನಿಗೆ ಇದ್ದ ಬಿರುದು ಇದು. ಮಲ್ಲ= ಕುಸ್ತಿಯಾಳ—ಬಿಡಿಕೈಗಳಿಂದ ಹೋರಾಡುವವನು. ಶ್ರೀಮತ್....ಜ್ಞಾನಾತಿ, ಶಯನುಂ=ಇಮ್ಮಡಿ ತೈಲಪನ ಸಾಮ್ರಾಜ್ಯದ ಅಭಿವೃದ್ಧಿಗೆ ಕಾರಣವಾದ ತನ್ನ ಅಪ್ಪಣೆಗಳ ಪರಂಪರೆಯಿಂದ ಶೋಭಿಸುತ್ತಿರುವ ಅತಿಶಯವಾದ ತಿಳುವಳಿಕೆ ಉಳವನೂ, ಅಪ್ರತಿಮಲ್ಲನುಂ—ತನಗೆ ಎದುರಾಗುವ ಯಾವ ಜಟ್ಟಿಯೂ ಇಲ್ಲ ದವನೂ.

೧೧. ವಿನಯಮತಿ=ವಿನಯವಂತೆ, ಅನೂನಗುಣ=ಕುಂದಿಲ್ಲದ ಗುಣ —ತುಂಬಗುಣವಂತ, ನಂದನೆ=ಮಗಳು × ನಂದನ, ಜಿನಪಾದಪಯೋಜ ಭೃಂಗಿ=ಜಿನೇಶ್ವರನ ಪಾದಕಮಲಗಳಲ್ಲಿ ದುಂಬಿಯಂತಿರುವವಳು ಎಂದರೆ ಪರಮಜಿನಭಕ್ತೆ, ಕುಲವಧು=ಹೆಂಡತಿ—ಧರ್ಮಪತ್ನಿ, ಅಬ್ಬೆ=ಅವ್ವೆ.

ವ: ಪುಣ್ಯಭಾಜನ=ಪುಣ್ಯಪಾತ್ರ—ಯೋಗ್ಯ. ಪುರುಷ ಕನ್ಯಾರತ್ನ ಗಳು=ಶ್ರೇಷ್ಠರಾದ ಗಂಡು, ಹೆಣ್ಣು ಮಕ್ಕಳು, ಸಭಾಸಂವಾಸ ಚತುರ=ಆಸ್ಥಾನ ಕಾರ್ಯಗಳಲ್ಲಿ ಕುಶಲ, ಚತುರುಪಧಾ=ನಾಲ್ಕು ಬಗೆಯಾದ ಪರೀಕ್ಷೆಗಳು ಧರ್ಮೋಪಧಾ, ಅರ್ಥೋಪಧಾ, ಕಾಮೋಪಧಾ, ಭಯೋಪಧಾ, ಚತುರುಪಧಾ ವಿಶುದ್ಧ=ನಾಲ್ಕು ವಿಧವಾದ ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟ ವನು, ಮಹೀಪತಿ=ರಾಜ, ಮಹೀಭಾಗ=ರಾಜ್ಯ, ದಿಗ್ನಾಗ=ದಿಗ್ಗಜ- ದಿಕ್ಕನ್ನು ಕಾಯುವ ಆನೆ, ನಾಗರಾಜ=ನಾಗಲೋಕದ ಒಡೆಯ, ಪುರುಷರತ್ನ= ಪುರುಷಶ್ರೇಷ್ಠ, ರತ್ನತ್ರಯಾಲಂಕೃತೆ=ರತ್ನತ್ರಯ ಧರ್ಮಾಚರಣೆಯಿಂದ ಶೋಭಿಸುವವಳು, ದಾನ ಚಿಂತಾಮಣಿ=ನೋ: ೨—೧ ಚಾರಿತ್ರಮೇರು=ಸದಾ ಚಾರದಲ್ಲಿ ಮೇರುಪರ್ವತಕ್ಕೆ ಸಮಾನಳು, ಗುಣದಂಕ ಕಾರ್ತಿ=ಒಳ್ಳೆಯ ಗುಣ ಗಳಲ್ಲಿ ತುಂಬ ಗಟ್ಟಿಗಳು. ಭವ್ಯ........ಭೂಮಿಯುಂ=ಧರ್ಮನಿರತರಾದವರ. ಇಷ್ಟಾರ್ಥಗಳಿಗೆ ತಾಯಿಯಂತಿರುವವಳು; ಕೊಡುವವರನ್ನು ಕಂಡಾಗಷ್ಟೇ ಕೇಳುವುದು, ಕವಿವರ ಕಾಮಧೇನು=ಕವಿಶ್ರೇಷ್ಠರಿಗೆ ಬೇಡಿದುದನ್ನು ಕೊಡುವ

ವಳು, ರನ್ನ ಅತ್ತಿಮಬ್ಬೆಯಿಂದ ತನಗೊದಗಿದ ಪ್ರೋತ್ಸಾಹವನ್ನು ತುಂಬು ಕೃತಜ್ಞತೆಯಿಂದ ಸ್ಮರಿಸುತ್ತಿದ್ದಾನೆ. ಕಾಮಧೇನು=ಬಯಸಿದುದನ್ನು ಕೊಡುವ ದೇವಲೋಕದ ಹಸು. ಜಿನಧರ್ಮಪತಾಕೆ=ಜಿನಧರ್ಮವೆಂಬ ಬಾವುಟಕ್ಕೆ ಸಮಾನಳು—ಜಿನಧರ್ಮವನ್ನು ಎತ್ತಿ ಹಿಡಿಯುವವಳು, ಮಹಾ....ತಿಲಕೆ= ಪತಿವ್ರತಾಸ್ತ್ರೀಯರ ಸಮೂಹಕ್ಕೆ ತುಂಬ ಶ್ರೇಷ್ಠಳು, ಪತಿ....ಮಂಡಿತೆ= ಪತಿವ್ರತಾ ಗುಣವೆಂಬ ಒಡವೆಗಳಿಂದ ಅಲಂಕೃತಳಾದವಳು.

೧೧. ವೀರಾವತಾರನೆನಿಸಿದ=ವೀರಾವತಾರಂ ಎನಿಸಿದ=ಪರಾಕ್ರಮವೇ ಈತನ ರೂಪದಲ್ಲಿ ಅವತರಿಸಿಬಂದಿದೆಯೋ ಎಂಬಂತೆ ಇರುವ. ನೆಗಟ್ಟೆ=ಕೀರ್ತಿ, ಒಜಿರಟರಮಲ್ಲಂ=ನಯ ನಾಜೂಕು ಇಲ್ಲದ, ಹಟವಾರಿ ತನದ. ಒರಟು ಸ್ವಭಾವದವರಲ್ಲಿ ಜಟ್ಟಿ. ಅಳಿಯನಾದನಾಗದೇವನು ವೀರ್ಧ ನೆಗಜ್ತೆಯ ವೀರಾಗ್ರಣಿ, ಒಜಿಟರಮಲ್ಲಂ

೧೨. ಎನೆ ನೆಗಟ್ದ=ಈ ಹಿಂದೆ ಹೇಳಿದಂತೆ ಸುಖ್ಯಾತಿವೆತ್ತ, ನಾಗ ದೇವನು ದಲ್ಲಪನ ಮಗ. ಈ ನಾಗದೇವ ಅತ್ತಿಮಬ್ಬೆಯರ ಮಗನೇ ವಿನಯಾಲಂಕಾರನೆನಿಸಿದ ಅಣ್ಣಿಗದೇವ. 'ಅತ್ತಿಮಬ್ಬೆಯ ಮಗನಾದ ಅಣ್ಣಿಗದೇವನಿಗೆ ಪಡೆವಳ ತೈಲ(ಪ)ನೆಂದೂ ಹೆಸರು' ಪಡೆವಳ=ಸೈನ್ಯವನ್ನು ನಡೆಸ ತಕ್ಕವನು, ವಳ—ತದ್ಧಿತ ಪ್ರತ್ಯಯ. ಶ.ದ-ಸೂ ೧೯೮. ಸೇನಾಪತಿಯು ಇಡೀ ಸೈನ್ಯದ ಮುಖ್ಯಸ್ಥನಾದರೆ, 'ಪಡೆವಳಿ'ರು ಆ ಸೈನ್ಯದ ಒಂದೊಂದು ಭಾಗಕ್ಕೆ ಮುಖ್ಯಸ್ಥರೆಂದು ಕಾಣುತ್ತದೆ.

ವ:—ನಿಜಕುಲತಿಲಕ=ತನ್ನವಂಶಕ್ಕೆಶ್ರೇಷ್ಠ, ನನ್ನಿನಾರಾಯಣಂ=ಸತ್ಯ ಪಾಲನೆಯಲ್ಲಿ ನಾರಾಯಣ(ರಾಮ). ಇಂತಹವನು ತನಗೆ ತನಯನಾದ ಅತಿಶಯ ಸಂತೋಷದಿಂದ ನಾಗದೇವನು ಅಭಿನವ........ಎನಿಸಿ, ಅಭಿನವ ಕಾಮದೇವ=ಹೊಸ (ಅಂದಿನ) ಮನ್ಮಥ, ಹಯವತ್ಸರಾಜ=ಪರಿಹರವಂಶ ದವನು, ಅವಂತೀರಾಜ, ಸುಭಟ ಚೂಡಾಮಣಿ= ವೀರಸೈನಿಕರಲ್ಲೆಲ್ಲ ಶ್ರೇಷ್ಠ, ನಾದವನು. ಆಹವ....ಭ್ರಮರ =ಯುದ್ಧಮಲ್ಲನೆನಿಸಿದ ಇಮ್ಮಡಿ ತೈಲಪನ ಪಾದಕಮಗಳಲ್ಲಿ ದುಂಬಿ ಎಂದರೆ ನೆಚ್ಚಿನ ಸ್ವಾಮಿಭಕ್ತ.

೧೩. ಕುಮರ–ರಾಷ್ಟ್ರಕೂಟ (ರ ದೊರೆ ಮೂರನೆ ಕೃಷ್ಣ) ಪತಿ_ಇಮ್ಮಡಿ ತೈಲಪ, ತಜಿಸಿಂದು=ನಿಶ್ಚಯಿಸಿ, ತಜಿಸಲ್—ಧಾ ಕಡಿತಲೆಗೊಂಡು—

ಖಡ್ಗ, ಚರ್ಮದ ಗುರಾಣಿಗಳನ್ನು ಹಿಡಿದು, ಅನ್ಯಮತಂಗಜಂಗಳಂ—ಶತ್ರು ಪಕ್ಷದವರ ಆನೆಗಳನ್ನು, ಪೊಣರ್ದಿಱಿದಂ—ಪೊಣರ್ದು ಇಱಿದಂ—ಯುದ್ಧ ಮಾಡಿ ಇರಿದು ಕೊಂದನು. ಇದರಿಂದ ವಿಕ್ರಮಸಿಂಹ—ಪರಾಕ್ರಮದಲ್ಲಿ ಸಿಂಹ ಸದೃಶನೆನಿಸಿದನು. ಮತಂಗಜ ಸಿಂಹ ಶಬ್ದಗಳ ಔಚಿತ್ಯವನ್ನು ಗಮನಿಸಬೇಕು.

೧೪. ಆಪ್ತ ಮಂತ್ರಿ ದಲ್ಲನ ಮಗನೂ ಆಗಿರುವ ನಾಗದೇವನ ಯುದ್ಧ ವಿಜಯವನ್ನು ಕಂಡ ತೈಲಪನು ಮೆಚ್ಚಿ ಈತನನ್ನು ತನ್ನ ಚಮೂಪತಿಯನ್ನಾಗಿ ಮಾಡಿದನು. ಚಮೂ—ಸೈನ್ಯ, ಚಮೂಪತಿ—ಸೈನ್ಯಾಧಿಕಾರಿ, ಈತನಂತೆ ಅದಟರುಂ ಪತಿಭಕ್ತರೂ ಆ ಕಾಲಕ್ಕೆ ಅವನಿಗೆ ಬೇರಾರೂ ಇರಲಿಲ್ಲವಂತೆ ! ಅದಟು—ಪರಾಕ್ರಮ. ಅಣೆಮುಟ್ಟಿ ಧುರಂಧರ—ಶತ್ರುಸೈನ್ಯ ಎದುರಾಗಿ ನಿಂತಾಗ ತನ್ನ ಪರಾಕ್ರಮವನ್ನು ತೋರಿಸುವ ವೀರ ; ಇದು ಒಂದು ಬಿರುದು. ನಾಗದೇವ ಇಂತಹ ಬಿರುದಿನ ವೀರನೆನ್ನುವುದಕ್ಕೆ ಸರಿಯಾಗಿ ಯುದ್ಧದಲ್ಲಿ ಸೆಣಸಿ ಬಂದವರನ್ನೆಲ್ಲಾ ಇರಿದು ಹಾಕಿದನು. ಅಂಗರಕ್ಕಸಂ—ಯುದ್ಧರಂಗದಲ್ಲಿ ರಾಕ್ಷಸನು. ಬಲಿಷ್ಠನು.

೧೫. ಬಲ್ಲಹ=ಒಡೆಯ (ವಲ್ಲಭ ಸಂ) ಬೆಸ=ಅಪ್ಪಣೆ, ತನೂಭವ =ಮಗ, ಕರಹಟ=ಒಂದು ಪ್ರದೇಶದ ಹೆಸರು, ಈಗಿನ ಕರ್ಹಡ್ ಎಂಬ ಊರಿನ ಪರಿಸರ ಪ್ರದೇಶ. ' ಈ ಕರಹಾಟವು ಕೊಲ್ಲಾಪುರ ಶಾಖೆಯ ಶಿಲಾಹಾರರ ಪ್ರಮುಖ ಆಡಳಿತ ಕೇಂದ್ರಗಳಲ್ಲಿ ಒಂದಾಗಿದ್ದ ಸತಾರಾ ಜಿಲ್ಲೆಗೆ ಸೇರಿದ ಇಂದಿನ ' ಕರಾಡ್ ' ಎಂಬ ಪ್ರದೇಶವೆಂದು ಗುರುತಿಸಲು ಆಗಿದೆ. ' ಬೆನ್ನಟ್ಟು=(ಬೆನ್ನಂ ಅಟ್ಟು) ಓಡಿಸಿಕೊಂಡು ಹೋಗು, ಬಲ್ಲಾಳ್ತನ=ಪರಾಕ್ರಮ. ನಿಜೇಶ (ನಿಜ+ ಈಶ)=ತನ್ನ ಒಡೆಯ—ತೈಲಪ. ಮಲ್ಲಮ=ಶತ್ರುಪಕ್ಷದ ಯಾರೋ ಒಬ್ಬ, ('Some one of the other side')

ವ : ಲಬ್ಧ=ಒದಗಿದ, ವಿಜಯಲಕ್ಷ್ಮಿ—ವಿಜಯವನ್ನು ಲಕ್ಷ್ಮಿ ಎಂದು ಸಂಭಾವಿಸುವುದು ಭಾರತೀಯ ಸಂಪ್ರದಾಯ, ಆಸಾದಿತ=ಹೊಂದಿದ, ಸೈನ್ಯಾಧಿ ಪತ್ಯ ಎಂಬ ಸಂಪತ್ತು—ಸಂಪತ್‌ಲಕ್ಷ್ಮಿ, ಕಾಂತ=ಪ್ರಿಯ, ಅತ್ಯಂತ....ದ್ವಯ= ತುಂಬ ಪ್ರಿಯರಾದ ಇಬ್ಬರು ಪತ್ನಿಯರು, ಉದ್ದಾಮ=ಶ್ರೇಷ್ಠನಾದ—ಅತಿ ಶಯನಾದ, ಅಂಗನಾ=ಹೆಂಗಸು. ಉತ್ಸುಕಚಿತ್ತ=ಕುತೂಹಲದಿಂದ ಕೂಡಿದ ಮನಸ್ಸು, ಹೀಗೆ ವಿಜಯಲಕ್ಷ್ಮಿ—ಸಂಪತ್‌ಲಕ್ಷ್ಮಿಯರೆಂಬ ಅತ್ಯಂತ ಕಾಂತ ಕಾಂತಾ

ದ್ವಯ ಯೌವನ ಲಕ್ಷ್ಮಿಯರು ಅತ್ಯಂತ ಆಕರ್ಷಕರಾದ ಅತ್ತಿಮಬ್ಬೆ, ಗುಂಡ ಮಬ್ಬೆ—ಇವರಿಂದ ಕೂಡಿದ್ದೂ (ತೃಪ್ತನಾಗದೆ?) ದೇವಾಂಗನೆಯರೊಡನೆ ಕೂಡಲು ತುಂಬ ಉತ್ಸಾಹದ ಮನಸ್ಸುಳವನಾಗಿ ನಾಗದೇವ ದೇವಲೋಕಕ್ಕೆ ಹೋದನಂತೆ! ಯಾವುದೋ ಯುದ್ಧದಲ್ಲಿ ಸತ್ತನೆನ್ನುವುದನ್ನು ಕವಿ ಹೇಳು ತ್ತಿರುವ ರೀತಿ ಇದು : ಇಂಥ ನಯ ರನ್ನನಿಗೆ ವಿರಳವಾದ—ವಿರುದ್ಧವಾದ ?— ಶಕ್ತಿ.

೧೬. ವಲಂ=ಅಲ್ಲವೇ ? ಕುಲವಧು 'ಕುಲವಧು, ಸಾಧ್ವಿ ಪತಿವ್ರತೆ ....ಚರಿತ್ರವತಿಯುಕ್ಕುಂ' (ವಸ್ತುಕೋಶ ೫೨-೪) 'ಧರ್ಮಕ್ಕರ್ಥಕ್ಕತಿಥಿಗೆ ಪೆರ್ಮೆ ಯಪಿತೃಗಳ್ಗೆ ದೇವಕಾರ್ಯಕ್ಕೆಂದುಂ ನಿರ್ಮಳ ಸಂತತಿಗಳ್ಗಮೊಕ್ಕಾರ್ಮೆಯ ಕುಲ ವನಿತೆ ಮುಖ್ಯವಾಕೆಯೆ ಪೂಜ್ಯಂ' (ಮದನ ತಿಲಕ ೮-೫)=ಒಳ್ಳೆಯ ಮನೆತನ ದಲ್ಲಿ ಹುಟ್ಟಿ ಬಂದ ಹೆಣ್ಣು, ಕುಲದ ವನಿತೆ, ಕುಲ=ತಂದೆಯ ವಂಶ (?) ಪರೋಕ್ಷದೊಳ=ಮರಣಾನಂತರದಲ್ಲಿ, ಜಿನದೀಕ್ಷಾಚರಣಂ=ಜೈನವ್ರತಗಳನ್ನು ಸ್ವೀಕರಿಸಿ ಆಚರಿಸುವುದು. ಶುಭ ಚರಿತದೆ ಮರಣಂ=ಶುಭವನ್ನೇ ತರುವ ಆಚಾರ—ವ್ರತಾಚಾರಗಳನ್ನು ಮಾಡುತ್ತಾ, ಶುಭ ಪರಿಣಾಮದಿಂದಲೇ ಮರಣ ವನ್ನು ಹೊಂದುವುದು ; ಪತಿವ್ರತಾ ಧರ್ಮವನ್ನನುಸರಿಸಿ ಸಹಗಮನ ಮಾಡು ವುದು. ಅಳಿಪು=ಆಸೆ ; ದೊರೆಯೆ=ಸರಿಯೆ ? ಕುಲವಧುವಾದವಳು ಪತಿಯ ಮರಣಾನಂತರ ಆಚರಿಸಲು ಯೋಗ್ಯವಾದ ಕ್ರಿಯೆಗಳು ಎರಡೇ ಅಲ್ಲವೇ ?— ಜಿನದೀಕ್ಷಾಚರಣ, ಶುಭಚರಿತದೆಮರಣ, ಅದು ಬಿಟ್ಟು ಜೀವನದ ಅತಿಯಾಸೆ ಯಿಂದ ಬದುಕು ಸಾಗಿಸುವುದು ಸರಿಯೆ ? ಎಂದಿಗೂ ಸರಿಯಲ್ಲ. ರನ್ನ ತನ್ನ ಕಾಲದ ಸಾಮಾಜಿಕ ಧರ್ಮವನ್ನು ಈ ಮೂಲಕ ಹೇಳಿರಬಹುದೆ ?

ವ :—ಪರಿಚ್ಛೇದಿಸಿ=ನಿರ್ಧರಿಸಿ, ಬದ್ಧಾಂಜಲಿಯಾಗಿ=ಕೈಮುಗಿದು ಕೊಂಡು.

೧೭. ಜಗತ್ತಿಲಕ=ಜಗತ್ತಿಗೆ ಶ್ರೇಷ್ಠನಾಗುವಂತಹವನು, ಇರ್ದಪಂ= ಇದ್ದಾನೆ. ಬೆಸಕೇಳ್=ಅಪ್ಪಣೆಗಾಗಿ ಬೇಡು. ಇನಿಯ=ಪ್ರಿಯನಾದವ— ಗಂಡ, ಉಚಿತಮಾಗೆ=ತನ್ನ ಸತೀ ಧರ್ಮಕ್ಕೆ ಯೋಗ್ಯವಾಗುವಂತೆ, ಚಿತಾಗ್ನಿ= ಶವವನ್ನು ಸುಡುತ್ತಿರುವ ಬೆಂಕಿ, ಅಣ್ಮು=ಪರಾಕ್ರಮವನ್ನು ತೋರಿಸು— ಹೋರಾಡು, ಪೆಂಪು=ಹಿರಿಮೆ. ಗುಂಡಮಬ್ಬೆ ಎಸಗಿದ ಈ ಮಹಾಕಾರ್ಯ

ಒಳ್ಳೆಯಜನದ ನಡವಳಿಕೆ ; ಇದು ಒಳ್ಳೆಯ ಜನರಾದವರೇ ಹೊಗಳಲು ಯೋಗ್ಯ ವಾಯಿತು. ಸಜ್ಜನ=ಕುಲಸ್ತ್ರೀ.

'ಮಹಾಭಾರತದ ಮಾದ್ರಿಯಂತೆ ಕಿರಿಯ ಹೆಂಡತಿ ಪ್ರಿಯನ ದೇಹದೊಡನೆ ಚಿತೆಯೇರಿದಳು ; ಅವಳ ಪಾತಿವ್ರತ್ಯವನ್ನು ಲೋಕ ಹೊಗಳಿತು. ಆ 'ಮಹಾ ಸತೀತ್ವ' ದ ಗೌರವವನ್ನು ತಂಗಿಗೆ ಬಿಟ್ಟುಕೊಟ್ಟು ಪುತ್ರಪಾಲನೆಗಾಗಿ ಕುಂತಿ ಯಂತೆ ಅತ್ತಿಮಬ್ಬೆ ನಿಂತಳು ; ಸಂನ್ಯಾಸವನ್ನು ಸ್ವೀಕರಿಸಿ ಶ್ರಾವಕಿಯಾಗಿದ್ದು ಕೊಂಡೇ ಜೈನವ್ರತನಿಷ್ಠೆಯ ಉಗ್ರದೀಕ್ಷೆಯನ್ನು ವಹಿಸಿದಳು.

ವ: ಗುಂಡೆಲ್ಲಂ ಪೊಗಟೆ=ಲೋಕವೆಲ್ಲ ಹೊಗಳಲು, ಸಮುಚಿತ= ಯೋಗ್ಯವಾದ, ಸಮುಚಿತಾಚಾರದೊಳಂ ಆಭರಣದೊಳ್ ನೆಗಟೆ=ಯೋಗ್ಯ ಆಚರಣೆಯೇ ಆಭರಣದಂತೆ ಆಲಂಕಾರವಾಗಿ ಪ್ರಸಿದ್ಧಿಪಡೆಯಲು. ನಾಗಮಬ್ಬೆ ಗುಂಡಮಬ್ಬೆಯರಿಬ್ಬರೂ ವೀರಮರಣವನ್ನಪ್ಪಿದ್ದರಿಂದ ಸ್ವರ್ಗಲೋಕಕ್ಕೆ ಹೋಗಿ, ಅಲ್ಲಿಯೂ ದಂಪತಿಗಳಾಗದರಂತೆ ! ಮಹಾಸತಿ> ಮಾಸತಿ> ಮಾಸ್ತಿ.

೧೮. ದಹನಾರ್ಚಿ=ಸುಡುತ್ತಿರುವ ಬೆಂಕಿ, ದಿವೋದಿತ (ದಿವ+ ಉದಿತ) ತನುವಾದಳ್=ಸ್ವರ್ಗದಲ್ಲಿ ಹುಟ್ಟಿದವಳಾದಳು, ಅತನು=ಕಾಮ, 'ಉರಿಯುತ್ತಿರುವ ಕಿಚ್ಚನ್ನು ಪ್ರವೇಶಿಸದಿದ್ದ ಮಾತ್ರಕ್ಕೆ ಅವಳ ವ್ರತವೇನೂ ಕಿರಿದಾಗಲಿಲ್ಲ ; ತಾನು ಹಿರಿಯಳಾದ ಕಾರಣ ಹಿರಿದಾದ ಜೀವಾವಧಿಯ ದಾರುಣ ವ್ರತವನ್ನು ಕೈಕೊಂಡು ಅತ್ತಿಮಬ್ಬೆ ತನ್ನ ದೇಹವನ್ನು ಶೋಷಿಸಿ ಕೃಶಗೊಳಿಸ ತೊಡಗಿದಳು. ಆಕೆಯಲ್ಲಿ ಕಾಮಪರಾಙ್ಮುಖತೆಯೂ ದೇಹದಂಡನೆಯೂ ಏಕ ಕಾಲದಲ್ಲಿ ಶೋಭಿಸಿದುವು. ಅತನು ವಿರೋಧಮುಂ ತನು ವಿರೋಧಮುಂ ಒಪ್ಪುಗುಂ ಅತ್ತಿಮಬ್ಬೆಯೊಳ್—ಈ ವಿರೋಧಾಭಾಸದ ಉಕ್ತಿ ರನ್ನ ಕವಿ ಯದು.'

೧೯. ಪತಿವಿಗಮದೊಳ್=ಗಂಡನಿಲ್ಲದಿರುವಾಗ, ಅಸಿಧಾರಾವ್ರತ= ಕತ್ತಿಯ ಅಲಗಿನ ಮೇಲೆ ಹೆಜ್ಜೆಯಿಟ್ಟು ನಡೆಯುವಂತೆ ಅಥವಾ ಕುಳ್ಳಿರುವಂತೆ ಆಚರಿಸಲು ಬಲು ಕಷ್ಟವಾದ ಒಂದು ವ್ರತ. ತಾಳ್ದಿ=ಸ್ವೀಕರಿಸಿ, ಧರ್ಮಮಂ.... ಕಾಯುತೆ=ಧರ್ಮವನ್ನು ಮಾಡುವ ಜನರ ಸಂತತಿಯನೆಲ್ಲಾ ಕಾಪಾಡುತ್ತಾ, ಕಾಯಸ್ಥಿತಿಯುಂ=ದೇಹ ಇರುವುದಕ್ಕೆ ಮಾಡಬೇಕಾದುದು—ಧರ್ಮವ್ರತಾದಿ ಗಳನ್ನು ಮಾಡುವ ಸಲುವಾಗಿಯೇ ಈ ದೇಹಬದುಕಬೇಕು ; ಅಷ್ಟಕ್ಕೆ ಮಾತ್ರವೇ

ಆಹಾರಾದಿಗಳಿಂದ ಇದನ್ನು ಉಳಿಸಬೇಕು. ಮಾಣ್ಬಳೇ=ಬಿಡುತ್ತಾಳೆಯೇ ? ಮಾಣಳ್=ಅಷ್ಟನ್ನೂ ಬಿಡುವುದಿಲ್ಲ. ಅತ್ತಿಮಬ್ಬೆಯು ಅಸಿಧಾರಾವ್ರತವನ್ನು ಕೈಗೊಂಡು, ಧರ್ಮವನ್ನು ಆಚರಿಸುವ ಜನರನ್ನು ಪೊರೆಯುತ್ತ ಧರ್ಮಾಚರಣೆಯನ್ನು ಮಾಡುವ ಜನರನ್ನು–ಮಗ (ಸಂತತಿ-ಸಂತಾನ) ನನ್ನು (?) ಕಾಪಾಡುತ್ತ ಶರೀರಧರ್ಮವನ್ನು ಬಿಟ್ಟಾಳೆ ? ಎಂದಿಗೂ ಬಿಡುವುದಿಲ್ಲ ಎಂದು ಭಾವವು.

'ಶರೀರಮಾದ್ಯಂ ಖಲುಧರ್ಮ ಸಾಧನಂ'— ಧರ್ಮವನ್ನು ಸಾಧಿಸಲು ದೇಹ ರಕ್ಷಣೆಯು ಅಗತ್ಯ. ಶರೀರವೇ ಇಲ್ಲದಿದ್ದರೆ ಧರ್ಮಸಾಧನೆ ಮಾಡುವುದಾದರೂ ಹೇಗೆ ? ಆದ್ದರಿಂದ ದೇಹವಳಿಯದಂತೆ ನೋಡಿಕೊಳ್ಳಲೇಬೇಕು

೨೦. ಅನವರತ=ನಿರಂತರ, ಯಶಸ್=ಸಂ, ಜಸ=ತ್ಭ, ನೊರ್ಮಡಿ. ತೈಲನ ಪಡೆವಳ=ನೊರ್ಮಡಿತೈಲನೆಂಬ ಬಿರುದಿನ ಸೇನಾಪತಿ, ಒಡಮೆ=ಐಶ್ವರ್ಯ, ಎಣೆ=ಸರಿಸಮಾನ, ಅತ್ತಿಮಬ್ಬೆ ತನ್ನ ಒಡಲನ್ನು ಉಪವಾಸಾದಿ ಆತ್ಮೋದ್ಧಾರದ ವ್ರತಗಳಿಂದಲೂ, ತನ್ನ ಐಶ್ವರ್ಯವನ್ನು ನಿತ್ಯನಿರಂತರ ದಾನದಿಂದಲೂ ಕ್ಷಯಿಸುತ್ತಾ ಯಶಸ್ಸನ್ನು ಸಂಪಾಸಿದಳು, ಈ ತಾಯಿಗೆ ಸರಿಸಮಾನರು ಬೇರೆ ಯಾರಾದರೂ ಇದ್ದಾರೆಯೇ ? 'ಅತ್ತಿಮಬ್ಬೆಯ ಮಗನಾದ ಅಣ್ಣಿಗದೇವನಿಗೆ ಪಡಿವಳ ತೈಲನೆಂದೂ ಹೆಸರು. ತಂದೆಯಂತೆ ಅವನೂ ಚಕ್ರವರ್ತಿಯ ಸೇನಾಪತಿಯಾಗಿದ್ದನು.'

೨೧ ದಿಗ್ವಳಯ (ದಿಕ್+ವಳಯ)=ದಿಕ್ಕುಗಳ ಪ್ರದೇಶ, ಶೀಲ=ಸದಾಚಾರ ಅಮಳಿನ=ಮಲಿನವಲ್ಲದ—ಶುದ್ಧವಾದ, ಜಿನಧರ್ಮ ಎಂದರೆ ದಯಾಧರ್ಮ ; 'ಜೀವದಯೆ ಜೈನಧರ್ಮಂ' ಇಂತಹ ದಯೆಗೆ ವಶಳಾದವಳು ಅತ್ತಿಮಬ್ಬೆ. ಹೀಗೆ ವಶಳಾಗಿ ದಾನ ಪೂಜೆ, ಸದಾಚಾರ, ಉಪವಾಸ ಎಂಬೀ ನಾಲ್ಕನ್ನೂ ತನ್ನ ಆಚರಣೆಯಿಂದ ಜಗತ್ ಪ್ರಖ್ಯಾತವಾಗುವಂತೆ ಪ್ರಕಟಿಪಡಿಸಿದಳು.

೨೨. ಶ್ರಾವಕ=ಜೈನ ಗೃಹಸ್ಥ, ದೊರೆಯೆನಲ್ ಪೇಜಿರಿಲ್ಲ=ಸಮ ಎನ್ನಲು ಬೇರೆ ಯಾರೂ ಇಲ್ಲ, ಸಂದ=ಸಲುವಳಿಯಾದ—ಯೋಗ್ಯಳಾದ ರೇವತೀಶ್ರಾವಕಿ=ಸಮ್ಯಗ್ದರ್ಶನದ ನಾಲ್ಕನೆಯ ಅಂಗವಾದ ಅಮೂಢ ದೃಷ್ಟಿ [ಮಿಥ್ಯಾತ್ವವನ್ನೂ ಮಿಥ್ಯಾಧರ್ಮಿಗಳನ್ನೂ ಮನ, ವಚನ, ಕಾಯಗಳಿಂದ ಸಮ್ಮತಿ, ಪ್ರಶಂಸೆ ಸಹಾಯಗಳನ್ನು ಮಾಡದಿರುವುದು] ಎಂಬುದರಲ್ಲಿ ಪ್ರಸಿದ್ಧಿ

ಯನ್ನು ಪಡೆದವಳು. ಜನಕಾತ್ಮಜೆ=ಜನಕ ಮಹಾ ರಾಜನ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದವಳು—ಸೀತಾದೇವಿ, ಸಜ್ಜನಿಕೆ=ಒಳ್ಳೆಯ ಜನರ ನಡ ವಳಿಕೆ, ನಿಜವಾಗಿ ಒಳ್ಳೆಯ ಪತ್ನಿ-ಅರ್ಧಾಂಗಿಯಾಗಿದ್ದುದು. ದೇವಕಿ=ವಸು ದೇವನ ಪತ್ನಿ ಕೃಷ್ಣನ ತಾಯಿ. ಸುಲೋಚನೆ—ನಾಥ ವಂಶಾಧಿಪತಿಯಾದ ಅಕಂಪನ ರಾಜನ ಮಗಳು ; ಸ್ವಯಂವರ ವಿಧಿಯಿಂದ ಜಯಕುಮಾರನನ್ನು ವರಿಸಿದವಳು ; ಸ್ವಯಂವರ ವಿಧಿ ಇವರಿಂದಲೇ ಮೊದಲಾಯಿತು. ಭವ್ಯ= ಮೋಕ್ಷಕ್ಕೆ ಅರ್ಹನಾದವನು.

೨೩. ಬುಧ=ವಿದ್ವಾಂಸ, ಧರ್ಮ ....ವಿಶುದ್ಧೆ=ಆತ್ಮೋದ್ಧಾರದ ಧರ್ಮವನ್ನೇ ಪ್ರಧಾನವಾಗಿ ಆಚರಿಸುತ್ತಾ ಅದರಲ್ಲಿ ಶುದ್ಧವಾದ ಅಚಲವಾದ ನಂಬಿಕೆಯುಳ್ಳವಳು, ದಾನಗುಣೈಕಾಂಬುಧಿ [ದಾನ, ಗುಣ+ಏಕ+ಅಂಬುಧಿ]= ದಾನ ಗುಣಕ್ಕೆ ಒಂದು ಸಮುದ್ರದಂತಿರುವವಳು, ಕವಿವರ ಕಾಮಧೇನು=ಕವಿ ಶ್ರೇಷ್ಠರಾದವರಿಗೆ ಬಯಸಿದುದನ್ನು ಕೊಡುವುದರಲ್ಲಿ ಕಾಮಧೇನು ಸಮಾನಳು, ಎಂಬುದು=ಎಂದು ಮುಂತಾಗಿ ಹೊಗಳುತ್ತದೆ. ಕವಿವರ ಕಾಮಧೇನು —ನೋ ೧೦ ವ. ರನ್ನನ ಕೃತಜ್ಞತೆ ಮೊದಲಾಗುತ್ತಿದೆ.

೨೪. ಚಕ್ರವರ್ತಿ ಪೂಜಿತೆ=ತನ್ನ ರಾಜ್ಯಕ್ಕಾಗಿ ಆತ್ಮಾರ್ಪಣೆ ಮಾಡಿ ಕೊಂಡ ನಾಗದೇವನ ಪತ್ನಿಯೆಂದೂ ದಾನ ಗುಣೈಕಾಂಬುಧಿ ಮೊದಲಾದ ಗುಣ ಸಂಗತಳೆಂದೂ ಚಕ್ರವರ್ತಿಯಿಂದಲೂ ಗೌರವಪಡೆಯುತಿದ್ದಿರಬೇಕು. 'ಈ ಚಕ್ರ ವರ್ತಿಯು ತೈಲಪನೇ ಆಗಿರಬೇಕು.' ಜಿನ ಶಾಸನರುಚಿ=ಜಿನರಿಂದ ಬೋಧಿ ಸಲ್ಪಟ್ಟ ಧರ್ಮದಲ್ಲಿ ತುಂಬ ಆಸಕ್ತಿಯುಳ್ಳವಳು. ಅತ್ತಿಮಬ್ಬೆಯ ಸುಖ್ಯಾತಿ ಆಚಾರಶೀಲತೆ ಮೊದಲಾದ ಗುಣೋತ್ಕೃಷ್ಟತೆಗಳನ್ನು ಕಂಡ ಭವ್ಯ ಜನರು ಇವಳನ್ನು 'ತೀರ್ಥಕರ ಜನನಿ' ಎಂದೇ ಗೌರವಿಸುತ್ತಿದ್ದಿರಬೇಕು.

೨೫. ಆಸನ್ನ ಭವ್ಯೆ=ತುಂಬ ಹತ್ತಿರದಲ್ಲೇ—ಅನತಿ ಕಾಲದಲ್ಲೇ ಮೋಕ್ಷಕ್ಕೆ ಹೋಗುವವಳು. ದೀಪಿಕೆ=ಬೆಳಗುವವಳು ಉದ್ಭಾಸಿ=ಶೋಭಿ ಸುವ—ಪ್ರಕಾಶಿಸುವ, ಇಂತಹ ಅತ್ತಿಮಬ್ಬೆ ರತ್ನಾಲಂಕೃತವಾದ ಚಿನ್ನದಿಂದ ಮಾಡಿದ ಒಂದೂವರೆ ಸಾವಿರ ಜಿನ ಪ್ರತಿಮೆಗಳನ್ನು ಪ್ರೀತಿಯಿಂದ ಮಾಡಿಸಿ ದಳು.

೨೬. ಸ್ಫುರಿತ ಉದ್ಯತ್ ಮಣಿ ಘಂಟೆಗಳ್=ಕಿಂಕಿಣಿ ನಾದವು ಎದ್ದು

ಕೇಳಿಸುವ ಕಿರುಗಂಟೆಗಳು, ಮಣಿ ವಿತಾನ ಶ್ರೇಣಿಗಳ್=ಮಣಿ—ರತ್ನ ಖಚಿತ ವಾದ ಮೇಲು ಕಟ್ಟುಗಳ ಸಮೂಹ. ಸ್ವರ್ಣಭಾಸುರ ದೀಪಂಗಳ ಮಾಲೆ= ಚಿನ್ನದಂತೆ ಅಂದವಾಗಿ ಹೊಳೆಯುತ್ತಿರುವ ದೀಪಮಾಲೆ.(ತೂಗುದೀಪ) ದಿವ್ಯ.... ....ಉತ್ಕರಂ=ದಿವ್ಯವಾದ ಬಟ್ಟೆಗಳಿಂದ ಮಾಡಿದ—ಸಿದ್ಧಪಡಿಸಿದ, ಹೊಳೆಯುವ ಬಾವುಟಗಳ ಸಮೂಹ, ಉದ್ಭಾಸಿತರತ್ನ ತೋರಣಗಣಂ=ಪ್ರಕಾಶಪಡಿಸಲ್ಪಟ್ಟ ರತ್ನಾಲಂಕೃತವಾದ ತೋರಣಗಳ ಸಮೂಹ. ಮಾಡಿರ್ದು....... ಆಯ್ತೊಱಿಸಿನೆ—ಹೀಗೆ ಒಂದೊಂದನ್ನು ಒಂದೂವರೆ ಸಾವಿರ ಸಂಖ್ಯೆಯಲ್ಲಿ ಮಾಡಿಸಿದಳು ಎನ್ನಲು. ಅತ್ತಿಮಬ್ಬೆ............ ದಾನಿಗಳ್=ಈ ಕಾಲದಲ್ಲಿ ಯಾವ ದಾನಿಗಳು ತಾನೇ ಅತ್ತಿಮಬ್ಬೆಗೆ ಸಮಾನರಾಗಬಲ್ಲರು ? ಅತ್ತಿಮಬ್ಬೆಗೆ ಸಮಾನರಾದ ದಾನಿಗಳು ಲೋಕದಲ್ಲೇ ಇಲ್ಲ ಎನ್ನುವುದು ಕವಿಯ ಅಭಿಪ್ರಾಯ. 'ಶುಂಭ್=Shine, ಶುಂಭತ್=Shining' 'ಶಾಸ್ತ್ರದ ಮೇರೆಗೆ ಒಂದು ಸಾವಿರ ಪ್ರತಿಮೆಗಳನ್ನು ಮಾಡಿಸಿದ್ದರೇ ಸಾಕಾಗಿತ್ತು. ಅದರೆ ಇನ್ನೂ ಐನೂರನ್ನು ಅಧಿಕವಾಗಿ ಮಾಡಿಸಿದ ಆಕೆಯ ಧರ್ಮಾನುರಾಗವನ್ನು ರನ್ನನು ಕೊಂಡಾಡುತ್ತಾನೆ'

೨೭. ಉನ್ನತ=ಲೋಕದಲ್ಲಿ ಶ್ರೇಷ್ಠನಾದ, ಲೋಕದ ಎಲ್ಲರಿಗೆ ಪೂಜ್ಯನಾಗಿ ಎತ್ತರವಾಗಿರುವ, ಕುಕ್ಕುಟೇಶ್ವರ=ಗೊಮ್ಮಟೇಶ್ವರ[........ ..... ] ಅನ್ನಮಂಬಿಸುಟು=ಅನ್ನವನ್ನು ಮುಟ್ಟೆನೆಂಬ ಕಠಿನವ್ರತವನ್ನು ಹಿಡಿದು ಪರ್ವತಮಂ ಪಱಿದೇಱಿ=ಗೊಮ್ಮಟೇಶ್ವರನ ಪ್ರತಿಷ್ಠಾಪನೆಯಾಗಿರುವ ಇಂದ್ರಗಿರಿಯನ್ನು ತುಂಬು ಉತ್ಸಾಹದಿಂದ ವೇಗವಾಗಿ ಎಲ್ಲರಿಗೆ ಮುಂದಾಗಿ ಹತ್ತಿಕೊಂಡುಹೋಗಲು, ಆಸನ್ನ=ಸಮೀಪ, ಪಥಶ್ರಮ=ಬೆಟ್ಟವನ್ನು ಏರಿ ಬಂದುದರ ಆಯಾಸ, ಆಱಲ್=ಕಳೆಯಲು. ಅಕಾಲವೃಷ್ಟಿಯಾಯ್ತು=ಅದು ಮಳೆಯ ಕಾಲವಲ್ಲದಿದ್ದರೂ ತುಂತುರು ಹನಿಯ ಮಳೆಗರೆಯಿತು. ಎನ್ನದೊ =ಎನ್ನುವುದಿಲ್ಲವೆ ? ಈ ಆಶ್ಚರ್ಯವನ್ನು ಕಂಡ ಲೋಕ ಹೊಗಳುವುದಿಲ್ಲವೆ ? ದೇವ....ವೃಷ್ಟಿಗಳ್=ದೇವಭಕ್ತಿಯ ವಿಷಯದಲ್ಲಿ ಇದೊಂದು ಆಶ್ಚರ್ಯವೆ ? ಪುಷ್ಪವೃಷ್ಟಿಗಳಾಗುವುದಿಲ್ಲವೆ ? 'ಅತ್ತಿಮಬ್ಬೆಯ ವ್ರತದ ಮಹಿಮೆಗೆ ಒಂದು ಒಳ್ಳೆಯ ನಿದರ್ಶನ ! ಅತ್ತಿಮಬ್ಬೆಯ ಪರಿವಾರದಲ್ಲಿ ರನ್ನನೂ ಆಗ ಇದ್ದು ಈ ಚೋದ್ಯವನ್ನು ಕಣ್ಣಾರೆ ಕಂಡೇ ಈ ಪದ್ಯವನ್ನು ಬರೆದನೇನೋ !'

೨೮. ಗುಣಿ . ....ಅಪ್ಪುದು=ಒಳ್ಳೆಯ ಗುಣವಂತರನ್ನೂ ಖ್ಯಾತಿವೆತ್ತ ಒಳ್ಳೆಯತನಕ್ಕೆ ಆಶ್ರಯಸ್ಥಾನರಾದವರನ್ನೂ [ಈ ಕಾಲದಲ್ಲಿ] ಕಾಣುವಂತಾಯಿತು. ಆದಱಿಂದೆ=ಆದುದರಿಂದ, ದಾನ ಚಿಂತಾಮಣಿಯಿಂ= ದಾನಚಿಂತಾಮಣಿ ಎಂದು ಅನ್ವರ್ಥನಾಮಳಾದ ಅತ್ತಿಮಬ್ಬೆಯ ಪ್ರಭಾವದಿಂದ. ಅವಸರ್ಪಿಣಿ.........ಎಂಬಂತಾಯ್ತು—ಈ ಕಾಲವು ಅವಸರ್ಪಿಣಿ ಎಂಬ ಇಳಿಗಾಲವಾಗದೆ 'ಉತ್ಸರ್ಪಿಣಿ' ಎಂಬ ಏರುಗಾಲವಾಗಿದೆ. ಅವಸರ್ಪಿಣಿ—ಧರ್ಮ, ಸತ್ಯ. ನ್ಯಾಯ, ಆಯುಸ್ಸು, ಸುಖ ಮುಂತಾದವು ಕ್ರಮ ಕ್ರಮವಾಗಿ ಕಡಿಮೆಯಾಗುತ್ತಾ ಬಂದು, ಕಡೆಗೆ ಅಧರ್ಮ, ಅನ್ಯಾಯಾದಿಗಳು ತಾನೇ ತಾನಾಗುವ ಕಾಲ ವಿಭಾಗ ; ಕಾಲ ಚಕ್ರದ ಇಳಿಗಾಲ. ಅತ್ತಿಮಬ್ಬೆಯೇ ಮೊದಲಾಗಿ ಅಂದಿನ ಜನರೆಲ್ಲರೂ ಕವಿಗೆ ಒಳ್ಳೆಯ ಗುಣವಂತರಾಗೇ ಕಾಣುತ್ತಾರೆ. ಇದರಿಂದ ಇದು ದುಷ್ಕಾಲವಲ್ಲ ; ಸತ್ಕಾಲ ಎಂಬುದು ಕವಿಯ ಸದ್ಭಾವನೆ,

೨೯. ಕಸವರಗಲಿ=ಸಂಪತ್ತನ್ನು ದಾನ ಮಾಡುವುದರಲ್ಲಿ ಧೀರೆ, ಕಸವರ=ಚಿನ್ನ, ಸಂಪತ್ತು. ಅಂಕಕಾರ್ತಿ=ವೀರರಮಣಿ—ಇದು ಬಿರುದಿನ ಭಾಗವಾಗಿ ಬರುವುದೂ ಉಂಟು, ಗುಣದಂಕಕಾರ್ತಿ=ಶೀಲ ಮತ್ತು ದಾನ ಗುಣಗಳಲ್ಲಿ ವೀರರಮಣಿ ಎನಿಸಿದ ಅತ್ತಿಮಬ್ಬೆ. ಪೊಣೆ ... ನೆಗೞ್ದಳ್=ಕಾಳಗದಲ್ಲಿ ಪರಾಕ್ರಮಿ ಎಂದು ಖ್ಯಾತಳಾದಳು. ತೈಲ ಜನನಿ—ಮೇಲೆವೊತ್ತವಳು, ಹೆಣ್ಣು, ಅಣ್ಣಂಗಳ್—ಮೀಸೆವೊತ್ತ ಗಂಡಸರು, ಇವರು ಇವಳ ಪಕ್ಕದಲ್ಲಿ ಶೋಭಿಸಬಲ್ಲರೆ ? 'ಅಣ್ಣಂಗಳ್' ಎಂಬುದು ತಿರಸ್ಕಾರ ಸೂಚಕವಾಗಿ—ವ್ಯಂಗವಾಗಿ ಬಳಸಲ್ಪಟ್ಟಿದೆ; 'ಗಳ್' ಬ. ವ. ಗಮನಾರ್ಹ. 'ಅತ್ತಿಮಬ್ಬೆಯ ದಾನಗುಣ ಪ್ರಸಿದ್ಧವಾಗಿದೆ : ಆದರೆ, ಆಕೆಯ ಯುದ್ಧ ಪರಾಕ್ರಮದ ಬಗೆಗೆ ಏನೂ ತಿಳಿಯದು.'

೩೦. ಅಸಿಲತೆ=ಬಳ್ಳಿಯಂತೆ ಬಳುಕುತ್ತಿರುವ ಕತ್ತಿ. ಎಸೆಪ=ಶೋಭಿಸುವ. ಕಲ್ಪಲತೆ=ದೇವಲೋಕದಲ್ಲಿ ಕಲ್ಪವೃಕ್ಷದಂತೆ, ಇಲ್ಲಿ ಈಕೆ, ಕಲ್ಪಲತೆ= ಬೇಡಿದುದನ್ನು ನೀಡುವ ಬಳ್ಳಿ, ಅಸಿಲತೆ, ಕಲ್ಪಲತೆ—ಇಲ್ಲಿನ 'ಲತೆ' ಎಂಬುದರ ಔಚಿತ್ಯ ಗಮನಾರ್ಹ. ಎಳೆ=ಭೂಮಿ—ಲೋಕ. ಸಂದ=ಪಾತ್ರಳಾದ, ಮಹಾಸತಿ—ಇದರ ಅರ್ಥಗಾಂಭೀರ್ಯವನ್ನು ಪರಿಭಾವಿಸಬೇಕು. ಜಿನಧರ್ಮಪತಾಕೆ=ಪತಾಕೆಯಂತೆ ಜಿನಧರ್ಮವನ್ನು ಲೋಕಕ್ಕೆ ಎತ್ತಿ ಹಿಡಿದವಳು, ಜಿನ

ನನ್ನು ಬಣ್ಣಿಸುವುದು ಪುಣ್ಯವಾದರೆ, ಜಿನಧರ್ಮ ಪತಾಕೆಯಾದ ಅತ್ತಿಮಬ್ಬೆಯನ್ನು ಬಣ್ಣಿಸುವುದು ಪುಣ್ಯವಾಗದೆ ? ರನ್ನನ ಗೌರವಭಕ್ತಿಗಳನ್ನು ಪರಿಭಾವಿಸಬೇಕು. 'ಸಾಧುಗೆ ಸಾಧು, ಮಾಧುರ್ಯಂಗೆ ಮಾಧುರ್ಯಂ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತಂ' ಎಂಬಂತೆ ಈಕೆಯೂ ಕರ್ಣಾಟಕ ಸಂಸ್ಕೃತಿಯ ಪ್ರತೀಕಳಾಗಿದ್ದಾಳೆ. ಉಲ್ಲೇಖಾಲಂಕರವಿದೆ.

೩೧. ಉತ್ತಮ ಗೋತ್ರೋದ್ಭವೆ, ಸದ್ವೃತ್ತೆ, ಮಹಾಸತಿ—ಈ ಒಂದೊಂದರ ವಿವರವೂ ಈ ತನಕ ಸ್ಪಷ್ಟವಾಗಿದೆ. ವಿನೇಯ ಚೂಡಾಮಣಿ= ಸೌಜನ್ಯದಿಂದ ಕೂಡಿದ ಶ್ರೇಷ್ಠಳಾದ ವ್ಯಕ್ತಿ. ತಾನೆತ್ತ ಉಳಿದರೆತ್ತ=ಇಂತಹ ಮಹಿಳಾಮಣಿ ಅತ್ತಿಮಬ್ಬೆ ಎಲ್ಲಿ ? ಉಳಿದ ಹೆಣ್ಣುಗಳೆಲ್ಲಿ ? ಇವರೆಲ್ಲ ಹೆಣ್ಣುಗಳೆಂಬಷ್ಟಕ್ಕೆ ಮಾತ್ರ ಹೋಲಿಕೆ. ಹಾಗೆಯೇ ಉಳಿದ ಹೆಣ್ಣುಗಳ ಗುಣವನ್ನು ಬೇರ್ಪಡಿಸಿ ನೋಡುವುದಾದರೆ ಅದು ಆತ್ತಿಯ ಹಣ್ಣಿನಂತೆ, ಅತ್ತಿ=ಒಂದು ಜಾತಿಯ ಕೆಂಪಾದ ಹಣ್ಣು, ಪಿಕ್ಕು=ವಿಮರ್ಶಿಸು.

೩೨. ಬಿಳಿಯುರಳೆ=ಬಿಳಿಯಹತ್ತಿ. 'ಅಜಿತ ಸೇನಮುನಿ' ರನ್ನನ ಪೂಜ್ಯಗುರು ; ಕೊಪಣಾಚಳ=ಕೊಪಣನಗರದ (ಈಗಿನ ಕೊಪ್ಪಳದ) ಪಕ್ಕದಲ್ಲಿ ಬೆಳಗುವ ಜೈನರ ಪುಣ್ಯಶೈಲ, 'ಜೈನರಿಗೆ ದಕ್ಷಿಣ ಕರ್ನಾಟಕದಲ್ಲಿ ಶ್ರವಣಬೆಳಗೊಳ ಇದ್ದಂತೆ, ಉತ್ತರ ಕರ್ನಾಟಕದಲ್ಲಿ ಕೊಪ್ಪಳ—ಇವು ಬಹು ಹಿಂದಿನಿಂದ ಜೈನ ಕೇಂದ್ರಗಳಾಗಿದ್ದಿರಬೇಕು. ಕುಪಣ, ಕೊಪಣ ಎಂಬ ರೂಪಗಳೂ ಶಾಸನಗಳಲ್ಲಿ ಕಂಡು ಬರುತ್ತವೆ. ಶ್ರವಣಬೆಳಗೊಳದ ಶಾಸನಗಳಲ್ಲಿ ಇದನ್ನು 'ಆದಿತೀರ್ಥ' ಎಂದೂ, 'ಮಹಾತೀರ್ಥ' ಎಂದೂ ಕರೆದಿದೆ. ದಂಡನಾಯಕ ಗಂಗರಾಜನು ಅನೇಕ ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ, ಹೊಸದಾಗಿ ಅನೇಕವನ್ನು ಕಟ್ಟಿಸಿದ್ದರಿಂದ 'ಗಂಗವಾಡಿ ತೊಂಬತ್ತರುಸಾಸಿರಂ ಕೊಪಣ ಮೊದಲುದು.' ಇಲ್ಲಿ ಅಸಂಖ್ಯಾತ ದೇವಸ್ಥಾನಗಳಿದ್ದು ಪೂಜ್ಯಸ್ಥಳವಾಗಿತ್ತು.' ಚರಿತ=ನಟವಳಿಕೆ, ಶೀಲ 'ಅತ್ತಿಮಬ್ಬೆಯ ಶುಭ್ರಶೀಲವನ್ನು ಉಪಮಿಸುವ ಈ ಪದ್ಯವಂತೂ ಧವಳೋಜ್ವಲ ಮೌಕ್ತಿಕ.'

೩೩. ಶ್ರೀ ದಾನಚಿಂತಾಮಣಿಯೆ 'ನಿನ್ನ ವ್ರತವನ್ನು ಕುರಿತು ಹೇಳುವುದಾದರೊ ನಿನ್ನದು ವ್ರತದಿಂದ ತಾರಿಹೋದ ಒಡಲು ; ನಿನ್ನ ಮಗನನ್ನು ಕುರಿತು ಹೇಳುವುದಾದರೆ ಚಕ್ರವರ್ತಿಯ ಆಜ್ಞಾಧಿಪ ; ನೀನು ಚಕ್ರವರ್ತಿಯ

ರಾಜಧಾನಿಯಲ್ಲೇ ಆರಾಧ್ಯಳಾಗಿದ್ದೀಯೆ; ನಿನ್ನ ಹಿರಿಮೆಯನ್ನು ಕುರಿತು ಹೇಳುವುದಾದರೆ ಕೆಟ್ಟಕಾಲದಲ್ಲಿ ಈ ಗ್ರಂಥವನ್ನು ಕೊಂಡಾಡಿದ್ದೀಯೆ; ಧರ್ಮದ ಉನ್ನತಿಯನ್ನು ಹೆಚ್ಚಿಸುವುದರಲ್ಲಿ ನಿನ್ನ ಪಾತ್ರ ಹಿರಿದು' ತಾಱು= ಕೃಶವಾಗು, ಕಟಕ=ಸೈನ್ಯ, ಆಯತಿ=ಹಿರಿಮೆ. "ದಾನ ಧರ್ಮದಲ್ಲಿ ಒಬ್ಬರಿಗಿಂತ ಒಬ್ಬರು ಹಿರಿಯರಾಗಿದ್ದ ಬೂತುಗ, ಮಮಳ, ನೊಟಿಂಬಾಂತಕ ಚಾವುಂಡರಾಯ, ಶಂಕರಗಂಡ ಮೊದಲಾದ ಪ್ರಭುಗಳು ಈ ವೇಳೆಗೆ ಸಂದು ಹೋಗಿದ್ದರು. ಆ ಭಾರವಷ್ಟನ್ನೂ ಅತ್ತಿಮಬ್ಬೆಯೊಬ್ಬಳೇ ಹೊತ್ತು ನಿತ್ತರಿಸುತ್ತಾ" ಇದ್ದುದರಿಂದ ಅದು ಅತ್ತಿಮಬ್ಬೆಗೆ ಬಹಳ ಕೆಟ್ಟ ಕಾಲ ಎಂದಿರಬಹುದೇ ?

೩೪. ಸಮ್ಯಕ್ತ್ವ=ಜೈನಧರ್ಮದಲ್ಲಿ ಅಚಲವಾದ ನಂಬಿಕೆ, ಕೆಲರು ದಾನಗುಣದಿಂದ, ಕೆಲರು ಸಮ್ಯಕ್ತ್ವದಿಂದ, ಕೆಲರು ಧರ್ಮಗುಣದ ಹಿರಿಮೆಯಿಂದ. ಮತ್ತೆ ಕೆಲರು ಶೀಲ, ವ್ರತಾಚಾರಗಳಿಂದ ಹೆಸರಾಗಿದ್ದಾರೆ. ನೀನಾದರೋ ಜಗತ್ತಿನಲ್ಲಿ ಈ ಎಲ್ಲ ಗುಣಗಳಿಂದಲೂ ಹೆಸರಾಗಿದ್ದೀಯೆ.

೩೫. ತಾಳ್ದು=ಹೊಂದು. 'ಜೀವದಯೆ ಜೈನಧರ್ಮಂ' ಎಂಬಂತೆ ಪ್ರಾಣಿದಯಾಪರತೆಯನ್ನೇ ಹೊಂದಿದ ಜೈನಧರ್ಮದಲ್ಲಿ ಅಭಿರುಚಿಯನ್ನು ಪಡೆದು, ಈ ಕಾಲದಲ್ಲಿಯೂ ಸಮ್ಯಕ್ತ್ವ ಶುದ್ಧಿಯನ್ನು ಅಪ್ಪಿಕೊಂಡು, ಲೋಕ ಅಚ್ಚರಿಪಡುವಂತೆ ಕೀರ್ತಿಯನ್ನು ಗಳಿಸುತ್ತಿರುವ, ಮೊದಲಿನಿಂದಲೂ— ಚಾರಿತ್ರ್ಯದ ಪ್ರಾರಂಭದಿಂದಲೂ—ಚಕ್ರವರ್ತಿಯನ್ನು ಅಭಿವೃದ್ಧಿಗೆ ತಂದ ಒಳ್ಳೆತನ ನಿನ್ನಲ್ಲಿ ಶೋಭಿಸುತ್ತಿದೆ.

೩೬. ಚೋದ್ಯಂ ಅಲ್ತು ಎನಿಸುವಂತೆ ಆರ್ತು ಈವುದುಂ= ತೃಪ್ತಿಯಾಗುವಂತೆ ದಾನ ಮಾಡುತ್ತಿರಲು, ಸಸ್ಪೃಹ=ಆಸೆಯುಳ್ಳವ, ಕೆಳೆಗೊಳ್ > ಗೆಳೆಗೊಳ್ > ಗೆಳೆಗೊಂಡು=ಸ್ನೇಹಮಾಡಿ—ಒಡಗೂಡಿ, ಇನ್ನು ಏ ಚೋದ್ಯಂ =ಇದರಲ್ಲಿ ಆಶ್ಚರ್ಯವೇನು ? ಎಯ್ದೆ=ಚೆನ್ನಾಗಿ, ಮಹನೀಯ (ನಾ)— ಮಹನೀಯತ್ವ (ಭಾನಾ)=ಗೌರವ ಪಾತ್ರತ್ವ ಶ್ರೇಷ್ಠತ್ವ, ಸಸ್ಪೃಹ × ನಿಸ್ಪೃಹ, ಸಸ್ಪೃಹರಾದವರೆಲ್ಲ ಬಣ್ಣಿಸುವುದು ಚೋದ್ಯವಲ್ಲ; ನಿಸ್ಪೃಹರಾದವರು ಬಣ್ಣಿಸುವುದು ನಿಜಕ್ಕೂ ಚೋದ್ಯ.

೩೭. ಪೊಗೆಟ್ತೆಯುಂ ಪೆತ್ತು—ಕ್ರಿ. ಸ. ಪೊಗೆಟ್ತೆ + ಪೆತ್ತು—ಆದೇಶ ಸಂ. ನಯುವಂತಳಾಗಿ, ಕೀರ್ತಿ ಪಡೆದು, ಜಗತ್ಪೂಜ್ಯಳಾದ ಅತ್ತಿಮಬ್ಬೆಯ ಶೀಲದ

ಉನ್ನತಿ, ದಾನ ವೈಭವ, ಧರ್ಮಾಚರಣೆ, ಜಿನಪೂಜೆ, ಭಕ್ತಿಕ್ರಮ, ಗುಣ—ಇವು ಗಳಲ್ಲಿ ಇವಳಿಗೆ ಸಮ ಎಂದು ಹೋಲುವವರು ಬೇರೆ ಯಾರಿದ್ದಾರೆ ?

೩೮. ಜಿನಪೂಜೆ, ಜಿನಕಥೆ, ಜೈನರ ಪುಣ್ಯಕ್ಷೇತ್ರ, ಜೈನಮುನಿಗಳ ಆಹಾರ ದಾನಾದಿ ಸೇವಾಕಾರ್ಯ, ಜಿನ ದೇವಾಲಯಗಳನ್ನು ಕಟ್ಟಿಸುವುದು, ಪ್ರತಿಷ್ಠಾಪನಾಕಾರ್ಯ ಮುಂತಾದ ಯಾವುದೇ ದಾನಕ್ಕೆ—ಅದೆಲ್ಲಿಯೇ ಆಗಿರಲಿ —ನಿನ್ನ ಸಂಪತ್ತು ಸೇರುವಂತೆ ಮಾಡುತ್ತಿದ್ದೀಯೆ. ಇಂತಹ ನೀನೇ ಹಿರಿಯಳು ; ಗೌರವಾನ್ವಿತಳು.

೩೯. ಗುಣಮಾಲಾ—ಗುಣಗಳ ಮಾಲೆ—ಸಮೂಹ, ಅಂಬಿಕೆ= ತಾಯಿ. ಬಾಲೆ=ಕೂಡಗೂಸು, ಆ ಮಹಾಸತಿಯ ನಾಮೋಚ್ಚಾರಣೆ ಮಾಡಿದರೇ ಸಾಕು, ಬಾಲೆಯರನ್ನು—ಹೆಣ್ಣುಮಕ್ಕಳನ್ನು ಯಾವುದೇ ಕೆಟ್ಟ ಕಳಂಕವೂ ಹತ್ತಿರ ಸೇರದು. ಕವಿ ಅತ್ತಿಮಬ್ಬೆಯ ನಾಮ ಮಹಿಮೆಯನ್ನು ಕೊಂಡಾಡು ತ್ತಿದ್ದಾನೆ. ಇಲ್ಲಿ ' ಬಾಲೆ ' ಎಂಬ ಮಾತಿನ ಔಚಿತ್ಯವನ್ನು ಗಮನಿಸಬೇಕು.

೪೦. ಅಳುರ್=ಹಬ್ಬು, ವ್ಯಾಪಿಸು, ನೋಂತ—ನೋನ್=ಧಾ, ಆ ' ಮಹಾಸತಿ ' ಇರುವೆಡೆಯಲ್ಲಿ ಕಿಚ್ಚು ಹಬ್ಬದು. ವಿಷಸರ್ಪ ಸುಳಿಯದು, ಆ ಪ್ರದೇಶ ಅಭಿವೃದ್ಧಿ ಹೊಂದುವುದು, ಬಯಸಿದಂತೆ ಮಳೆ ಬೆಳೆಗಳಾಗುವುವು ಎಂಬಿವೇ ಮುಂತಾದ ಯಶಸ್ಸಿಗೆ ಕಾರಣಳಾಗುವಂತೆ ನೋಂಪಿಗಳನ್ನು ಆಚರಿಸಿ ದಳೋ ಎಂಬಂತೆ ಭೂಮಂಡಲಕ್ಕೇ ಶ್ರೇಷ್ಠಳೂ ಗುಣವಂತಳೂ ಪವಿತ್ರಳೂ ಆದ ಆ ಸತಿಯನ್ನು, ಮಹಾಸತೀ ಶ್ರೇಷ್ಠಳನ್ನು, ಅತ್ತಿಮಬ್ಬರಸಿಯನ್ನು ಹೆಸರಿ- ಸುವುದೂ ಸಹ ನಮಗೆ ಪುಣ್ಯ ಸಂಪಾದನೆಗೆ ಕಾರಣವಾಗುತ್ತದೆ. ಅಂತಹ ಮಹಾಮಹಿಮಳಾದವಳು ಆ ಮಹಾತಾಯಿ ಅತ್ತಿಮಬ್ಬೆ !

'ರನ್ನನಿಗೆ ಅತ್ತಿಮಬ್ಬೆಯಲ್ಲಿರುವ ಈ ಅನನ್ಯ ಶ್ರದ್ಧಾಭಕ್ತಿಗಳು ' ಅಜಿತ ಪುರಾಣ ' ದ ಮೂಲಕಥೆಯ ಆದ್ಯಂತಗಳಲ್ಲಿ ಹಚ್ಚಿಟ್ಟಿರುವ ನಂದಾದೀಪಗಳಂತೆ ನಿತ್ಯಜೀವಂತವಾಗಿವೆ.'

## ಕವಿ ಪ್ರತಿಜ್ಞೆ

೧. ರೇಖೆ=ಅಂದ ; ಗೆರೆ—ಮಟ್ಟ, ನೆಱೆಗುಮೆ=ಸಮಾಪಕ್ಕೆ ಬರ ಬಲ್ಲುದೆ. ನೆಱೆಗುಮೆ—ನೆಱೆ+ಗುಂ+ಎ. ಅತೀತ=ಮೀರಿದ, ಯಾವ

ಪುರಾಣಗಳೂ ಅಂದ ಚಂದಗಳಲ್ಲಿ ಉಪಮಾತೀತವಾದ ಆದಿಪುರಾಣ, ಶಾಂತಿ ಪುರಾಣ, ಅಜಿತ ಪುರಾಣಗಳ ಸಮೀಪಕ್ಕೆ—ಮಟ್ಟಕ್ಕೆ ಬರಲು ಸಾಧ್ಯವೇ ? 'ಆದಿಪುರಾಣ' ದ ರಸೋತ್ಕರ್ಷ ಇಲ್ಲಿ ಕಾಣಬರದಿದ್ದರೂ ಶಾಂತಿಪುರಾಣದ ಪಾಂಡಿತ್ಯಪೂರ್ಣ ಪಾರಿಭಾಷಿಕತೆ ಸಾಕಷ್ಟು ಮೇಲುಗೈಯಾಗಿದೆ ಎನ್ನಬಹುದು.'

೨. ಭ್ರಾಂತಿ=ತ್ಸ—ಭ್ರಾಂತು=ಭ್ರ ಭ್ರಾಂತು+ಮನ್ (ಮಂ)= ಭ್ರಮೆ ಏಕೆ ? ಕೃತಿಯಂ=ಅಜಿತ ತೀರ್ಥಂಕರ ಪುರಾಣತಿಲಕ ಎಂಬ ಈ ಕೃತಿಯನ್ನು, ಆಟಿಸ್ತಿ=ಪ್ರೀತಿ, ಅಟಿಸ್ತಿ—ಇದನ್ನು 'ಅರ್ತಿ' ಬಂದು ಹೇಳಲಾಗದು ಎನ್ನುತ್ತಾನೆ ಕೇಶಿರಾಜ (ಶ. ಸ.-೨೮) ಕಲ್ಪ=ಉತ್ಸರ್ಪಿಣಿ ಮತ್ತು ಅವಸರ್ಪಣಿಗಳೆರಡೂ ಕೂಡಿದಷ್ಟು ಕಾಲಾವಧಿ. ಕಲ್ಪಾಂತಸ್ಥಾಯಿ=ಕಲ್ಪ—ಕಾಲದ ಕಡೆ (ವಿಶ್ವವಿನಾಶ ?) ಯ ತನಕ ಶಾಶ್ವತವಾದುದು. ಆಶ್ರಿತರ ಪಾಲಿಗೆ ಅತ್ತಿಮಬ್ಬೆ ಚಿಂತಾಮಣಿಯಂತೆ ! ಅಂಥವಳ ಪ್ರೀತಿಗೆ ಪಾತ್ರವಾಗುವಂತೆ ಹೇಳುತ್ತೇನೆ ಎನ್ನುವುದು ಕವಿಯ ಪ್ರತಿಜ್ಞೆ. ಪಂಪನ ಆದಿಪುರಾಣ, ಪೊನ್ನನ ಶಾಂತಿ ಪುರಾಣಗಳಿಗೆ ಸಮಾನವಾದುದು ತನ್ನ ಕೃತಿ ; ಅದು ಕಲ್ಪಾಂತಸ್ಥಾಯಿ ಎಂಬ ಕವಿಯ ಆತ್ಮ ಪ್ರತ್ಯಯವನ್ನು ಗಮನಿಸಬೇಕು.

೩. ಪೊನ್ನಿಗ=ಪೊನ್ನ, ಮಲ್ಲಪನುಂ ಪೊನ್ನನುಂ=ಅತ್ತಿಮಬ್ಬೆಯ ತಂದೆಯಾದ ಮಲ್ಲಪ, ಚಿಕ್ಕಪ್ಪನಾದ ಪೊನ್ನಮಯ್ಯರು. ಪುರಾಣ ಚೂಡಾಮಣಿ ಎಂದು ಕವಿ ಕೊಟ್ಟ ಹೆಸರಿನ ಶಾಂತಿ ತೀರ್ಥಕರ ಪುರಾಣ. ಗುಣೋನ್ನತ ಕವಿರತ್ನ=ಕವಿತಾ ಶಕ್ತಿಯ ಗುಣದಲ್ಲಿ ಉನ್ನತನಾದವ ತಾನೆಂಬುದು ಕವಿಯ ಕೆಚ್ಚು, ಅತ್ತಿಮಬ್ಬೆಯು ರನ್ನನಿಂದ ಅಜಿತ ಪುರಾಣವನ್ನು ಬರೆಸುವುದರ ಮೂಲಕ ತನ್ನ ಹಿರಿಯರು ನಡೆದ ದಾರಿಯಲ್ಲಿ ಮುನ್ನಡೆದಿರುವುದನ್ನು ಕಾಣಬಹುದು.

೪. ಆಗಮ ವರ್ಣನೆಗಳೆಷ್ಟಿವೆಯೋ ಅಷ್ಟನ್ನೂ ಒಳಗೊಂಡಿದೆ ಈ ಕೃತಿ. ಭವ್ಯಜನ=ಸಮ್ಯಕ್ತ್ವವುಳ್ಳವ : ಜೈನಧರ್ಮದಲ್ಲಿ ಅಚಲವಾದ ನಂಬಿಕೆಯುಳ್ಳವ, ಒಡರಿಸು=ಒದಗಿಸು, ಆಗಮ=ಶಾಸ್ತ್ರ ; ಭಗವಂತನಿಂದ ಹೇಳಲ್ಪಟ್ಟುದು. 'ಆಪ್ತನೆ ಪೇಟ್ದುದಾಗಮಮವ್' —ಪಂಪ. ಅನುರಾಗ=ಪ್ರೀತಿ. ಪುರಾಣ=ಪುರಾತನವಾದುದು ಪುರಾಣವೆನಿಸುವುದು—'ಪುರಾತನಂ ಪುರಾಣಂ ಸ್ಯಾತ್' (ಮಹಾಪುರಾಣ ೧–೨೧) ಪುರಾತನ ಕವಿಯನ್ನಾಶ್ರಯಿಸಿ ಉಂಟಾಗಿರುವುದರಿಂದ ಪುರಾಣತ್ವವುಂಟಾಗುವುದು—'ಕವಿಂ ಪುರಾಣ ಮಾಶ್ರಿತ್ಯ ಪ್ರಸೃತ

ತ್ವಾತ್ಪುರಾಣತಾ ' (ಮ. ಪ. ೧–೨೨). ಪುರಾಣತಿಲಕವಿದಲ್ತೆ=ಇದು ಪುರಾಣಗಳಲೆಲ್ಲ ಶ್ರೇಷ್ಠವಾದುದಲ್ಲವೆ ?

೫. ಕವಿ ರತ್ನ ತನ್ನ ಬಿರುದಿನ ಮಾಲೆಯನ್ನೇ ಇಲ್ಲಿ ಎತ್ತಿ ಹಿಡಿದಿದ್ದಾನೆ ; ' ಕವಿತಾ ಪ್ರಶಸ್ತಿಯನ್ನು ನಿಶ್ಶಂಕೆಯಿಂದ ಘೋಷಿಸಿರುವನು '.

೬. ' ಜಗತ್ತಿನಲ್ಲಿ ಶೋಭಿಸುತ್ತಿರುವುದು ಇದೊಂದೇ ರತ್ನ. ಹಲವು ರತ್ನಗಳಿಲ್ಲ ಎಂಬಂತೆ ಕವಿರತ್ನನು ' ಬಹುರತ್ನಾ ವಸುಂಧರಾ ' ಎಂಬ ವಾಕ್ಯವನ್ನು ತೊಡೆದು ಹಾಕಿದ್ದಾನೆ '— ಕವಿಯ ಹೆಗ್ಗಳಿಕೆ ; ಮಸುಳಿಸು=ಮಂಕಾಗುವಂತೆ ಮಾಡು.

೭. ದೊರೆಗಳಲ್ಲಿ ತನ್ನ ಭುಜ ಪರಾಕ್ರಮದಿಂದ ತೈಲಪನು ಕ್ರಿ.ಶ. ೯೭೩-೯೯೭ ಯುದ್ಧದಲ್ಲಿ ಹೇಗೆ ಅಸಹಾಯ ಶೂರನೋ, ಹಾಗೇಯೇ ಕವಿಗಳಲ್ಲಿ ಕವಿ ಚಕ್ರವರ್ತಿಯಾದ ರನ್ನನೂ ಕೃತಿರಚನೆಯಲ್ಲಿ ಅಸಾಹಾಯಶೂರ. ಕವಿ ಇಲ್ಲಿ ತನ್ನ ಪ್ರತಿಭಾ ಸಂಪತ್ತಿಯನ್ನೂ ತಾನು ತನ್ನ ದೊರೆಗೆ ಒಂದು ರೀತಿಯಿಂದ ಸಮಾನನೇ ಎಂಬುದನ್ನೂ ಹೆಮ್ಮೆಯಿಂದ ಹೇಳಿದ್ದಾನೆ.

೮. ಚಕ್ರವರ್ತಿ ತನ್ನ ಸಾಮ್ರಾಜ್ಯವನ್ನು ಪಡೆದಿರುವಂತೆ ಕವಿಚಕ್ರವರ್ತಿ ಕವಿತಾ ಸಾಮ್ರಾಜ್ಯವನ್ನು ಪಡೆದಿದ್ದಾನೆ.ಆದುದರಿಂದ ಕವಿಗೆ ಈ 'ಕವಿಚಕ್ರವರ್ತಿ' ಎಂಬ ಬಿರುದು ಅದೆಷ್ಟು ಮಟ್ಟಿಗೆ ಮೈಗೂಡಿಕೊಂಡಿದೆಯೋ-ಎಂದರೆ ಅನ್ವರ್ಥವಾಯಿತೋ ! ಚಕ್ರವರ್ತಿಗೆ ಕೋಶ, ಕಂಠಿಕೆ, ಶ್ವೇತಾತಪತ್ರ, ಮಾದೇವಿ, ಭೇರಿ, ಸಿಂಹಾಸನ, ಚಮರೀಜಗಳಿರುವಂತೆ ನನಗೆ ಮತಿ, ಪದವಿದ್ಯೆ, ಜಸ, ವಾಗ್ದೇವಿ (ಸರಸ್ವತಿ), ಪದೋಕ್ತಿ, ಅಲಂಕೃತಿಗಳಿವೆ. ಶ್ವೇತಾತಪತ್ರ=ಬಿಳಿಯ ಕೊಡೆ—ಬೆಳ್ಗೊಡೆ. ಮಾದೇವಿ=ಮಹಾರಾಣಿ, ಮಹಾದೇವಿ>ಮಾದೇವಿ (ಶ. ದ. ಸೂ ೨೯೫) ಪದೋಕ್ತಿ=ವ್ಯಾಕರಣ—ಶಬ್ದಶಾಸ್ತ್ರ. ಕಳಿತ=ಕೂಡಿದ, ಚಮರೀಜ=ಚಮರೀ ಮೃಗದ ಮೈಗೂದಲಿನಿಂದ ಮಾಡಿದ ಚಾಮರ. ಇಲ್ಲಿ ಕವಿಯನ್ನು ಚಕ್ರವರ್ತಿಯನ್ನಾಗಿ ರೂಪಣ ಮಾಡಿರುವುದರಿಂದ ರೂಪಕಾಲಂಕಾರವಿದೆ

೯. ಕವಿಮಾರ್ಗ (ಸಂಪ್ರದಾಯ) ದಲ್ಲಿ ಒಳಹೊಕ್ಕು ನವರಸಗಳನ್ನೂ ಚೆನ್ನಾಗಿ ಕಾಣುವಂತೆ ಮಾಡಿ ಹೇಳಿದ್ದಾನೆ ಎನಿಸಿದ ಕವಿ ಒಳ್ಳೆಯ ಕವಿ ; ಗುಡಾರವನ್ನು ಹಾಕಿದಂತೆ ಎಲ್ಲವನ್ನು ಮುಚ್ಚಿಟ್ಟು ನಡೆದ ಕವಿಯೂ ಒಬ್ಬ ಕವಿಯೇ ? ತನ್ನ ಕಾವ್ಯ ನವರಸ ಭರಿತವಾಗಿದೆಯಂತೆ ! ಸರಳವಾದ, ನೇರವಾದ

ಪ್ರಸ್ತಾವನೆ, ಶೈಲಿ.

೧೦. ಸರಸ್ವತಿ ಅಬಲೆ—ಹೆಣ್ಣು, ಶಬ್ದಾರ್ಥಗಳಿಗಾಗಿ ತಹತಹ ಪಡುತ್ತಾ ಅಬಲೆ ಸರಸ್ವತಿಯ ಕತ್ತನ್ನು ಮುರಿದು—ಹಿಸುಕಿ ಅವಳನ್ನು ನೋಯಿಸುವವನು ವಿದ್ವಾಂಸನೇ ? ಅವನು ಪಾತಕಿ, ಸರಸ್ವತೀ ದ್ರೋಹಿ, ಅವನನ್ನು ಯಾರೂ ಕವಿ—ವಿದ್ವಾಂಸ ಎಂದು ಗಣಿಸುವುದಿಲ್ಲ; ಮುರಿಗೊಂಡು=ಮುರಿದು ಹಾಕಿ, ಗೋಣ್=ಕತ್ತು, ಕುದಿ=ತವಕಿಸು, ಮುಟ್ಟು=ಹತ್ತಿರಕ್ಕೆ ಸೇರಿಸು—ಗಣಿಸು.

೧೧. ಕಾವ್ಯದಲ್ಲಿ ಹೊಸ ದೇಸಿಯ ಬೆಡಗು, ರಸಘಟ್ಟಿ, ಅರ್ಥವೃಷ್ಟಿ ಇವನ್ನು ಗಣಿಸುತ್ತಾರೆ ; ಭಾವಿಸುತ್ತಾರೆ. ಆದರೆ ಕೆಲ ಕವಿಗಳು ಕಸಪೊರಕೆಯಂತೆ ಒಂದಿಷ್ಟು ಕಸವನ್ನು ಹಿಡಿದಿಡುತ್ತಾರೆ. ಸಾರಣೆ=ಬಳಿಯುವುದು ಗುಡಿಸುವುದು —ಪೊರಕೆ, ದೇಸೆ=ದೇಸಿ—ಅಚ್ಚಗನ್ನಡ ಶೈಲಿ, 'ಕೆಲರ್ ಮಹಾಪುರುಷರ್ಕಳ್' ಎಂಬಲ್ಲಿನ ವ್ಯಂಗ್ಯ ಗಮನಾರ್ಹ. 'ಅರ್ವಿಗರ್ಗಂ ಕಳಾಗಮಮುಮಕ್ಕುಂ'—ಶ. ದ. ಸೂ ೧೦೦.

೧೨. ಮೊಗ್ಗಾಯ್ತು=ಸಾಧ್ಯವಾಯಿತೆ, ಅಂಬೋಧಿ=ಸಾಗರ ; ಬಗೆಯಂಪುಗದೆ=ಬಗೆವುಗದೆ, ಜೈನ ಪುರಾಣ ಕವಿಗಳಲ್ಲಿ ಕೆಲಕೆಲರು ತೀರದಲ್ಲಾಡಿದರೇ ಹೊರತು, ತನ್ನಂತೆ ಸಮುದ್ರವನ್ನು ಹೊಗಲಿಲ್ಲ—ಜೈನ ಆಗಮ ಪ್ರವೇಶ ಮಾಡಿದವರಿಲ್ಲ. ಕವಿ ತನ್ನ ಬಗೆಗೆ ಆಡಿರುವ ಮಾತು ಹುಸಿ ಹೆಮ್ಮೆಯಲ್ಲ. ಹೋಲಿಸಿ: ಚಾವುಂಡರಾಯ ಪುರಾಣ : ೧೧—೯—೨೮(?) " ಕೆಲರ್........ ತಡಿದಡಿಯೊಳ್ " ಎಂಬ ಉಕ್ತಿಯು ಪಂಪನನ್ನೇ ಕುರಿತಂತಿದೆ ' ಎಂಬುದು ಕುಹಕ ಆದೀತು.

೧೩. ಸುರಲೋಕಾವತರೋತ್ಸವ=ಜಿನನಾಗಲು ಹುಟ್ಟಲಿರುವ ಆತ್ಮ ದೇವಲೋಕದಿಂದ ತಾಯಿಯ ಗರ್ಭಕ್ಕೆ ಅವತರಿಸಿ ಬರುವ ಉತ್ಸವ; ಜನ್ಮಾಭಿಷೇಕೋತ್ಸವ=ಹುಟ್ಟಿದ ಮಗುವನ್ನು ದೇವೇಂದ್ರ ತನ್ನೆಲ್ಲ ಪರಿವಾರದೊಂದಿಗೆ ವೈಭವದಿಂದ ಮೇರು ಪರ್ವತ ಶಿಖರದ ಪಾಂಡುಕ ಶಿಲೆಯ ಮೇಲೆ ಕುಳ್ಳಿರಿಸಿ, ಸ್ನಾನ ಮಾಡಿಸುವುದು; ಪರಿನಿಷ್ಕ್ರಾಂತಿ ಮಹೋತ್ಸವ=ವೈರಾಗ್ಯದಿಂದ ತನ್ನ ಸಂಪತ್ತನ್ನೆಲ್ಲಾ ತೊರೆದು ತಪಸ್ಸಿಗೆ ಹೋಗುವುದು; ಕೈವಲ್ಯ ಬೋಧೋತ್ಸವ=ಕೇವಲಜ್ಞಾನವಾಗುವ ಉತ್ಸವ; ಪರಿನಿರ್ವಾಣ ಮಹೋತ್ಸವ=ಜಿನನ ಆತ್ಮ ಮೋಕ್ಷವನ್ನು ಹೊಂದುವ ಉತ್ಸವ—ಈ ಐದು ಕಲ್ಯಾಣಗಳೂ ವಿಸ್ತಾರವಾಗಿ

ವರ್ಣಿತವಾಗಿವೆಯಂತೆ ಅಲ್ಲಿ. ಅವತರ=ಇಳಿದು ಬರು-ಅವತಾರ ಮಾಡು. ಪರಿಕೃತ=ಸಂಭ್ರಮ-ಸಡಗರದಿಂದ ಮಾಡಿದ. ಪ್ರವಿಮಲ=ಪರಿಶುದ್ಧವಾದ, ಭವ್ಯಾಂಗ=ಭವ್ಯರಾದಜನ-ಜಿನಭಕ್ತರು. ಏನೊಪ್ಪದೆ-ಒಪ್ಪದೆ ಏನು=ಒಪ್ಪು ವುದಿಲ್ಲವೇನು? ಜಿನನ ಪಂಚಕಲ್ಯಾಣಗಳ ವಿಸ್ತರ ವರ್ಣನೆ ಇರುವುದರಿಂದ ತನ್ನ ಕಾವ್ಯವನ್ನು ಭವ್ಯ ಜನರು ಒಪ್ಪಿಯೇ ಒಪ್ಪುತ್ತಾರೆಂಬ ಭರವಸೆ ಕವಿಗಿದೆ.

೧೪. ಜಿತ ಮನೋಜಾತ=ಕಾಮವನ್ನು ಗೆದ್ದವ, ಗೆಡೆಗೊಂಡು=ಸಭೆ ಸೇರಿ, ಆತ್ಮಿಮಚ್ಚೆಯೆ ಗುಣ ಸಮೂಹಗಳನ್ನು ಕೇಳಿದ ಭವ್ಯರು ಹೊಗಳುವಂತೆ, ಕೀರ್ತಿ ಪ್ರಸಿದ್ಧವಾಗುವಂತೆ, ತಿಳಿದವರಿಗೆ ಅವಕಾಶ ಕೊಟ್ಟು-ತಿಳಿದವರು ಇದನ್ನು ಮೆಚ್ಚುವ ಅವಕಾಶವನ್ನು ಮಾಡಿಕೊಟ್ಟು ಮಹಾಕಾವ್ಯಗಳಲ್ಲಿ ಒಂದಾಗುವಂತೆ ಅಜಿತನಾಥನ ಪುಣ್ಯಪ್ರದವಾದ ಪುರಾಣವನ್ನು ತುಂಬು ಮೆಚ್ಚಿಕೆಯಿಂದ ವರ್ಣಿಸುತ್ತೇನೆ. ಮಹಾಕಾವ್ಯಗಳಲ್ಲಿ ಎಂಬಲ್ಲಿನ ಬ.ವ. ಗಮನಾರ್ಹ.

## ಪೂರ್ವಭವಾವಳಿ

ವ :—ಜಂಬೂದ್ರುಮೋಪಲಕ್ಷಿತ=ಜಂಬೂ ಮರದಿಂದ ಗುರುತಾಗಿರುವ, ಜಂಬೂದ್ವೀಪ—ಮಧ್ಯಮ ಲೋಕದ ನಟ್ಟ ನಡುವೆ ಒಂದು ಲಕ್ಷ ಯೋಜನ ವಿಸ್ತಾರವಾಗಿ, ಲವಣ ಸಮುದ್ರದಿಂದ ಸುತ್ತುವರಿಯಲ್ಪಟ್ಟು ಇರುವ ಭೂಭಾಗ. ನಿಖಿಳ........ಎನಿಸಿ=ಎಲ್ಲ ಕುಲ ಪರ್ವತಗಳಿಗೂ ಅತ್ಯಂತ ಎತ್ತರವಾಗಿ, ಶ್ರೇಷ್ಠವಾದುದಾಗಿ.

೧. ಎರಡುಂ ನಡುವೆ=ವಿದೇಹ ಕ್ಷೇತ್ರದ ಭರತ ಐರಾವತ ಕ್ಷೇತ್ರಗಳ ನಟ್ಟ ನಡುವೆ, ಸೌಂದರ=ಸುಂದರವಾದ, ಕಂದರೋದರಂ=ಕೊಳ ಕಣಿವೆಗಳನ್ನು ಒಳಗೊಂಡಿದ್ದು. ಕಂದರ+ಉದರಂ=ಗು. ಸಂ. ಕಿನ್ನರಾಮರ ಸ್ತ್ರೀ. ರಮ್ಯಂ=ಕಿನ್ನರರ ಮತ್ತು ದೇವತೆಯರ ಸ್ತ್ರೀಯರಿಂದ ರಮ್ಯವಾದುದೂ. ಇರ್ದುದು=ಇದ್ದಿತು, ಮಂದರಾಚಲಂ=ಮಂದರ ಪರ್ವತ.

೨. ನಾಭೇಯಜಿನ=ಆದಿನಾಥ-ಮೊದಲನೆಯ ತೀರ್ಥಂಕರ, ಹಿಂದೆ ಆದಿನಾಥನ ಜನ್ಮಾಭಿಷೇಕೋತ್ಸವ ಕಾಲದಲ್ಲಿ ಕ್ಷೀರ ಸಾಗರದ ಹಾಲು ಧಾರಾಕಾರವಾಗಿ ಸುರಿದು ಚೆಲ್ಲಾಡಿದುದರಿಂದ ಶೋಭಿಸುತ್ತಿರುವ, ತನ್ನ ಕೀರ್ತಿಧ್ವಜದ ಭಾವದಿಂದ ಅಂದು ಮಂದರ ಪರ್ವತವು ಒಪ್ಪುತ್ತಿದ್ದಿತು.

ವ :—ಕ್ಷೋಣೀತಳ=ಭೂಮಂಡಲ, ಭರತಕ್ಷೇತ್ರ=ಹಿಮವತ್ಪರ್ವತದ ದಕ್ಷಿಣದಲ್ಲಿ ಲವಣ ಸಮುದ್ರದವರೆಗೂ ಹಬ್ಬಿರುವ ಭೂಪ್ರದೇಶ.

೩. ಅಧಿಷ್ಠಾನ=ಆಧಾರ, ವಾಸಸ್ಥಾನ, ತನೂಭವ=ಮಗ, ಆತಪತ್ರ =ಕೊಡೆ, ಕ್ಷ್ಮಾ=ಭೂಮಿ, ಪ್ರಭಾ=ಕಾಂತಿ, ಸ್ಫುರಿತ=ಹೊಳೆಯುವ, ಸುಪ್ರಸಿದ್ಧ ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ಸಕಲರಾಜರಿಗೆ ಆಧಾರವಾಗಿ ಆದಿ ತೀರ್ಥಂಕರನ ಹುಟ್ಟೂರಾಗಿ, ಆತನ ಮಗನಾದ ಭರತ ಚಕ್ರವರ್ತಿಯ ಬೆಳ್ಗೊಡೆಯಿಂದ ಶೋಭಿತವಾದ ಆಸ್ಥಾನವಾಗಿ ಅಯೋಧ್ಯಾನಗರವು ಕೀರ್ತಿ ಗೌರವಗಳನ್ನು ಪಡೆದಿತ್ತು.

೪. ಖಾತ=ಕಂದಕ, ಅಟ್ಟಣ=ಕೊತ್ತಳ-(ಕೋಟೆಯ ಮೇಲೆ) ಕಾವಲಿನವರು ಮರೆಸಿಕೊಂಡು ಕುಳಿತುಕೊಳ್ಳುವ ಸಲುವಾಗಿ ಕಟ್ಟಿರುವ ಪುಟ್ಟ ಕೊಠಡಿ (?) ಇಟಿಪು=ಕೀಳುಮಾಡು, ಉದ್ಯೋತ=ಹೊಳಪು, ಅಯೋಧ್ಯಾಪುರದ ಕಂದಕ ಪಾತಾಳ ಲೋಕವನ್ನೂ, ಅಟ್ಟಳೆ ಅಮರಾವತಿಯನ್ನೂ ಮುಟ್ಟುವಂತಿದ್ದು ಆ ನಗರವು ಅತಿಶಯವಾದುದಾಗಿ ಭೋಗವತಿಯನ್ನೂ ಅಮರಾವತಿಯನ್ನೂ ಕೀಳು ಮಾಡುವಂತಿದೆ. ಭೋಗವತಿ=ಪಾತಾಳದಲ್ಲಿರುವ ಸರ್ಪಗಳ ರಾಜಧಾನಿ; ಅಮರಾವತಿ-ಸ್ವರ್ಗದಲ್ಲಿರುವ ದೇವತೆಗಳ ರಾಜಧಾನಿ, ಅತಿಶಯೋಕ್ತಿ ಅಲಂಕಾರ ವಿದೆ.

ವ :—ಉತ್ತಂಸ=ಆಭರಣ, ಮಂಡನ=ಅಲಂಕಾರ, ನಿರ್ಜಿತ=ಜಯಿಸಿದ ಅವಲೇಪ=ಬಳಿದ, ಆಟೋಪ=ದರ್ಪ. ಸ್ತಂಭೆ=ಹುಟ್ಟಿದವಳು; ಆಧಾರ ಭೂತೆ, ಯೋಷಿತ್=ಸ್ತ್ರೀ. ಆ ಪಟ್ಟಣವನ್ನು ಜಗತ್ತಿಗೇ ಭೂಷಣನೂ ಕ್ಷತ್ರ ಕುಲತಿಲಕರಲ್ಲಿ ಉದಾತ್ತನೂ ಇಕ್ಷ್ವಾಕು ವಂಶಕ್ಕೆ ಆಭರಣನೂ ಜಗತ್ತಿನಲ್ಲೇ ಪವಿತ್ರ ವಾದ ಕಾಶ್ಯಪ ಗೋತ್ರಕ್ಕೆ ಅಲಂಕಾರ ಪ್ರಾಯನೂ ಎನಿಸಿಕೊಂಡು, ತನ್ನ ಭುಜ ಬಲ ಪ್ರತಾಪದ ದರ್ಪದಿಂದ ಅನೇಕ ಶತ್ರುಗಳನ್ನು ಜಯಿಸಿ ಅನ್ವರ್ಥನಾಮ ನಾಗಿರುವ ಜಿತ ಶತ್ರು ಎಂಬ ದೊರೆ ಆಳುತ್ತಿದ್ದಾನೆ. ಆ ದೊರೆಯ ಮನದೊಡತಿ —ಮೆಚ್ಚಿನ ರಾಣಿ ವಿಜಯಸೇನಾದೇವಿ. ಅವನು ಮಹೀವಲ್ಲಭ, ಇವಳು ಅವನ ಮನೋವಲ್ಲಭೆ, ಆ ರಾಣಿ ಜಗತ್ ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದವಳು, ರಾಣಿ ವಾಸದಲ್ಲಿ ಮುಖ್ಯಳು; ಸಕಲ ಗುಣ ಸಂಪನ್ನೆ.

೫. ವಿಜಯಸೇನಾದೇವಿಯಲ್ಲಿ ಶ್ರೀ, ವೀರಶ್ರೀ, ಕೀರ್ತಿಶ್ರೀ, ವಾಕ್‌ಶ್ರೀ

ಯರೆಂಬ ನಾಲ್ವರು ಲಕ್ಷ್ಮಿಯರೂ ಪರಸ್ಪರ ಹೊಂದಿಕೊಂಡಿದ್ದು ಮಹಾದೇವಿ ಯೆಂಬ ಹೆಸರನ್ನು ಪಡೆದಳು ನೋ; ಪಂ. ಭಾ. ಆ೫ ಪ೧, ವಾಕ್+ಶ್ರೀ= ವಾಕ್ಛ್ರೀ–ಛತ್ವಸಂಧಿ.

ವ :—ಪೊಗಳ್ತೆಯಂ+ಪಡೆದು=ಪೊಗಟ್ತೆವಡೆದು-ಕ್ರಿ. ಸ. ಅನಂಗ= ಮನ್ಮಥ—ಈಶ್ವರನ ಹಣೆಗಣ್ಣಿನಿಂದ ಭಸ್ಮೀಭೂತನಾದವನು, ಪಾರ್ವತಿಯ ಕೃಪೆಯಿಂದ ಅನಂಗನಾಗಿ ಉಳಿದ. ಕೀರ್ತಿಶಾಲಿಯಾದ ಆ ಮಹಾದೇವಿಯಲ್ಲಿ ಆ ಮಹಾನುಭಾವ [ಅವಳು ಮಹಾದೇವಿ; ಇವನು ಮಹಾನುಭಾವ!] ಬಹುವಿಧ ವಾಗಿ ಮನ್ಮಥ ಸಾಮ್ರಾಜ್ಯ ಸುಖವನ್ನೆಲ್ಲಾ ಅನುಭವಿಸಿದನಂತೆ.

೬. ಸಮನಿಪ=ಒದಗಿಬರುವ, ಮಾನವನ ಚತುರ್ವಿದ ಪುರುಷಾರ್ಥ ಗಳು ಪರಸ್ಪರ (?) ಅವಿರುದ್ಧವಾದುವು. ಧರ್ಮಕ್ಕೆ ಅರ್ಥ, ಅರ್ಥಕ್ಕೆ ಕಾಮ, ಕಡೆಯದಾಗಿ ಮೋಕ್ಷ.

ವ :—ಚತುರ್ವಿಧ ರಾಜವೃತ್ತ—ಕುಲಪಾಲನ, ಮತಿಪಾಲನ, ಆತ್ಮ ಪಾಲನ ಸಮಂಜಸತ್ವ. ದುಷ್ಟಶಿಕ್ಷಣ ಶಿಷ್ಟ ರಕ್ಷಣವೇ ಕುಲಧರ್ಮ; ಇಹ–ಪರ ಸಂಬಂಧವಾದ ವಿಷಯಗಳ ಹಿತಾಹಿತ ಜ್ಞಾನವೇ, ಪ್ರಜೆಗಳ ರಕ್ಷಣೆಗೋಸ್ಕರ ತನ್ನ ಬುದ್ಧಿಯನ್ನು ಕಾಪಾಡಿಕೊಳ್ಳುವುದೇ ಮತಿ; ಭೃತ್ಯ, ದಾಯಾದಿ, ಶತ್ರು ಮುಂತಾದವರಿಂದ ಆತ್ಮರಕ್ಷಣೆಯೇ ಆತ್ಮಪಾಲನ; ಎಲ್ಲರನ್ನೂ ಸಮಾನ ದೃಷ್ಟಿ ಯಿಂದ ನೋಡುವುದೇ–ಸಮದರ್ಶಿತ್ವವೇ ಸಮಂಜಸತ್ವ [ಮ. ಪು]. ಸಮಂಜಸತ್ವ ದೊಡನೆ ಕುಲಪಾಲನ, ಮತಿಪಾಲನ, ಆತ್ಮಪಾಲನ ಪ್ರಜಾಪಾಲನಗಳು ರಾಜ ವೃತ್ತ–ಕರ್ತವ್ಯಗಳೆಂದೂ, ನ್ಯಾಯದಿಂದ ದ್ರವ್ಯವನ್ನು ಸಂಪಾದಿಸುವುದೂ, ಈ ದ್ರವ್ಯದ ವೃದ್ಧಿ ಮಾಡುವಿಕೆಯೂ ರಕ್ಷಣವೂ ಸತ್ಪಾತ್ರದಲ್ಲಿ ದಾನಮಾಡುವಿಕೆಯೂ ರಾಜವೃತ್ತಗಳೆಂದೂ ಪಾಠಗಳಿವೆ. 'ಸಮಂ ಸಮಂಜಸತ್ವೇನ ಕುಲಮತ್ಯಾತ್ಮ ಪಾಲನಂ/ಪ್ರಜಾನುಪಾಲನಂ ಚೇತಿ ಪ್ರೋಕ್ತಾವೃತ್ತಿರ್ಮಹೀಕ್ಷಿತಾಂ (ಮ. ಪು, ೩೮–೮೧೧) 'ರಾಜ ವೃತ್ತಮಿದಂ ವಿದ್ಧಿಯನ್ನ್ಯಾಯೇನ ಧನಾರ್ಜನಂ/ವರ್ಧನಂ ರಕ್ಷಣಂ ಚಾಸ್ಯ ತೀರ್ಥೇ ಚ ಪ್ರತಿಪಾದನಂ' (ಮ. ಪು.೩೮–೨೭೦) ವಿಜಿಗೀಷುವೃತ್ತಿ =ಶತ್ರುಗಳನ್ನು ಗೆಲ್ಲಬೇಕೆಂಬ ಉದ್ಯೋಗ, ಚತುರ್ವಿಧ ಪುರುಷಾರ್ಥಗಳೂ ವ್ಯರ್ಥವಾಗದಂತೆ ಅನುಭವಿಸುತ್ತ, ತನ್ನ ಕರ್ತವ್ಯವನ್ನು ಉದಾರನಾಗಿ ಆಚರಿಸು ತ್ತಿದ್ದನಂತೆ! ಅನುಭವಿಸಿದ್ದು ಧರ್ಮ, ಅರ್ಥ, ಕಾಮಗಳನ್ನಷ್ಟೇ ಅಲ್ಲವೇ ?

೭. ಆರು ಆಭ್ಯಂತರ ಶತ್ರುಗಳು—ಅರಿಷಡ್ವರ್ಗಗಳು=ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ. ಹೊರ ಮತ್ತು ಒಳ ಶತ್ರುಗಳೆಲ್ಲರನ್ನೂ ಬೆದರಿಸಿ ಗೆದ್ದುದರಿಂದ ಶತ್ರುಗಳನ್ನು ಸುಡುವವನು ಎನ್ನಿಸಿದ ಜಿತ ಶತ್ರುವಿಗೆ ಈ ಹೆಸರು ಅನ್ವರ್ಥವಾಯಿತು.

ವ:—ರಾಜ........ದರ್ಪಣಂ=ರಾಜವಿದ್ಯೆಯೆಂಬ ವಿಲಾಸಿನಿಯ ವಿಲಾಸಕ್ಕೆ ಮಣಿದರ್ಪಣದಂತಿರುವವನು; ರಾಜಲಕ್ಷ್ಮೀ ವಿಲಾಸಕ್ಕೆ ಇವನೇ ಕನ್ನಡಿಯಂತೆ! ವಿಮಲವಾಹನನ ವೈರಾಗ್ಯವನ್ನು ವಿಸ್ತರಿಸುವಲ್ಲಿ ರನ್ನನ ಪ್ರತಿಭೆ ಉಕ್ಕಿ ಹೊರ ಸೂಸಿದೆ; 'ವೈರಾಗ್ಯವನ್ನು ಸ್ವಾರಸ್ಯಗೊಳಿಸುವ ನಾಟ್ಯಗುಣವಿದೆ.'

೮. ಪುರೀಷ=ಕೊಳೆ, ಮಲ, ಸಪ್ತಧಾತು=ದೇಹದಲ್ಲಿರುವ ರಸ, ರಕ್ತಮಾಂಸ, ಮಜ್ಜೆ, ಮೇದಸ್ಸು, ಅಸ್ಥಿ ಮತ್ತು ಶುಕ್ಲ, ಚಾರು=ಮನೋಹರ, ದಾರು=ವೃಕ್ಷ, ಕಟ್ಟಿಗೆ=ಸೌದೆ, ದುರಂತ=ಕೆಟ್ಟ ಪರಿಣಾಮವುಳ್ಳದ್ದು, ವಿಚಾರಿಸಲು ಈ ಶರೀರವು ಮಲಮೂತ್ರಗಳವಾಸಸ್ಥಾನ ; ಸಪ್ತಧಾತು ವಿಕಾರಗಳಿಂದ ಕೂಡಿದ್ದು; ಸದ್ಗುಣಗಳಿಂದ ದೂರವಾದುದು; ಅತಿ ವಿಷದ ವೃಕ್ಷವಂತಿರುವುದು ; ದುರಂತವಾದ ದುಃಖಕ್ಕೆ ಮೂಲವಾದುದು.

೯. ಪೊಲ್ಲಮೆ=ಹೊಲಸು, ಈ ತನುವಿನ ಹೊಲಸನ್ನು ತಿಳಿದೂ ತಿಳಿಯದಂತೆ, ನೆನೆಯದೆ, ಕಾಣದೆ, ಕೇಳದೆ, ಇದನ್ನು ಬಿಡಲು ಮನಸ್ಸಿರುವುದಾದರೆ ಜೀವಕ್ಕೆ ಈ ತನುವೇ ಇರುವಾಗ ಬೇರೆಯದಾದ ವೈರಾಗ್ಯ ಕಾರಣವೆಂಬುದೊಂದುಂಟೇ?

೧೦. ಕೇಳಿಸಿ (ಕೇಲಿ(ಳಿ)=ಸು+ಇಸು) ಆಟವಾಡಿಸಿ. ನಿಂದ ಏಳುಂ=ನಿಂದೇಳುಂ, ದುರಂತ ದುಃಖ=ಕೆಡುಕಿನಲ್ಲೇ ಕೊನೆಗೊಳ್ಳುವ ದುಃಖ, ಪೇಳೆಂಬ=ಹೇಳು ಎನ್ನುವೆಯಾ? ಶರೀರದ ಸಪ್ತಧಾತುಗಳೇ ಏಳು ನರಕಗಳು; ಅವಕ್ಕೆ ಯಾವ ಯಾವ ವಿಧದಿಂದಲೂ ಕಡಿಮೆಯಿಲ್ಲ.

೧೧. ಅಪವರ್ಗ=ಮೋಕ್ಷ, ಪೊರ್ದು=ಸೇರು, ತನಗಲ್ಲದ (ತನ್ನದಲ್ಲದ?) ಒಡಲು ಐಶ್ವರ್ಯಗಳಿಗೆ ಮನವಿಟ್ಟು, ಮೋಕ್ಷ ಮಾರ್ಗವನ್ನೂ ಸೇರದೆ, ತನ್ನನ್ನೇ ತಾನು ನಂಬಿಸುವುದಾದರೆ, ಈ ಆತ್ಮನಂತಹ ಆತ್ಮವಂಚಕರು ಮತ್ತೆ ಯಾರಿದ್ದಾರೆ? ಹೇಳು.

೧೨. ಕೃಶೋದರ=ತೆಳುವಾದ ಹೊಟ್ಟೆ, ದಾರ=ಹೆಂಡತಿ, ದಾರಕ=

ಮಗ, ಉದಾರ=ದೊಡ್ಡದಾದ, ದಾರುಣ=ಉಗ್ರವಾದ, ಈ ಆತ್ಮನು ಜಗತ್ತಿನಲ್ಲೇ ಸಾರವತ್ತಾದ ಜೈನಧರ್ಮದ ಬಳಿಗೆ ಹೋಗದೆ, ನಿಸ್ಸಾರವಾದುದನ್ನೇ ಸಾರವತ್ತಾದುದೆಂದು ನಂಬಿ, ತನಗೆ ಯೋಗ್ಯವಲ್ಲದುದನ್ನು ಯೋಗ್ಯವೆಂದು ನಂಬಿ, ಹೊಲ ಗದ್ದೆ ವಿಹಾರಸ್ಥಳ ಒಡಹುಟ್ಟಿದವ ತೆಳ್ವಸಿರಿನ ಸುಂದರಳಾದ ಹೆಂಡತಿ ಮಗ ಎಂಬಿವೇ ಮೊದಲಾದ ದೊಡ್ಡ ವಿಮೋಹಗಳಲ್ಲಿ ಸಿಕ್ಕಿಕೊಂಡು–ಆಸಕ್ತನಾಗಿ ದಾರುಣವಾದ ದುಃಖಕ್ಕೆ ಈಡಾಗದೆ ಇರುತ್ತಾನೆಯೇ?

೧೩. ವೇಡ=ಬೇಡ, ಕೂಡದು ಎಂಬರ್ಥದ ಅವ್ಯಯ, ಅಮ್ಮು=ಪರಾಕ್ರಮವನ್ನು ತೋರು, ಆರ್ಮ=ಆಶ್ರಯಸ್ಥಾನ: ಶ್ರೇಯಸ್ಕರ. ಗಡ (ಅವ್ಯಯ) =ಮೆಚ್ಚಿಕೆಯ ಅರ್ಥದಲ್ಲಿ. ಮುನಿದು ಕೊಂಡೊಯ್ಯುವ ಯಮನಿಗೆ 'ಬೇಡ' ಎಂದು, ಇದು ಕೂಡದು ಎಂದು ಗದರಿಸಿ ತಮ್ಮ ಪರಾಕ್ರಮವನ್ನು ತೋರುವವರಿಲ್ಲ. ನಿನಗೆ ಆಶ್ರಯಕೊಡುವವರು. ಹಿತವರು ಯಾರು? ಜಿನಧರ್ಮವೊಂದೇ ನಿನಗೆ ಹಿತ; ಆಶ್ರಯಸ್ಥಾನ. ಮೂರು ಲೋಕಕ್ಕೂ ಸೂರ್ಯನಂತಿರುವ ಜಿನನನ್ನು ನೆನೆ.

೧೪. ಪಾಟು್=ಹಾಳು, ಪಾಟಿಂಪಡು=ಪಾಟಿಂಬಡು–ಹಾಳಾಗಿ ಹೋಗು, ಪಾಟಿಂಬಿಡುವೈ=ದತ್ತಿಬಿಡುತ್ತೀಯೆ (?) ಎಲೈ ಜೀವನೆ, ನೀನು ಬುದ್ಧಿಕೆಟ್ಟವನಾಗಿ, ಧರ್ಮ ಎಂಬ ಅಮೃತವನ್ನು ಸೇವಿಸದೆ (ಕುಡಿಯದ) ಅಧರ್ಮವನ್ನು ಸೇವಿಸಿ, ದುರ್ಗತಿಗೆ ಇಳಿದು, ಈ ಯಮನೆಂಬ ಹುಡುಕಿ ತಿನ್ನುವ ದೈವಕ್ಕೆ ಹೋಗಿ ಹಾಳಾಗುವಿಯಲ್ಲಾ !'See how the words flow good'

೧೫. ಪವಣ್=ಪ್ರಮಾಣ, ರನ್ನನ ಕವಿತಾ ಶಕ್ತಿ ಮಹತ್ತಿಗೇರತೊಡಗುತ್ತಿದೆ. ಎಲೈ ಜೀವನೆ, ಕಳೆದುಹೋದ ನಿನ್ನ ಎಷ್ಟೆಷ್ಟು ಭವಗಳನ್ನು ನೆನೆಸಿ ಕೊಳ್ಳಬಲ್ಲೆ? ಎಷ್ಟೆಷ್ಟು ಭವಗಳ ಬಂಧುಗಳನ್ನು ನೀನು ನೆನೆಸಿಕೊಳ್ಳಬಲ್ಲೆ? ನಿನ್ನ ಎಷ್ಟೆಷ್ಟು ದೇಹಗಳನ್ನು ನೆನೆಸಿ ಕೊಳ್ಳಬಲ್ಲೆ ? ನೀನೇ ಹೇಳು, ಇದಕ್ಕೇನಾದರೂ ಮಿತಿ ಉಂಟೇ ಎಂದು ಕವಿಯ ಆತ್ಮ ಸಂಭೋಧನೆ, ನೆನೆದಪೆ–ಆದಿಪ್ರಾಸ, ಯಮಕಾಲಂಕಾರವಿದೆ.

೧೬. ಕುಕ್ಕುಳಗುದಿ=ತಕತಕಕುದಿ, ತಳಮಳಿಸು, ಕಟ್ಟನೆ=ಇದ್ದಕ್ಕಿದ್ದಂತೆ ಚಕ್ಕನೆ, ಕವಿಲ್=ಸೊರಗು, ಕುಗ್ಗು, ಮಮ್ಮಲ=ಅತಿಯಾಗಿ ಕೊರಗು ತಿರಿ=ಸುತ್ತು, ಅಲೆ. ಎಲ್ಲೈ ಜೀವನೆ, ಸಂಸಾರದೊಳಗೆ ಎಷ್ಟು ತಾನೆ ತಕತಕ

ಕುದಿಯುತ್ತೀಯೆ? ಎಷ್ಟು ತಾನೆ ಮುಮ್ಮಲ ಮರುಗುತ್ತೀಯೆ? ಎಷ್ಟು ಸಂಸಾರ ಗಳಲ್ಲಿ ಒಂದೇ ಸಮನೆ ಅಲೆಯುತ್ತೀಯೆ? ಕಟ್ಕನೆ, ಮುಮ್ಮಲ, ತಿಜಿನೆ-ಅನುಕರಣಾ ವ್ಯಯಗಳು. ಸಂಸಾರದ ಬವಣೆಯನ್ನು ಒಡಮೂಡಿಸುವ ಶಬ್ದ ಚಿತ್ರವನ್ನು ಕಾಣ ಬಹುದಾಗಿದೆ. ಈ ಶಬ್ದಗಳ ಸೊಗಸನ್ನು ಸವಿಯಬೇಕು. ಅನುಪ್ರಾಸಾಲಂಕಾರವಿದೆ.

೧೭. ಎಲೈ ಜೀವನೆ, ಕಡೆಯನ್ನೇ ಕಾಣದ ಈ ಸಂಸಾರದ ಕಡೆಯನ್ನು ಕಾಣಲು ಬಯಸುವೆಯಾದರೆ, ನನ್ನ ಮಾತಿಗೆ ಒಪ್ಪು, ನಿನ್ನ ಕಾಲಿಗೆ ಬಿದ್ದು ಕೇಳಿ ಕೊಳ್ಳುತ್ತೇನೆ. ಧರ್ಮವನ್ನೇ ಬಲವಾಗಿ ಹಿಡಿ, ಮಗುಟಿ=ಮತ್ತೆ 'ಕವಿಯ ಪ್ರಜ್ಞಾಪಲಯವನ್ನು ಮೀರಿದ ಸೃಷ್ಟಿ ಇಲ್ಲಿದೆ; ಪಂಪನನ್ನೂ ಮೀರಿಸುತ್ತಾನೆ ಇಂತಹ ಕಡೆ', 'ವಿಮಲ ವಾಹನನ ವೈರಾಗ್ಯದೊಂದಿಗೇ ಕವಿಗೂ ಕಾವು ಬಂದು ಇಲ್ಲಿ ತುಟ್ಟ ತುದಿಗೇರಿದೆ; ಭಾವ–ಭಾಷೆಗಳ ವಿದ್ಯುದಾಲಿಂಗನ ಚಿರನೂತನ. ಇಲ್ಲಿಂದ ಮುಂದೆ ಕೆಳಗಿಳಿಯುತ್ತಾ ಧರ್ಮಗ್ರಂಥಗಳ ಸಾರಾಂಶವನ್ನು ಕನ್ನಡಿ ಸುತ್ತದೆ.'

೧೮. ಹೇಯ=ಬಿಡಲು ಯೋಗ್ಯವಾದುದು. ಹೇಯ × ಉಪಾದೇಯ ಇದು ಹೇಯ, ಇದು ಉಪಾದೇಯ ಎಂದು ತಿಳಿದುಕೊಳ್ಳದೆ ತನ್ನ ವಸ್ತುಗಳಲ್ಲೇ ಮೋಹಗೊಳ್ಳುವುದು ಪಾಪಕಾರಣವಾದ ಧರ್ಮವಲ್ಲದೆ ಬೇರೆಯಲ್ಲ(?) ಇದು ತ್ಯಾಜ್ಯ, ಇದು ಗ್ರಾಹ್ಯ ಎಂಬ ವಿವೇಚನೆ ಇಲ್ಲದೆ ತನ್ನ ವಸ್ತುಗಳಲ್ಲಿ ಮೋಹಗೊಳ್ಳುವುದೂ ಪಾಪ ಧರ್ಮವಲ್ಲದೆ ಮತ್ತೇನು ? ಯಾವುದು ಸಾವಶಾನ್ಯ ರಲ್ಲಿ ನೀತಿಯಾಗಿದೆಯೋ, ಅದು ಇಲ್ಲಿ ಧರ್ಮವಾಗಿದೆ. 'Capable of being endured to be chosen or selected.'

೧೯. ವಿಕಲ್ಪ=ಅನಿಶ್ಚಿತ, ಎನಸುಂ=ಒಂದಿಷ್ಟು, ಹುಟ್ಟು, ಸಾವು ದೇವ, ನಾರಕ, ಮನುಷ್ಯ ತಿರ್ಯಕ್–ಈ ಅನಿಶ್ಚಿತ ಗತಿಗಳಲ್ಲಿ ನಿನಗೆ ಒಂದಿಷ್ಟೂ ಸುಖವಿಲ್ಲ– ಮನದಲ್ಲಿ ನೇರವಾಗಿ ಭಾವಿಸುವೆಯಾದರೆ, ಈ ಸಂಸಾರವೇ ಅಸಾರ– ಶುಷ್ಕ–ವಾದದು. ನಿನಗೆ ಸುಖವಿಲ್ಲ 'It comes home to us.' ಭಾರತೀಯ ಹುಟ್ಟು ಗುಣಕ್ಕೆ–ಜೀವನ ದೃಷ್ಟಿಗೆ ಸತ್ಯವಾದುದು. 'ಸೃ' ಗತೌ(ಧಾ)–ಸಂಸಾರ.

೨೦. ನನ್ನ ಕೆನ್ನೆಯ ನೆರೆಗಳು ಯಮುನ ಆಳುಗಳಂತೆ ಅಟ್ಟಿಸಿಕೊಂಡು ಕೊಲ್ಲುವುದನ್ನೂ, ಅಶಾಶ್ವತ ಸ್ಥಿತಿಯನ್ನೂ ಸೂಚಿಸಿ, ಮೈನೀರಿಳಿ (ಮೂತ್ರ ವಿಸ ರ್ಜನೆ?) ಯುವ ಹಾಗೆ ಒಂದೇ ಸಮನೆ ಅತಿ ತ್ವರಿತ ಗತಿಯಲ್ಲಿ ಹೆದರಿಸಿದವು.

ಯಮಕಾಲಂಕಾರ– ಶಬ್ದಾಲಂಕಾರವೂ ಅರ್ಥ ಪುಷ್ಟಿಗೆ ಪೋಷಕವಾಗಿರುವುದಂ ಇಲ್ಲಿನ ವಿಶೇಷ (?)

೨೧. ಅಕ್ಕೆ—ಆಗಲಿ, ಪಡೆವಂ + ಅಕ್ಕೆ = ಪಡೆಯುವಂತಹವನಾಗಲಿ ನಾರಕ, ತಿರ್ಯಕ್ ಮನುಷ್ಯ, ದೇವ – ಈ ಗತಿಗಳಿಗೆ ಹೇಸಿಕೆ ಪಟ್ಟುಕೊಂಡೆ. ಸಮ್ಯಗ್ದರ್ಶನ, ಸಮ್ಯಜ್ಞಾನಗಳಿಂದ ಶೋಭಿಸುವ ಶ್ರೇಷ್ಠ ಸ್ಥಾನವನ್ನು–ಪಂಚಮ ಗತಿಯನ್ನು ಎಂದರೆ ಮೋಕ್ಷಗತಿಯನ್ನು ನಾನು ಪಡೆಯುವಂತಾಗಲಿ. 'ಚಾರಿತ್ರವೂ ಮುಕ್ತಿಮಾರ್ಗದ [ಪ್ರಮುಖ] ಹಂತ.' ಅದು ಇಲ್ಲಿಲ್ಲದಿರುವುದು ಏಕೆ? ಜೈನ ಧರ್ಮವನ್ನು ಕನ್ನಡಿಸುವ ಕೆಲಸ ಮೊದಲಾಗುತ್ತಿದೆ. ಅದರಲ್ಲಿಯೂ ಒಂದು ಚಮತ್ಕೃತಿಯಿರುವುದು ಮೆಚ್ಚುವಂತಹುದೇ.

೨೨. ಶಿಷ್ಟ ಜನ = ಈ ಸಂಸಾರ ಸಾಗರವನ್ನು ದಾಟಿದವರು (?) ಉಚ್ಛಿಷ್ಟಂ = ಎಂಜಲು. ಈ ಸಂಸಾರವು ಶಿಷ್ಟಜನರ ಉಚ್ಛಿಷ್ಟ. ಬಹು ಕಷ್ಟ; ಎಂಟು ಬಗೆಯ ಕರ್ಮಗಳಿಂದ ಪರಿಪುಷ್ಟವಾದುದು. ಹಾ! ಹಾ! ಧಿಕ್ಕಾರ! ಚಿಃ, ಕಷ್ಟ! ಅವಶ್ಯವಾಗಿಯೂ ಇದು ನಿಕೃಷ್ಟವಾದುದು.

'ಶಿಷ್ಟಜನಾಶಿಷ್ಟಂ' (?) ಶಿಷ್ಟ ಜನ + ಆಶಿಷ್ಟಂ. ಶಿಷ್ಟರೂ ಒಂದು ಶಿಕ್ಷೆಗೆ ತರಲಾರರು (?)

೨೩. ಪುದುವಾಳ್ = ಪರಸ್ಪರ ಹೊಂದಿಬಾಳು; ಒಕ್ಕಲುತನ ಮಾಡು ಸಪತ್ನಿ = ಸವತಿ, ಮುಪ್ಪು ಎಂಬ ಅಂಗನೆ ಹೆಂಗಸಿಗೆ ಸವತಿಯಿದ್ದಂತೆ; ನಿಯತಿ ಎಂಬ ಅಂಗನೆ ಆ ಜರಾಂಗನೆಯ ಸವತಿ; ಆ ಸವತಿಯನ್ನೂ ಹಿಂಗಿಸಿ, ನಾನು ಮುಕ್ತಿ ಎಂಬ ಅಂಗನೆಯ ಜೊತೆ ಅನ್ಯೋನ್ಯವಾಗಿ ಬಾಳುವಂತಾಗಲಿ. 'ನಿಯತಿ = ವಿಧಿ–ದೈವ–ಅದೃಷ್ಟ. ಹಲವರು ಧರ್ಮ ಎಂದೂ ಅರ್ಥೈಸುತ್ತಾರೆ.'

೨೪. ಮೆಲ್ಪಟ್ಟು = ಭ್ರಾಂತಿಪಟ್ಟು, ಮೆಲ್ಲುತ್ತಾ ರುಚಿಯನ್ನು ಅರಸುವ ದಡ್ಡರು ಇರುವುದಾದರೆ ಇದ್ದು ಕೊಳ್ಳಲಿ. ಯಮನು ಮೇಲೆ ಬಿದ್ದು ಕೊಲ್ಲಲು ಬಂದಾಗ ಕಾಪಾಡುವವರಿದ್ದಾರೆಯೇ? ಧರ್ಮವೇ ತಲೆಗಾಯು ವಂತಹುದು, ಇಹ ಪರಗಳೆಂಬ ಎರಡು ಭವಗಳಿಗೂ ಈ ಧರ್ಮವೆ ಹಾದಿ.

೨೫. ಅಕ್ಷಯ = ಮೋಕ್ಷ, ಅವಚಟು = ಬೇಸರಪಡು. ದಿವಸ ದಿವಸಕ್ಕೂ ಬಲ ಆಯುಸ್ಸು ಶರೀರ ಇವು ಕುಂದುತ್ತಿವೆಯಲ್ಲದೆ ಹೆಚ್ಚುವಂತಹುವಲ್ಲ ಪಂಚೇಂದ್ರಿಯ ವಿಷಯಗಳ ಸುಖಕ್ಕೆ ಬೇಸರಪಟ್ಟಿದ್ದೇನೆ. ಮೋಕ್ಷ ಸುಖವನ್ನು

ಪಡೆದುಕೊಳ್ಳುತ್ತೇನೆ.

೨೬. ಆಗಂತುಕ=ಅನಿರೀಕ್ಷಿತವಾಗಿ ಬಂದವನು. ಪಿಂಗು > ಹಿಂಗು= ಹಿಂಪಕ್ಕೆ ಸರಿ. ಮನ್ಮಥನ ಸುಖದ ಸಾಮ್ರಾಜ್ಯಗಳು ದೇಹ ಮನಸ್ಸುಗಳಿಗೆ ಹೊಸ ಹೊಸ ದುಃಖಗಳನ್ನೇ ಉಂಟುಮಾಡುತ್ತವೆ. ಅವುಗಳಿಂದ ಬಿಡುಗಡೆ ಹೊಂದುತ್ತೇನೆ. ಇನ್ನು ಮುಂದೆ ನನಗೆ ಜಿನನ ಚರಣವೇ ಶರಣು.

೨೭. ಸಯ್ಪು=ಸೈತು=ಕ್ರಮ, ನೇರ್ಪು, ಸಮಾಧಾನ. ಮನುಷ್ಯರಲ್ಲಿ ಕೆಲವರು ವೈರಾಗ್ಯ ಬಂದರೆ ಇಹದ ವ್ಯಾಪಾರಗಳನ್ನೆಲ್ಲಾ ಬಿಡುತ್ತೇವೆ ಎನ್ನುತ್ತಾರೆ. ಅಲ್ಲಿನ ತನಕ ಯಮನು ಸುಮ್ಮನಿರಗೊಡಿಸದೆ ಕತ್ತು ಮುರಿದು ಎಳೆದುಕೊಂಡು ಹೋದರೆ ಅಷ್ಟು ಒರುವಂತಹವರೂ ಇದ್ದಾರೆಯೇ? 'ತೊಡಿಸೆ–ಸಂನ್ಯಾಸ ಎಂಬುದಕ್ಕೆ ಜೈನರ ಶಬ್ದ'

೨೯. ಉನ್ನುನ್ನ (ಉನ್ನಂ+ಉನ್ನ) ಹೆಚ್ಚಾಗಿ, ತಜಿಸಲ್+ಎ= ನಿಶ್ಚಯಿಸಲೆ (?) ಕೆನ್ನೆಯಲ್ಲಿ, ಹೆಚ್ಚಾಗಿ ಮೇಲೆದ್ದ ನೆರೆಯನ್ನೂ ತೆರೆ ಸುಕ್ಕುಗಟ್ಟಿದ ಮುಪ್ಪನ್ನೂ ಕನ್ನಡಿಯನ್ನು ನೋಡಿ ನಿಶ್ಚಯಿಸಲೆ? ಎಲೈ ವೃದ್ಧನೇ ನಿನ್ನ ಮುಖವನ್ನು ನೋಡು; ಅದು ಕನ್ನಡಿ ಹಿಡಿಯುತ್ತದೆ. 'ಕನ್ನಡಿಯ ನೊಡ್ಡದಿರೆಯುಂ' ಕನ್ನಡಿಕುಂ ಎಂಬ ಪಾಠ ಗಮನಾರ್ಹ, ಸುಷ್ಮು ಎನಿಸುತ್ತದೆ.

೩೦. ಕಯ್ಗಳಿ [ಕೆಯ್+ಕಟಿ=ಕೆಯ್ಗಟಿ?] =ಕೈಮೀರು ರಸೆ= ಭೂಮಿ, ನಮ್ಮ ಆನೆ, ನಮ್ಮ ಕುದುರೆ, ನಮ್ಮ ಅರಸಿಯರು, ಇವರು ನಮ್ಮ ಮಕ್ಕಳು ಎಂಬ ಈ ಮತ್ತು ಮನದಲ್ಲಿ ಕೈ ಮೀರಲು ಅನೇಕ–ಅದೆಷ್ಟೋ ಮಂದಿ ಗುಳುಮ್ಮನೆ ಭೂಮಿಗೆ ಇಳಿದರು. 'ಗುಳುಮ್ಮನೆ' ಅನುಕರಣಾವ್ಯಯದ ಶಬ್ದ ಶಕ್ತಿ ಗಮನಾರ್ಹ. ಮತ್ತಂ–ಮತ್ತ್ವಂ (?)

೩೧. ಈ ಭೋಗ ಎಂಬುದು ವಿದ್ವಾಂಸರಿಗೆ ಹಾಸ್ಯಮಾಡುವಂತಹುದು; ವಿಷಯ ಸುಖಾಪೇಕ್ಷಿಗಳಿಗೆ ಸುಖದ ತೋರಿಕೆಯುಂತಹುದು; ಪ್ರಸಿದ್ಧನಾದ ಕವಿಗೆ (?) ಆಯಾಸಕರ! ಪ್ರಾಣಿವರ್ಗಕ್ಕೆ ತುಂಬ ಭಯಂಕರವಾದುದು. ಈ ಭೋಗವೆಂಬುದು ಹಾವಿನೊಂದಿಗೆ ಸರಸವಾಡಿದಂತೆ. ಕಾಯೇಂಕವಿಗೆ=ಕಾಯ–ಪ್ರಖ್ಯಾತನಾದ ಕವಿಗೆ (?)

ವ : ಹೀಗೆಂಬುದನ್ನು ತಿಳಿದು ಈ ನಶ್ವರ ಶರೀರದ ಅನಿತ್ಯತೆಯನ್ನೂ ಅತಿ ಜಡತನದ ಆತ್ಮ ಸ್ವಾಭಾವವನ್ನೂ, ಅನಿತ್ಯವೂ ಅಸಾರವೂ ಆದ ಸಂಸಾರದ

ಸ್ವಭಾವವನ್ನೂ ಹೆಚ್ಚಾದ ಹೊಸ ಹೊಸ ಬಾಧೆಗಳನ್ನೂ ಅತಿ ವಿಶೇಷ (ಪ್ರಾಜ್ಯ) ವಾದ ರಾಜ್ಯ ದೂಷಣೆಯನ್ನೂ ಗಣನೆಗೆ ಮೀರಿದ ತಾರುಣ್ಯದ ದೂಷಣೆಯನ್ನೂ ಅತಿ ಹೆಚ್ಚಿನದಾದ ಭೋಗದ ಕ್ಷಣಿಕತೆಯನ್ನೂ, ತನ್ನ ಅಂತರಂಗದಲ್ಲಿ ಭಾವಿಸಿ, ಬರಬಾರದ ಭವಗಳಲ್ಲೆಲ್ಲಾ ಹುಟ್ಟಿ ಬಂದ ತನ್ನ ಆತ್ಮನ ನಡತೆಯನ್ನೂ ಕಣ್ಣಾರೆ ಕಂಡಂತೆ ನುಡಿದುದಕ್ಕೆ ಹೇಸಿಗೆ ಪಟ್ಟು....ಜೀವನ=ಆತ್ಮ.

೩೨. ಶರೀರ ಭೋಗ, ಸಂಸಾರ ಭೋಗಗಳಲ್ಲಿ ವೈರಾಗ್ಯ ಬಂದು ಜೈನ ಧರ್ಮವನ್ನು ಚೆನ್ನಾಗಿ ತಿಳಿದ ವಿಮಲ ವಾಹನನು ತನ್ನ ಸಮಸ್ತ ಐಶ್ವರ್ಯವನ್ನೂ ಕೊಳೆತ ಹುಲ್ಲಿಗೆ ಸಮನೆಂದು ಭಾವಿಸಿ, ಇವನ್ನು ತೊರೆದು ಹೋಗುವ ನಿರ್ಧಾರ ಮಾಡಿದನು.

೩೩. ವ: ನೆಗಳ್=ಉಂಟಾಗು, ವಿರಕ್ತ×ಅನುರಕ್ತ. ಶ್ರೇಷ್ಠ ವೈರಾಗ್ಯ ಪರಂಪರೆಯೇ ಉಂಟಾಗಲು ವಿಮಲವಾಹನನ ಮನಸ್ಸು ಈ ಮಾನವ ಲೋಕದ ಸಂಪತ್ ಲಕ್ಷ್ಮಿಗೆ ವಿರಕ್ತವಾಗಿತ್ತು; ಅಂತೆಯೇ ಮುಕ್ತಿ ಲಕ್ಷ್ಮಿಗೆ ಅನುರಕ್ತವಾಗಿತ್ತು.

೩೪. ಭರ=ಉತ್ಕಟೇಚ್ಛೆ, ಆತ್ಮ ಜನ್ಮ=ಮಗ, ಧಾತ್ರೀ=ಭೂಮಿ ಉದ್ಧರಣ=ಮೇಲಕ್ಕೆ ಎತ್ತುವುದು. ಗೆಲ್ (ಧಾ)=ಗೆಲ್ಲ (ಕೃ.ಭಾ.ನಾ.) ಗೆಲ್ಲಮಂ ಕೊಳ್=ಗೆಲ್ಲಂಗೊಳ್=ಸೋಲಿಸು, ಜೈನ ಧರ್ಮವನ್ನು ಎತ್ತಿ ಹಿಡಿಯುವವನೂ, ಭವ್ಯರೆಂಬ ತಾವರೆಗಳಿಗೆ ಸೂರ್ಯನೂ, ವಿನಯನಿಧಿಯೂ ಸ್ನೇಹ ವತ್ಸಲನೂ ಆದ ವಿಮಲವಾಹನನು ಮಂತ್ರಿ ಮುಖ್ಯರನ್ನೆಲ್ಲಾ ಬರಮಾಡಿ ಕೊಂಡು ಅವರಿಗೆ ತನ್ನ ನಿರ್ಧಾರವನ್ನು ತಿಳಿಸಿ, ತನ್ನ ಮಗನಿಗೆ ವೈಭವದಿಂದ ಪಟ್ಟವನ್ನು ಕಟ್ಟಿ, ರಾಜ್ಯ ಭಾರವನ್ನು ಕೊಟ್ಟು [ತಾನು] ದೀಕ್ಷೆಯನ್ನು ತೆಗೆದು ಕೊಂಡು, ಕರ್ಮ ಶತ್ರುವಿನ ಮೇಲೆ ವಿಜಯವನ್ನು ಸಂಪಾದಿಸಲು ನಿಶ್ಚಯಿಸಿ ದನು. ಕಥೆ ಇಲ್ಲಿ ಹೇಗೆ ಓಡುತ್ತಿದೆಯೆಂಬುದನ್ನು ನೋಡಬೇಕು.

ವ: ಲಬ್ಧಿ=ಅಂತರಾಯ ಕರ್ಮದ ಕ್ಷಯದಿಂದಾಗುವ ಧ್ಯಾನಾದಿ ಶಕ್ತಿಗಳು ; ತಪೋ ವಿಶೇಷದಿಂದ ಪಡೆಯುವ ಋದ್ಧಿ, ಕಾಲಲಬ್ಧಿ= ಪಕ್ವಕಾಲ, ಕರಣಲಬ್ಧಿ=ಭವ್ಯರಿಗೆ ಮಾತ್ರ ಸಂಭವಿಸುವ ಪರಿಣಾಮ, ಉಪ ಶಮಲಬ್ಧಿ=ಕರ್ಮದ ಉದಯವನ್ನು ತಡೆಯುವ ತಪೋ ವಿಶೇಷ ಋದ್ಧಿ, ದೊರೆಕೊಳ್=ಒದಗಿ ಬರು, ಉಂಟಾಗು, ಸಾಮ್ರಾಜ್ಯ ದೀಕ್ಷಿತಂ=ರಾಜ್ಯ

[ರಕ್ಷಣಾ] ದೀಕ್ಷೆಯನ್ನು ಪಡೆದಿದ್ದವನು. ದೀಕ್ಷಾಭಿಮುಖ=ದೀಕ್ಷೆಯತ್ತ ಮುಖಮಾಡಿದವನು-ತಿರುಗಿದವನು, ಪರಾಙ್ಮುಖ=ವಿಮುಖ, ಪಲಂಬರ್> ಪಲಬರ್=ಹಲವರು, ಮಕ್ಕಳ್ ಬೆರಸು=ಮಕ್ಕಳ್ವೆರಸು-ಆದೇಶ ಸಂ. ಮೋಕ್ಷ ಮಾರ್ಗ ರೂಪಮಂ=ಮೋಕ್ಷಮಾರ್ಗದ ರೀತಿಯನ್ನು, ಮೂಲ ಗುಣಂಗಳು-ಮುನಿಗಳು ಮೂಲತಃ ಹೊಂದಿರಲೇ ಬೇಕಾದುವು; ಇವು ಇಪ್ಪತ್ತೆಂಟು. ಉತ್ಕೃಷ್ಟ ಚಾರಿತ್ರ=ಶ್ರೇಷ್ಠ ಆಚರಣೆ, ಉತ್ತರೋತ್ತರ ಹೆಚ್ಚುಹೆಚ್ಚಾದ ಅಭಿವೃದ್ಧಿ. ನೆಗೞ್+ಉತ್ತ+ಉಂ=ಉಂಟಾಗುತ್ತಲೂ 'ಉಂ' ಸಮುಚ್ಚಯ ಸೂಚಕ ಪ್ರತ್ಯಯಂ.

೩೫. ತನು=ಶರೀರ, ತನುವಾಗೆ=ಕೃಶವಾಗುವಂತೆ, ನೋಂತು=ವ್ರತವನ್ನು ಹಿಡಿದು, ಪರಮಾಗಮ ಭಾವನೆಯೊಳ್=ಶ್ರೇಷ್ಠವಾದ ಶಾಸ್ತ್ರ ಗ್ರಂಥಗಳ ಪರಿಭಾವನೆಯಲ್ಲಿ, ನಿರಂತರಂ ಮನಮಿರೆ=ಬಿಡುವಿಲ್ಲದಂತೆ ಮನಸ್ಸು ನೆಟ್ಟಿರಲು, ತನ್ನೊಳ್ ಇಂಬು ಎನೆ [ಆಗಮ ಭಾವನೆ ಮತ್ತು ಗುಣ ಸ್ತು... ? ಇವಕ್ಕೆ] ತನ್ನಲ್ಲಿ ಆಶ್ರಯ ಎನ್ನುವಂತೆ. ಕರಣತ್ರಯ=ಮೂರು ಕರಣಗಳು ಮನ, ವಚನ, ಕಾಯ. ಪ್ರಕೃತಿ=ಸ್ವಭಾವ ತಪೋನಿಯೋಗ=ತಪಸ್ಸಿ ಕೆಲಸ.

ವ : ಷೋಡಶತೀರ್ಥಕರ ಭಾವನೆಗಳು=ತೀರ್ಥಂಕರತ್ವವನ್ನು ಸಾಧಿಸಿ ಕೊಡುವ, ತೀರ್ಥಕರ ನಾಮಕರ್ಮವನ್ನು ಕಟ್ಟುವ, ಹದಿನಾರು ಭಾವನೆಗಳು - ೧) ದರ್ಶನವಿಶುದ್ಧಿ-ಸಮ್ಯಗ್ದರ್ಶನವನ್ನು ಶುದ್ಧವಾಗಿ ಪಾಲಿಸಲು ಸದಾ ಚಿಂತಿಸುವುದು, ೨) ವಿನಯಸಂಪನ್ನತೆ ವಿನಯವನ್ನು ನೆಲೆಗೊಳಿಸುವ ಭಾವನೆ, ೩) ಶೀಲೇಶ್ವನತಿಚಾರ [ಶೀಲೇಷು ಅನತಿಚಾರ]=ಅಹಿಂಸೆ ಮುಂತಾದ ಶೀಲ ಗಳಲ್ಲಿಯೂ ವ್ರತಗಳಲ್ಲಿಯೂ ದೋಷ ಬರದಂತೆ ಎಚ್ಚರವಹಿಸುವುದು, ೪) ಅಭೀಕ್ಷ್ಣಜ್ಞಾನೋಪಯೋಗ=ಪ್ರತಿಕ್ಷಣವೂ ಸಮ್ಯಗ್ದರ್ಶನವ ಉಪಯೋಗ ವನ್ನು ಭಾವಿಸುವುದು, ೫) ಸಂವೇಗ=ಸಂಸಾರಾದಿ ಭೋಗಗಳಲ್ಲಿ ವೈರಾಗ್ಯ ೬) ಶಕ್ತಿತಸ್ತ್ಯಾಗ (ಶಕ್ತಿತಃ ತ್ಯಾಗ)=ಶಕ್ತಿ ಉಳಿಸಿಕೊಳ್ಳದೆ ತ್ಯಾಗ (ದಾನ) ಮಾಡಲು ಭಾವಿಸುವುದು. ೭) ಶಕ್ತಿತಸ್ತಪ (ಶಕ್ತಿತಃ ತಪ)=ಶಕ್ತಿ ಉಳಿಸಿ ಕೊಳ್ಳದೆ ತಪಸ್ಸು ಮಾಡಲು ಭಾವಿಸುವುದು, ೮) ಸಾಧು ಸಮಾಧಿ=ಸಾಧುಗಳ ತಪಸ್ಸಿಗೆ ಉಂಟಾಗುವ ವಿಘ್ನಗಳನ್ನು ದೂರ ಮಾಡುವುದು. ೯) ವೈಯಾವೃತ್ಯ

ಕರಣ=ಸಾಧುಗಳ ಕಷ್ಟಗಳನ್ನು ಒಳ್ಳೆ ರೀತಿಯಿಂದ ಪರಿಹಾರ ಮಾಡುವುದು. ೧೦) ಅರ್ಹದ್ಭಕ್ತಿ=ಅರಹಂತ ಪರಮೇಷ್ಠಿಗಳ ಗುಣಗಳನ್ನು ಭಾವ ಶುದ್ಧಿಯಿಂದ ಸ್ಮರಿಸುವುದು, ಸ್ತುತಿಸುವುದು, ಪೂಜಿಸುವುದು. ೧೧) ಆಚಾರ್ಯ ಭಕ್ತಿ= ಆಚಾರ್ಯ ಪರಮೇಷ್ಠಿಗಳ ಗುಣಗಳನ್ನು ಭಾವ ಶುದ್ಧಿಯಿಂದ ಸ್ಮರಿಸುವುದು. ಸ್ತುತಿಸುವುದು. ಪೂಜಿಸುವುದು. ೧೨) ಉಪಾಧ್ಯಾಯ ಭಕ್ತಿ=ಉಪಾಧ್ಯಾಯ ಪರಮೇಷ್ಠಿಗಳ ಗುಣಗಳನ್ನು ಭಾವಶುದ್ಧಿಯಿಂದ ಸ್ಮರಿಸುವುದು, ಸ್ತುತಿಸುವುದು, ಪೂಜಿಸುವುದು; ೧೩) ಪ್ರವಚನ ಭಕ್ತಿ=ಜಿನವಾಣಿಯಲ್ಲಿ ಭಕ್ತಿಯಿಟ್ಟು ಅದನ್ನು ಗ್ರಹಿಸುವುದು, ೧೪) ಆವಶ್ಯಕಾಪರಿಹಾಣಿ ತನ್ನ ನಿತ್ಯದ ಆವಶ್ಯಕ ಕ್ರಿಯೆಗಳನ್ನು ಬಿಡದೆ ಮಾಡುವುದು. ಇದು ಆರು ವಿಧ–ಮುನಿಗಳಿಗೆ: ಸಾಮಾಯಿಕ, ತೀರ್ಥಂಕರ ಸ್ತವನ, ಪಂಚಪರಮೇಷ್ಠಿವಂದನ, ತಪ್ಪೊಪ್ಪಿಕೆ, ದೋಷವುಂಟಾಗದಂತೆ ಜಾಗರೂಕತೆಯಿಂದಿರುವುದು, ದೇಹಾಭಿಮಾನವನ್ನು ಬಿಟ್ಟು ಆತ್ಮಧ್ಯಾನದಲ್ಲಿರುವುದು, ಶ್ರಾವಕರಿಗೆ : ದೇವಪೂಜೆ, ಗುರುಸೇವೆ, ಸ್ವಾಧ್ಯಾಯ, ಸಂಯಮ, ತಪಸ್ಸು, ದಾನ, ೧೫) ಮಾರ್ಗಪ್ರಭಾವನೆ=ಮೋಕ್ಷ ಮಾರ್ಗದ ವೃದ್ಧಿಯನ್ನು ಭಾವಿಸುವುದು. ೧೬)ಪ್ರವಚನ ವತ್ಸಲತ್ವ=ಸಧರ್ಮೀಯರಲ್ಲಿ ವಾತ್ಸಲ್ಯ ಇಡುವುದು. ಕ್ಷೋಭಕಾರಿ=ದಿಗಿಲನ್ನು ಉಂಟುಮಾಡು,ತೀರ್ಥಕರ ಪುಣ್ಯಮಂ ಕಟ್ಟಿ=ತೀರ್ಥಕರನಾಗುವ ಪುಣ್ಯವನ್ನು ಸಂಪಾದಿಸಿಕೊಂಡು. ಚತುರ್ವಿಧ ಆರಾಧನಾ ಪುರಸ್ಸರಂ =ನಾಲ್ಕು ಬಗೆಯ ಆರಾಧನೆಗಳಲ್ಲಿ ಮುನ್ನಡೆಯುತ್ತ–ಚತುರ್ವಿಧ ಆರಾಧನೆ ಧ್ಯಾನವೆ? ಸಮಾಧಿ ಮರಣ=ಸಾಧಕನು ಅರಿಷಡ್ವರ್ಗಗಳನ್ನು ತ್ಯಜಿಸಿ, ಶುದ್ಧ ಅಹಿಂಸಾತ್ಮಕ ವೃತ್ತಿಯನ್ನು ಪಾಲಿಸುತ್ತ ಆತ್ಮ ಪವಿತ್ರತೆಯನ್ನು ಕಾಪಾಡಿಕೊಂಡು ಶರೀರವನ್ನು ತ್ಯಾಗಮಾಡುವುದು. ಪಂಚಾಣೂತ್ತರೆಗಳೊಳಗಣ ವಿಜಯ ದೊಳ್ =ಮಧ್ಯಮ ಲೋಕದ ಮೇಲಿನದು ಊರ್ಧ್ವ ಲೋಕ, ಇದು ದೇವತೆಗಳ ನಿವಾಸ ಇಲ್ಲಿ ಕೆಳಗಿನಿಂದ ಮೇಲಕ್ಕೆ ಜೋಡಿ ಜೋಡಿಯಾಗಿ ಹದಿನಾರು ಸ್ವರ್ಗಗಳಿವೆ. ಇವುಗಳ ಮೇಲೆ ಒಂಬತ್ತು ಗ್ರೈವೇಯಕ ವಿಮಾನಗಳೂ, ಅಲ್ಲಿಂದ ಮೇಲೆ ಒಂಬತ್ತು ಅನುದಿಶ ವಿಮಾನಗಳೂ, ಅಲ್ಲಿಂದ ಮೇಲೆ ಐದು ಅನುತ್ತರ ವಿಮಾನಗಳೂ ಇವೆ. ಇವುಗಳಲ್ಲಿ ಒಂದು ವಿಜಯ ಎಂಬುದು. ಅಹಮಿಂದ್ರ=ಮೊದಲ ಹದಿನಾರು ಸ್ವರ್ಗಗಳ ನಂತರದ ವಿಮಾನಗಳಲ್ಲಿನ ದೇವತೆ, ನೆಐ(ರ)ಪು= ಪೂರೈಸು. ಪಂಚ........ಪಂಚೇಂದ್ರಿಯನ್=ಐದು ಬಗೆಯ ಅಂತರಾಯಕರ್ಮ

ಗಳ ಕ್ಷಯ ಮತ್ತು ಉಪಶಮಗಳಿಂದ ಹುಟ್ಟಿದ ಐದು ಇಂದ್ರಿಯಗಳುಳ್ಳವನೂ. ಕರ್ಮಗಳಲ್ಲಿ ಮುಖ್ಯವಾಗಿ ಎರಡು ಬಗೆ : ಘಾತಿ–ಅಘಾತಿ, ಘಾತಿಗಳು ನಾಲ್ಕರಲ್ಲಿ ಅಂತರಾಯ ಒಂದು–ಅನಂತವೀರ್ಯಕ್ಕೆ ತಡೆಮಾಡುವ ಕರ್ಮ. ಉಪಶಮ= ಕರ್ಮವು ಫಲಕೊಡದೆ ಬಿಟ್ಟು ಹೋಗುವುದು. ಸಾತ-ಹರಿತ. ಪಂಚ=ಅಪೂರ್ವ, ಸಾಗರೋಪಮ=ಪಲ್ಯಕಾಲಗಳ ಹತ್ತು ಕೋಟಾಕೋಟಿಕಾಲ, ಬರಲಿರ್ಪಂ= ಹುಟ್ಟಿ ಬರಲಿದ್ದಾನೆ.

## ಗರ್ಭಾವತರಣ ಕಲ್ಯಾಣಂ

೧. ಜಿನಭಾನು=ಜಿನನೇ ಸೂರ್ಯ–ಅ.ಪೂ.ಕ.ಸ. ಭರತಾವನಿ=ಭರತ ಭೂಮಿ, ಭವ್ಯಾಬ್ಜಬಂಧು=ಭವ್ಯಜನರೆಂಬ ತಾವರೆಗಳ ಬಂಧು. ನೆನೆದು ಆಜಿಗೆ ಎಂಬಂತೆ=ಇದು ನೆನಪಿರಲಿ ಎಂದು ತಿಳಿಸುತ್ತಿದೆಯೋ ಎಂಬಂತೆ, ನಿಳಿಂಪ= ದೇವತೆ, ಆಸನಕಂಪವಾಗುವುದು ದೇವೇಂದ್ರನಿಗೆ ಅವನ ಕರ್ತವ್ಯವನ್ನು ಎಚ್ಚರಿಸುವ ಸೂಚನೆ.

ಮನಕ್ಕೆ ಒಗೆದ ಅವಧಿ ಬೋಧದಿಂ ಅಜಿದು=ತನ್ನ ಮನಸ್ಸಿನಲ್ಲಿ ಹುಟ್ಟಿದ ಅವಧಿ ಜ್ಞಾನದಿಂದ ತಿಳಿದು, ವಿಬುಧಗಣಾಗ್ರಣಿ=ವಿಬುಧ ಗಣಂಗಳೊಳ್ ಅಗ್ರಣಿ, ಧನಪತಿ=ಕುಬೇರ, ಧನಪತಿಯುಂ ಬೆಸಸಿದಂ—ವಿಭಕ್ತಿ ಪಲ್ಲಟ, ಚತುರ್ಥಿಗೆ ದ್ವಿತೀಯೆ.

೨. ಮೂಱುಂ ಪೊಳ್ತು=ಹಗಲು, ರಾತ್ರಿ ಮತ್ತು ಸಂಧ್ಯಾಕಾಲ, ಪೂವಾಹ್ನ ಮಧ್ಯಾಹ್ನ, ಅಪರಾಹ್ನ. ವಸು=ಧನ, ವಸುಧಾರೆ=ಬಂಗಾರದ ಮಳೆ. ರಾಜಾವಸಥ=ರಾಜ ಆವಸಥ=ಜಿತ ಶತ್ರುವಿನ ಅರಮನೆ, ಅರೆ-ಅರ್ಧೀಚ [ಶ.ಮ.ದ.]. ಜಿನನ ಪುಣ್ಯಾತಿಶಯಂ ಏಂ ಪಿರಿದೋ !

ವ: ಮುನ್ನ ಆಱುದಿಂಗಳುಂಟು ಎನೆ=ತೀರ್ಥಂಕರನಾಗಿ ಹುಟ್ಟಲಿರುವ ಪತ್ರ ತಾಯಿಯ ಗರ್ಭಕ್ಕೆ ಅವತರಿಸಲು ಇನ್ನೂ ಆರು ತಿಂಗಳಿವೆ ಎನ್ನುವಂತೆ, ಧನದ=ಕುಬೇರ. ಜಂಬೂದ್ವೀಪದ ಆರು ಕುಲ ಪರ್ವತಗಳಲ್ಲಿ ಒಂದೊಂದರಲ್ಲೂ ಒಂದೊಂದು ಸರೋವರ, ಒಂದೊಂದು ಸರೋವರದಲ್ಲೂ ಒಂದೊಂದು ಮಹಾ ಕಮಲ, ಒಂದೊಂದು ಕಮಲಗಳ ಮೇಲೂ ಒಬ್ಬೊಬ್ಬ ದೇವತೆ. ಹಿಮವಂತ, ಮಹಾ ಹಿಮವಂತ, ನಿಷಧ, ನೀಲ, ರುಕ್ಮಿ, ಶಿಖರಿ–ಇವೇ ಆ ಪರ್ವತಗಳು; ಪದ್ಮ,

ಮಹಾಪದ್ಮ, ತಿಗಂಛ, ಕೇಶರಿ. ಪುಂಡರೀಕ, ಮಹಾ ಪುಂಡರೀಕ–ಇವೇ ಆ ಸರೋವರಗಳು, ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ ಇವರೇ ಆ ದೇವಿಯರು, ಇವರು ಜಿನ ಜನನಿಯಾಗಲಿರುವ ವಿಜಯಸೇನಾ-ದೇವಿಗೆ ಕ್ರಮವಾಗಿ ಕಾಂತಿ, ಲಜ್ಜೆ, ಧೈರ್ಯ, ಸ್ತುತಿ, ಜ್ಞಾನ, ಸಂಪತ್ತುಗಳನ್ನು ಉಂಟುಮಾಡುವವರು ಎಂಬುದು ಜಿನಸೇನರ ಹೇಳಿಕೆ; ಈ ಆರು ದೇವತೆಯರೂ ಪ್ರಸಾದ, (ಶಾಂತಿ-ಸಮಾಧಾನ) ಜಾತ (ಆಯುಷ್ಯ?) ಧೈರ್ಯ, ಮನಶ್ಶಕ್ತಿ ಸೌ(ತ್ತು) ೩೩ ಗಳನ್ನು ವರ್ಧಿಸುವವರೆಂಬುದು ರನ್ನನ ಹೇಳಿಕೆ. ಪೆಱಪೆಱರುಂ ಎನಿಬರಾನುಂ=ಬೇರೆ ಬೇರೆ ಅನೇಕರನ್ನು–ಸು. ಎಪ್ಪತ್ತಾರುಮಂದಿಗೂ ಹೆಚ್ಚು. ಸಂಶೋಧನಾ ........ನೆಗೞ್ದಿಂತು=ಗರ್ಭ ಸಂಶೋಧನೆಯೇ ಮುಂತಾಗಿ ವಿಜಯಸೇನಾ ದೇವಿಗೆ ರಹಸ್ಯವಾಗಿ ನಡೆಸಿಕೊಡಬೇಕಾದ ಕಾರ್ಯದಲ್ಲಿ ನಿರತರಾಗುವಂತಹ ಸೇವಕಿಯರು ಸೇವೆ ಮಾಡುವಂತೆ, ಪರಾಯಣ=ಅತ್ಯಂತ ಆಸಕ್ತ, ನಿಯಮ ನಿಷ್ಠೆತೆಯರಾಗಿ =ನೇಮಕದಲ್ಲಿ ಶ್ರದ್ಧಾವಂತರಾಗಿ.

೩. ಆಡಿ=ನರ್ತನ ಮಾಡಿ, ಮಧುರ ಪ್ರಧ್ವಾನ=ಇಂಪಾದ ದನಿ ಇಂದ್ರತರು=ಕಲ್ಪತರು, ಪ್ರಸೂನ=ಹೂ, ಸಂತಾನ=ಸಾಲ-ದೇವವೃಕ್ಷ. ಕೈಗೈ =ಸಿಂಗರಿಸು. ಮುಂಪಿಂಚದೆ=ತಾಮುಂದು, ತಾಹಿಂದು ಆಗದೆ. ಆ ದೇವಿಯರ ನರ್ತನ್ಯ ಗೀತ, ದಿವ್ಯ ವಸ್ತುಗಳನ್ನು ತಂದು ಅಲಂಕರಿಸಿ, ಸ್ನಾನಾದಿಗಳನ್ನು ಮಾಡಿಸಿ ಯಾರೂ ತಮ್ಮ ಕೆಲಸಗಳಲ್ಲಿ ಹಿಂದೆ ಬೀಳದೆ ಸರಿಸಮಾನರಾಗಿ, ಬೆಸ ವೇೞ್ದಲ್ಲಿಗಮೆಲ್ಲಿಗಂ=ಅಪ್ಪಣೆಮಾಡಿದಲ್ಲಿಗೆ ಎಲ್ಲಿಗೂ.

೪. ಭರತಮನೋದುವ=ನಾಟ್ಯಶಾಸ್ತ್ರವನ್ನು ಅಭ್ಯಾಸಮಾಡುವ ಸಪ್ತಸ್ವರಮಂ=ಸಂಗೀತವನ್ನು, ಗುಣಿಯಿಸುವ=ಗುಣುಗುಟ್ಟುವ, ಬೀಣೆವಾಜಿಪ =ವೀಣೆಯನ್ನು ನುಡಿಸುವ, ವಿದ್ಧಂಬರೆವ=ಉಗುರಿನಿಂದ ಚಿತ್ರಗೆಲಸ ಮಾಡುವ,ಪರಚಕ್ರಮಿಕ್ಕುವ=ಶ್ರೇಷ್ಠವಾದ ಚಕ್ರದ ಆಟವಾಡುವ ; ಚದುರಂಗ ದಾಟ ('Ring play'?) ಪರಿಹಾಸ=ವಿನೋದ–ಈ ವಿನೋದಗಳೇ ಅವರ ವಿನೋದಗಳಾಗಿದ್ದುವು.

೫. ಲೀಳಾವನ=ಉದ್ಯಾನವನ, ಲೀಳಾಸರ–ನೀರಾಟದ ಸರೋವರ, ಮುಟ್ಟಿ=ಮುಳಿಂಗು, ಅಂದೋಳ=ಅಂದಳ=ಪಾಲಕಿ. ಸಂತೋಷದ ಈ ಆಟಗಳೇ ಆ ಮಹಾರಾಣಿಯ ಆಟಗಳಾಗಿದ್ದವು.

೬. ಅಭ್ಯಾಗತ=ಆಮಂತ್ರಣವನ್ನು ಪಡೆದು ಮನೆಗೆ ಬಂದ ಗೌರವಸ್ಥ. ಮನೆಗೆ ಯಾರಾದರೂ ಅಭ್ಯಾಗತರು ಬರಲಿರುವಾಗ ಅವರ ಬರವಿಗೆ ಮುನ್ನ ಪ್ರೀತಿಯಿಂದ ಮನೆಯನ್ನು ಶುದ್ಧಿಮಾಡುವಂತೆ, ಅಜಿತಜಿನನು ತಾಯಿಯ ಗರ್ಭಕ್ಕೆ ಬರಲಿರಲು ಇಂದ್ರಪತ್ನಿಯರು ಒಗ್ಗೂಡಿ ವಿಜಯಸೇನಾ ಮಹಾದೇವಿಯ ಗರ್ಭವನ್ನು ಶುದ್ಧಿಮಾಡಿದರು. ಅಭ್ಯಾಗತ × ಅತಿಥಿ.

ವ: ಎಸೆವ ದಿವ್ಯ ಶಯನಗೃಹ=ದೇವ ವೈಭವದಿಂದ ಕೂಡಿರುವ ಮಲಗುವ ಮನೆ. ವೈಡೂರ್ಯ ಪರ್ಯಂಕ=ರತ್ನಮಂಚ, ಪವಡಿಸು=ಮಲಗು. ಯಾಮ (ಸಂ)-ಜಾವ (ತ್ಭ)=ಮೂರುಗಂಟೆಗಳಷ್ಟು ಕಾಲ. ಜಾವಗಳು ೪-ರೌದ್ರ, ರಾಕ್ಷಸ. ಗಾಂಧರ್ವ, ಮನೋಹರ ?

೭. ಕರಿ=ಐರಾವತ-ಆನೆ, ವೃಷಭ=ಗೂಳಿ, ಮೃಗೇಂದ್ರ=ಮೃಗರಾಜ, ಸಿಂಹ. ಶ್ರೀವಧೂ=ಲಕ್ಷ್ಮಿ, ಪುಷ್ಪಮಾಲಾ=[ಎರಡು] ಹೂಮಾಲೆಗಳು; ಹರಿಣಧರ=ಜಿಂಕೆಯನ್ನು ಧರಿಸಿದವ-ಚಂದ್ರ; ವಿವಸ್ವನ್=ಸೂರ್ಯ, ಮೀನ=[ಎರಡು] ಮೀನುಗಳು, ಕುಂಭದ್ವಯ=ಎರಡು ಕಲಶಗಳು, ಅಬ್ಜಾಕರ=ತಾವರೆಕೊಳ, ಜಲಧಿ=ಸಮುದ್ರ, ಗಜದ್ವಿಟ್‌ಪೀಠ=ಸಿಂಹಾಸನ, ಚಕ್ರ, ಅಹಿಗೇಹ=ನಾಗೇಂದ್ರಭವನ, ಸ್ಫುರಿತಮಣಿಸಮೂಹ = ಹೊಳೆಯುತ್ತಿರುವ ರತ್ನ ರಾಶಿ, ಜ್ವಾಳೆ=ಉರಿ, ಜ್ವಾಲಾ=ಸಂ—ಈ ಹದಿನಾರು ಸ್ವಪ್ನಗಳನ್ನೂ ವಿಜಯ ಸೇನಾದೇವಿ ಕಂಡಳು. ಬೇರೆಡೆ-ಜೈನ ಪುರಾಣಗಳಲ್ಲಿ-ಚಕ್ರಕ್ಕೆ ಬದಲಾಗಿ ದೇವ ವಿಮಾನವನ್ನು ಹೇಳಿದೆ.

ವ: ಪುರಂಧ್ರೀ—ಸ್ತ್ರೀ, ಮಂಗಳ ಪಾಠಕ=ಮಂಗಲಮಯವಾದ ಸುಪ್ರಭಾತವನ್ನು ಹಾಡುತ್ತಿರುವವ, ಪುಣ್ಯರವ=ಪುಣ್ಯಧ್ವನಿ. ಧವಳಮಂಗಳಗೇಯ=ಶುಭ್ರವಾದ ಎಂದರೆ ಪುಣ್ಯಪ್ರದವಾದ ಮಂಗಲ ಗೀತ; ಧವಳ=ಒಂದು ಬಗೆಯ ಸ್ತೋತ್ರ (?) ಮಂಡನ=ಅಲಂಕಾರ. ನಿರ್ವರ್ತಿಸು=ಮಾಡು. ತನ್ನ ಕಂಡ ಕನಸು—ತನ್ನ:ವಿ.ಪ—ಪ್ರಥಮೆಗೆ ಷಷ್ಠಿ. ಮನೋವಲ್ಲಭ=ಮನದೊಡೆಯ-ಪತಿ. ಹೀಗೆ ಹದಿನಾರು ಶುಭಸ್ವಪ್ನಗಳನ್ನು ಕಂಡ ನಂತರ ತನ್ನ ಮುಖಕಮಲವನ್ನು ಗಜರಾಜನು ಬಂದು ಹೋಗುತ್ತಿರುವುದನ್ನು ಕನಸಿನಲ್ಲಿ ಕಂಡಳು.

೮. ಆಗ ತಾನೆ ಉಜ್ಜಿದ ಮನ್ಮಥನ ಬಾಣಗಳ ಆಡಂಬರವನ್ನು ಕಣ್ಣಿ ಕಾಂತಿ, ಹೆದೆಯೇರಿಸಿದ ಮನ್ಮಥನ ಬಿಲ್ಲಿನ ಆಡಂಬರವನ್ನು ಹುಬ್ಬುಗಳೂ

ಹೋಲುತ್ತಾ, ಮನ್ಮಥನ ವಿಜಯ ಚಿಹ್ನೆಗಳಿಂದ ಶೋಭಿಸುತ್ತಿರುವ ವಿಜಯ ಸೇನಾದೇವಿ [ಪತಿಯಾದ ಜಿತಶತ್ರು ಮಹಾರಾಜನ] ಕಣ್ಣಿಗೆ ಆನಂದವನ್ನುಂಟು ಮಾಡುತ್ತಾ ಬಂದಳು. ತುಂಬ ಸುಂದರವಾದ ಪದ್ಯ. ಆದರೆ 'ತೀರ್ಥಂಕರ ಮಾತೆಯಾಗಲಿರುವವಳನ್ನು ಹೀಗೆ ಮನ್ಮಥ ಪರಿಭಾಷೆಯಲ್ಲಿ ಬಣ್ಣಿಸಬೇಕಿತ್ತೇ?' ಎಂಬ ಅಭಿಪ್ರಾಯವೊಂದಿದೆ. ವಿಜಯಸೇನಾದೇವಿ ಮೊದಲೇ ಲೋಕ ಸುಂದರಿ; ಈಗಾದರೋ ಆರು ತಿಂಗಳಿಂದ ದೇವದೇವಿಯರಿಂದ ಸೇವೆ; ಅಂದೇ ತಾನೆ ಜಿನನಾಗಲಿರುವ ಆತ್ಮ ಗರ್ಭಕ್ಕೆ ಅವತರಿಸಿದೆ. ಇಂತಹ ಹೊತ್ತಿನಲ್ಲಿ ಅವಳ ಸೌಂದರ್ಯ ಇಮ್ಮಡಿಸಿದ್ದು, ಪತಿಯ ಕಣ್ಣಿಗೆ ಹಾಗೆ ಕಂಡಿದ್ದರೆ ಉಚಿತವೇ ಅಲ್ಲವೇ? ಮೊದಲು ಗರ್ಭಿಣಿಯಾದ ಹೆಣ್ಣು ವಿಶೇಷ ಸೌಂದರ್ಯದಿಂದ ಕಾಣುವುದು ಲೋಕರೂಢಿಯೇ ಅಲ್ಲವೇ? ಮಸೆದ........ಚಿತ್ತಜಂಗೆಬಿಸಂ—ಇಲ್ಲಿ ಉತ್ಪ್ರೇಕ್ಷಾ ಅಲಂಕಾರವಿದೆ— ವಿಜಯ ಸೇನಾದೇವಿಯ ರೂಪು ಮನ್ಮಥ ವಿಜಯ ಚಿಹ್ನೆಯೋ ಎಂಬಂತಿದೆ, ಎಂದು ಹೇಳಿ, ಇಂಥ ಸುರೂಪನ್ನು ಪಡೆದರೂ ಮನ್ಮಥನನ್ನು ಜಯಿಸಿ ತೀರ್ಥಂಕರನಾಗುವ ಆತ್ಮವು ಆಕೆಯ ಗರ್ಭಕ್ಕೆ ಬರುವ ಮೊದಲು ಮನ್ಮಥನು ವಿಜೃಂಭಿಸಿದನು.

ವ:—ಧವಳ.. ....ಶರೀರೆಯುಂ=ಶುಭ್ರವೂ ಮಂಗಲಕರವೂ ಆದ ಒಡವೆ ಮುಂತಾದುವುಗಳಿಂದ ಅಲಂಕರಿಸಿದ ಶರೀರ ಉಳ್ಳವಳು. ಪ್ರಸಾಧನ=ಅಲಂಕಾರ. ವೀಜ್ಯಮಾನ=ಬೀಸುವ, ಕಳಾಪ=ಸಮೂಹ ಕಂಚುಕ=ಕಾಲು ಮುಟ್ಟುವ ವರೆಗಿರುವ ನಿಲುವಂಗಿ, ಕಂಚುಕಿ=ಕಂಚುಕವನ್ನು ತೊಟ್ಟ ರಾಣಿವಾಸದ ಪಾರುಪತ್ಯಗಾರ, ಅವಚ್ಛನ್ನ=ಮುಚ್ಚಲ್ಪಟ್ಟ—ಆವೃತವಾದ, ಪರಿವೃತೆ=ಸುತ್ತುವರಿಯಲ್ಪಟ್ಟವಳು, ಅವನತ ಉತ್ತಮಾಂಗೆಯಾಗಿ=ತಲೆಬಾಗಿ ನಮಸ್ಕಾರ ಮಾಡಿ, ಅರ್ಧ್ಯಕ ದೇಶ=ಅರ್ಧಭಾಗ, ಸೋಂಕಿ ಕುಳಿರ್ದು—'ಸೋಂಕಿ' ಶಬ್ದ ಪ್ರಯೋಗ ಗಮನಾರ್ಹ. ದೇಶಾವಧಿ........ಜಿತಶತ್ರು=ದೇಶಾವಧಿಜ್ಞಾನ ಸಂಪತ್ತನ್ನು ತನ್ನ ಸಂಪತ್ತನ್ನುಳ್ಳವನಾಗಿರುವ ಜಿತ ಶತ್ರು, ತದೀಯ=ಆ ಸಂಬಂಧವಾದ, ಸಫಲೀಕೃತ ಜನ್ಮ=ಸಫಲ ಗೊಳಿಸಲ್ಪಟ್ಟ ಹುಟ್ಟು—ತಾನು ಜನ್ಮ ತಾಳಿದುದು ಸಾರ್ಥಕವಾಯಿತು, ಸಫಲವಾಯಿತು ಎಂಬ ಆತ್ಮ ಸಂತೋಷ. ಅವಧಿ ಜ್ಞಾನ=ಕಾಲ ದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನೆಲ್ಲಾ [ಕೆಲವು ಮಿತಿಗಳಿಗೊಳಪಟ್ಟು] ತಿಳಿಯುವುದು. ಇದರಲ್ಲಿ ದೇಶಾವಧಿ,

ಪರಮಾವಧಿ, ಸರ್ವಾವಧಿ ಎಂದು ಮೂರು ಪ್ರಕಾರಗಳು. ಇವುಗಳಲ್ಲಿ ಉತ್ತರೋತ್ತರ ಹೆಚ್ಚು ವಿಸ್ತಾರ ಹಾಗೂ ವಿಶುದ್ಧಿಗಳು ಕಂಡು ಬರುತ್ತವೆ. ಕಂಚುಕಿನ್—ಅಂತಃಪುರ ಚರೋ ವೃದ್ಧೋ ವಿಪ್ರೋ ಗುಣಗಣಾನ್ವಿತಃ। ಸರ್ವಕಾರ್ಯಾರ್ಥ ಕುಶಲಃ ಕಂಚುಕೀತ್ಯಭಿಧೀಯತೇ॥

೯. ಪ್ರಿಯ ಪತ್ನಿಯೇ, ಕುಲತಿಲಕನೂ ಜಗತ್ತಿಲಕನೂ ಆದ ಜಿನನು ನಮಗೆ ಮಗನಾಗಿ ಜನಿಸಲು ನಿರ್ಧರಿಸಿದ್ದಾನೆ. ಆತನು ನಮ್ಮ ವಂಶವನ್ನೂ ಜೈನ ಧರ್ಮವನ್ನೂ ಬೆಳಗುತ್ತಾನೆ. ಇಲ್ಲಿ ಸಮುಯೋಗಾಲಂಕಾರವಿದೆ.

ವ: ಭವ್ಯ+ಆಕಾರ=ಮಂಗಳಕರವಾದ ಆಕೃತಿ, ಲಾಂಛನ=ಚಿಹ್ನೆ, ಧವಳ ವೃಷಭ=ಶುಭ್ರವಾದ ಬಿಳಿಯಗೂಳಿ, ನಿಜಕುಲಧವಳಂ=ತನ್ನ ವಂಶವನ್ನು ಬೆಳಗುವವನು, ದುರಿತ ಗಜಘಟಾ ವಿಘಟನಂ=ಪಾಪವೆಂಬ ಆನೆಗಳ ಹಿಂಡನ್ನು ನಾಶಗೊಳಿಸುವವನು, ಸ್ಯಾದ್ವಾದಾಚಲ ಶಿಖರಿ ಶೇಖರಂ=ಸ್ಯಾದ್ವಾದವೆಂಬ ಪರ್ವತ ಶಿಖರಕ್ಕೆ ಆಭರಣದಂತಿರುವವನು, ಕಾಂತೆ—ಸ್ತ್ರೀ, ಹೆಂಗಸು, ಕಾಂತ=ವಲ್ಲಭ—ಒಡೆಯ—ಗಂಡ, ದಾಮ=ಹಗ್ಗ, ಕುಸುಮ ದಾಮ=ಹೂಮಾಲೆ. ಉದ್ದಾಮ=ಶ್ರೇಷ್ಠವಾದ, ಭವ್ಯಮಧುಕರ ನೀಷೇವ್ಯನುಂ=ಭವ್ಯಜನರೆಂಬ ದುಂಬಿಗಳಿಂದ ಸೇವಿಸಲ್ಪಡುವವನೂ, ವಿಯತ್ತಳ=ಆಕಾಶ, ಕುಮುದ+ಆನಂದಕರ=ಕುಮುದ ಪುಷ್ಪಗಳಿಗೆ–ಜನತೆಗೆ ಸಂತೋಷವನ್ನುಂಟುಮಾಡುವವನು, ಕು=ಭೂಮಿಗೆ–ಜನಕ್ಕೆ, ಮುದ=ಆನಂದವನ್ನು ಕೊಡುವವ ಎಂದರೆ ಚಂದ್ರ. ಮಾರ್ತಂಡ=ಸೂರ್ಯ, ಸಕಲ ಭವ್ಯ ಪುಂಡರೀಕ ಪ್ರಬೋಧಕರಂ=ಎಲ್ಲಾ ಭವ್ಯ ಜನರೆಂಬ ತಾವರೆಗಳಿಗೆ ಎಚ್ಚರಗೊಳಿಸುವವನು, ಉದ್ಭಾಸಿ ವಿಮಳ ಕೇವಳಜ್ಞಾನ=ಶೋಭಿಸುವ–ಶುದ್ಧವಾದ ಕೇವಲಜ್ಞಾನ. ವಿನಿರ್ಜಿತ ಮೀನ ಕೇತನ=ಗೆಲ್ಲಲ್ಪಟ್ಟ ಮನ್ಮಥ. ಅನಿಮಿಷಾಭ್ಯರ್ಚಿತನ್=ದೇವತೆಗಳಿಂದ ಪೂಜಿಸಲ್ಪಟ್ಟವನು. ಕನಕ ಕಳಶ ಶಾಲಿಲೀಲಾಭಿಷೇಕಯೋಗ್ಯನ್=ಶೋಭಿಸುವ ಕನಕ ಕಳಶಗಳಿಂದ ಅಭಿಷೇಕಮಾಡಲು ಯೋಗ್ಯನು, ಕಮಳಾಕಾರನ್=ಕಮಲದಂತೆ ಸುಂದರವಾದ ಆಕಾರವುಳ್ಳವನು, ಚತುರಶೀತಿ ಲಕ್ಷಲಕ್ಷಣಗುಣರತ್ನಾಂಬೋಧಿಯುಂ=ಎಂಬತ್ತನಾಲ್ಕು ಲಕ್ಷ ಲಕ್ಷಣ ಗುಣಗಳೆಂಬ ರತ್ನಗಳಿಗೆ ಸಾಗರದಂತಿರುವವನೂ, ಸಮುದ್ರಸಮ ಗಾಂಭೀರ್ಯಂ=ಗಾಂಭೀರ್ಯದಲ್ಲಿ ಸಮುದ್ರ ಸಮಾನ–ಸುಖ ದುಃಖ ಮೊದಲಾದುವುಗಳಲ್ಲಿ ವಿಕಾರ ಹೊಂದದ ಚಿತ್ತವೃತ್ತಿ,

ಸ್ನಾನ ಪೀಠೀ ಕೃತ ಮಂದಾರಚಲನ್=ಮಂದರಾಚಲವನ್ನು ಸ್ನಾನ ಪೀಠವನ್ನಾಗಿ ಮಾಡಿಕೊಂಡವನು. ಸಿಂಹಾಸನ........ಅಂಗೋ ಪಾಂಗನುಂ=ಸಿಂಹಾಸನವನ್ನು ಹತ್ತಲು ಅರ್ಹವಾದ ನೂರೆಂಟು ಶುಭ ಲಕ್ಷಣಗಳು ಗೋಚರಿಸಿದ ಅಂಗ ಮತ್ತ ಉಪಾಂಗಗಳನ್ನುಳ್ಳವನು, ಅವತೀರ್ಣ=ಇಳಿದು ಬಂದವ, ವೈಮಾನಿಕ........ ಅರವಿಂದನುಂ=ವಿಮಾನವಾಸಿ ದೇವತೆಗಳ ಸಮೂಹದಿಂದ ನಮಸ್ಕರಿಸಲ್ಪಡಲು ಅರ್ಹವಾದ ಶ್ರೇಷ್ಠ ಪಾದ ಕಮಲಗಳುಳ್ಳವನು, ಚಾರು=ಮನೋಹರ, ಶ್ರೇಷ್ಠ ವಿಮಾನ=ದೇವತೆಗಳ ವಾಸಸ್ಥಾನ, ಉದಾತ್ತ ಭೋಗಿ=ಔದಾರ್ಯವುಳ್ಳ ಸುಖಪುರುಷ, ತ್ರಿಭುವನೈಕ ಚೂಡಾಮಣಿ=ಮೂರು ಲೋಕಗಳಿಗೂ ಶ್ರೇಷ ನಾದ ವ್ಯಕ್ತಿ. ತ್ರಿಭುವನ+ಏಕ=ತ್ರಿಭುವನೈಕ–ವೃದ್ಧಿಸಂಧಿ. ಅಷ್ಟಾದಶ ಸಹಸ್ರ ಶೀಲರತ್ನರಾಶಿಯುಂ=ಹದಿನೆಂಟು ಸಾವಿರ ಶೀಲಗಳೆಂಬ ರತ್ನಗಳ ರಾಶಿಯೂ, ಪರಾರ್ಥ್ಯಗುಣಮಣಿ ವಿಭೂಷಣನುಂ=ಪರೋಪಕಾರವೆಂಬ ಗುಣ ರತ್ನದಿಂದ ಅಲಂಕೃತನೂ. ವಿಶುದ್ಧ........ಇಂಧನನುಂ=ತುಂಬ ಶುದ್ಧವಾದ ಧ್ಯಾನವೆಂಬ ಬೆಂಕಿಯಿಂದ ಸುಡಲ್ಪಟ್ಟ ಕರ್ಮವೆಂಬ ಸೌದೆಯೂ, ಕರ್ಮವೆಂಬ ಇಂಧನ—ಸಂ.ಪೂ.ಕ.ಸ. ಕರ್ಮ+ಇಂಧನ–ಗು.ಸಂ, ವದನಾಬ್ಜ=ವದನವೆಂಬ ಅಬ್ಜ. ರಾಜಕುಂಜರ=ಗಜರಾಜ, ಇಂತಹವನು ನಿನಗೆ ಮಗನಾಗುವನೆಂದು ಸ್ವಪ್ನಫಲವನ್ನು ತಿಳಿಸಲು...

೧೦. ಪರಿಷೇಕ=ಸಿಂಚನ, ಗರ್ಭಭೂಮಿ=ತನ್ನ ಗರ್ಭ, ಅಂಕುರ= ಮೊಳಕೆ, ಅಂತಹ ಮಗನನ್ನು ಅಂದೇ ಹಡೆದೆನೆಂದೇ ಭಾವಿಸಿ ಹಿಗ್ಗಿದಳು.

ವ:—ವಿಮಲವಾಹನ ಚರಂ=ಹಿಂದಿನ ಜನ್ಮದಲ್ಲಿ ವಿಮಲವಾಹನನಾ ಗಿದ್ದವನು,ಸೌಧರ್ಮೇಂದ್ರ=ಇಂದ್ರರಲ್ಲೆಲ್ಲ ಪ್ರಮುಖನಾದವನು, ಸಂಪಾದಿತ= ಸಾಧಿಸಿದ=ಮಾಡಿದ, ಸ್ವರ್ಗಾವತರಣ ಮಹಾಕಲ್ಯಾಣ ಪೂಜೆ=ತೀರ್ಥಂಕರನ ಐದು ಕಲ್ಯಾಣಗಳಲ್ಲಿ ಮೊದಲನೆಯದಾದ, ಸ್ವರ್ಗದಿಂದ [ಭೂಮಿಗೆ] ಇಳಿದು ಬರುವ ಮಹಾಶುಭ ಘಟನೆಯ ಹೊತ್ತಿನಲ್ಲಿ ಸೌಧರ್ಮೇಂದ್ರನು ತನ್ನೆಲ್ಲಾ ಪರಿ ವಾರದೊಂದಿಗೆ ವೈಭವದಿಂದ ಬಂದು ಸಂತೋಷದಿಂದ ಮಾಡುವ ಮಹಾಪೂಜೆ, ಪೂರ್ವಕ=ಹೊಂದಿಕೊಂಡು ಬರುವ, ಗರ್ಭಾಂಬುಜಾಕರ=ಗರ್ಭವೆಂಬ ಕಮಲ ಸರೋವರ, ಗರ್ಭ ಸರೋರುಹ=ಗರ್ಭವೆಂಬ ಕಮಲ, ಷಟ್ಚರಣ=ಆರು ಚರಣಗಳನ್ನುಳ್ಳದು—ದುಂಬಿ.

## ಜನ್ಮಾಭಿಷೇಕ ಕಲ್ಯಾಣಂ

೧. ವಳಿ=ಕಿಬ್ಬೊಟ್ಟೆಯಮೇಲೆ ಅಡ್ಡಲಾಗಿರುವ ಮಡಿಕೆ ಮತ್ತು ಆ ಮಡಿಕೆಗಳ ಮಧ್ಯದ ಗೆರೆ. ಲಲಿತ ವಳಿತ್ರಯ=ಕೋಮಲವಾದ ಮೂರು ವಳಿಗಳು, ಕಿಡದೆ=ಕೆಟ್ಟುಹೋಗದೆ, ಪೊದಟ್ದು=ಹೊಮ್ಮಿ—ಹೆಚ್ಚಾಗಿ ಹೊಮ್ಮಿ, ಪಜ್ಜಳ (ತ್ಭ)—ಪ್ರಜ್ವಲ (ತ್ಸ) ಬೆಳ್ಪು...ಪಜ್ಜಳಿಸದೆ=ಮುಖ ಅತಿಯಾಗಿ ಬಿಳಿಚಿಕೊಳ್ಳದೆ, ತೆಳ್ಳಿತು ಆದ ಬಸಿಱ್—ತೆಳ್ವಸಿಱ್=ವಿ.ಪೂ.ಕ.ಸ. ಬಳೆದು ಬೀಗದೆ=ಹೆಚ್ಚಾಗಿ ಬೆಳೆದು ಉಬ್ಬಿಕೊಳ್ಳದೆ, ಕುಚಾಗ್ರ=ಮೊಲೆಯ ತೊಟ್ಟು, ಮನಂಗೊಳಿಸದೆ=ಮನಸ್ಸನ್ನು ಆಕರ್ಷಿಸದೆ, ಮುನ್ನಿನಂತೆಸೆಯೆ=ಗರ್ಭಿಣಿಯಾಗುವ ಮೊದಲಿದ್ದಂತೆಯೇ ಶೋಭಿಸಲು, ಭಾವಿಸಿ....ಬಳೆದಿರೆ=ಗೌರವದಿಂದ ಈಕೆಯನ್ನು ನೋಡುವ ಜನಕ್ಕೆ ತುಂಬ ಆಶ್ಚರ್ಯವುಂಟಾಗಿರಲು, ಉತ್ಪಲ ಪತ್ರನೇತ್ರೆ=ಕನ್ನೈದಿಲೆಯ ಎಸಳಿನಂತೆ ಮೋಹಕವಾದ ಕಣ್ಣುಳ್ಳವಳು, ಭಾವಿಸಿನೋಟ್ಪ ಜನಕ್ಕೆ ವಿಸ್ಮಯಂ ಬಳೆದಿರೆ ಉತ್ಪಲಸ್ನೇತ್ರೆಯಾ ಗರ್ಭದೊಳ್ ಅರ್ಭಕಂ ಬಳೆದಂ—ಅನ್ವಯಕ್ರಮ, ಗರ್ಭಿಣಿಯಲ್ಲಿ ಕಾಲಕಾಲಕ್ಕೆ ಆಗುವ ದೈಹಿಕ ಮಾರ್ಪಾಟುಗಳೊಂದೂ ಈಕೆಯಲ್ಲಾಗದೆ ಮೊದಲಿನಂತೆಯೇ ಇದ್ದಳು ಎಂಬುದು ಜಿನಶಿಶುವನ್ನು ಗರ್ಭದಲ್ಲಿ ಧರಿಸಿರುವ ಈಕೆಯ ವೈಶಿಷ್ಟ್ಯ. ಬಳೆ=ಧಾ—ನೋ: ಶ.ಮ.ದ. ಸೂತ್ರ ೨೧೮.

೨. ಉತ್ತಪ್ತ=ಚೆನ್ನಾಗಿ ಕಾಯಿಸಲ್ಪಟ್ಟ; ಪುಟವಿಟ್ಟ, ಕನಕರುಚಿ=ಚಿನ್ನದಕಾಂತಿ, ಶುದ್ಧಗರ್ಭವೆಂಬ ಆವಾಸ—ಮನೆ, ಆಭಾಸ—ಕಾಂತಿ, ಬೆಳೆವ=ಬೆಳಗುವ (?) 'ಶುದ್ಧ ಸ್ಫಟಿಕಾವಾಸದೊಳ್' ಎಂಬ ಪಾಠ ಯೋಗ್ಯವೇ (?) ರತ್ನದೀಪವನ್ನು ಪ್ರಕಾಶಮಾನವಾದ ಸ್ಫಟಿಕ ಶಿಲಾಪೆಟ್ಟಿಗೆಯಲ್ಲಿಟ್ಟರೆ ಅದು ಹೆಚ್ಚು ಬೆಳಗುತ್ತ ಕಂಗೊಳಿಸುವಂತೆ ಆ ಪತಿವ್ರತೆಯ ಶುದ್ಧ ಗರ್ಭಗೃಹದಲ್ಲಿ ಪುಟವಿಟ್ಟ ಚಿನ್ನದಂತೆ ಜಿನಶಿಶು ಸೊಗಯಿಸಿದನು. ಉಪಮಾಲಂಕಾರ.

೩. ಧವಳೇಕ್ಷಣೆ=ಶುಭ್ರವಾದ ನೋಟವುಳ್ಳವಳು—ವಿಜಯಸೇನಾದೇವಿ. ಬಾಧೆ—ವ್ಯಾಬಾಧೆ×ಅವ್ಯಾಬಾಧೆ. ಆಙ್ (ಆಸಮಾತಾತ್)+ಬಾಧಂ=ಹೆಚ್ಚುಬಾಧೆಗೆ ಒಳಗಾದವನು, ವಿ=ವಿಗತ, ವಿ+ಆಬಾಧಂ=ವ್ಯಾಬಾಧಂ—ವಿಶೇಷವಾದ ಬಾಧಾರಹಿತನಾದವನು. ಅವ್ಯಾಬಾಧಂ=ಯಾವ ವಿಧವಾದ ಬಾಧೆಯೂ ಇಲ್ಲದ, ಬಾಧೆಗೂ ಒಳಗಾಗದ ಜಿನಶಿಶು. ಮತಿ...ದೇವಂ=ಮತಿ

ಜ್ಞಾನ, ಶ್ರುತಜ್ಞಾನ ಅವಧಿಜ್ಞಾನಗಳು ತನ್ನೊಂದಿಗೇ ಹುಟ್ಟಿಬಂದಿರುವ ದೇವನು. ಆಗಿಪನೆ=ಆಗಿಸುವನೆ ? ತಾಯಿಗೆ ಒಂದಿಷ್ಟೂ ಗರ್ಭಬಾಧೆಯಾಗ ದಂತೆ ಜಿನಶಿಶು ಗರ್ಭದಲ್ಲಿ ನೆಲಸಿದ್ದಾನೆ.

ವ : ವಿಜಯಸೇನಾದೇವಿಗೆ ಬಂದ ಬಯಕೆಗಳು—ಜಿನಸ್ನಾನ....ಉತ್ತ ಮಾಂಗಿ=ಜಿನಬಿಂಬಕ್ಕೆ ಅಭಿಷೇಕ ಮಾಡಿಸಿದ ನೀರಿನಿಂದ—ಪ್ರಸಾದದಿಂದ ಪವಿತ್ರ ಗೊಳಿಸಲ್ಪಟ್ಟ ಶಿಶುವುಳ್ಳವಳು, ಉಪವಾಸ=ಹತ್ತಿರದಲ್ಲಿ ವಾಸಿಸುವುದು— ಆಹಾರವನ್ನು ಪೂರ್ತಾ ಅಥವಾ ಮಿತಿಯಿಂದ ಬಿಟ್ಟು, ದೇವರ ಧ್ಯಾನಾದಿಗಳಿಂದ ಇರುವುದು. ಭವ್ಯಜನ=ಜಿನಭಕ್ತರು. ವಸತಿ > ಬಸದಿ > ಬಸ್ತಿ. ಅಪ್ರತಿಮ= ಎಣೆಯಿಲ್ಲದ, ಧರ್ಮಪ್ರಭಾವನೆ=ಧರ್ಮಕಾರ್ಯಗಳ ಪ್ರಚಾರಕಾರ್ಯ, ಧವಳ ಮಂಗಳಗೇಯ=ಶುದ್ಧವೂ ಪಾಪಪರಿಹಾರಕವೂ ಆದ ಗೀತೆ. ತೀರ್ಥಾವ ಲೋಕನ=ತೀರ್ಥ—ಪುಣ್ಯಕ್ಷೇತ್ರಗಳನ್ನು—ದರ್ಶನ ಮಾಡುವುದು, ಗರ್ಭ ದೋಹಳ=ಗರ್ಭಿಣಿಗೆ ಉಂಟಾಗುವ ಬಯಕೆ, ವಿಜಯಸೇನಾದೇವಿಗೆ ಇಂತಹ ಅಸಾಮಾನ್ಯವಾದ, ಪುಣ್ಯಪ್ರದವಾದ ಬಯಕೆಗಳುಂಟಾಗಿರುವುದು ಜಿನಶಿಶು ಗರ್ಭದಲ್ಲಿರುವ ಪುಣ್ಯದಿಂದ. ಅಸಾಮಾನ್ಯನಾದ ಶಿಶು ಜನಿಸಲಿರುವಾಗ ಸಾಮಾನ್ಯ ಬಯಕೆಗಳುಂಟಾಗುವುದು ಸಾಧ್ಯವೇ ?

೪. ಭವ್ಯಜನಕ್ಕೆಲ್ಲ ಆನಂದವುಂಟಾಗುವಂತೆ ಮಾಘಶುದ್ಧ ದಶಮಿಯ ಪುಣ್ಯದಿನದಂದು, ಪ್ರಜಾಪತಿಯೋಗವು ಕೂಡಿ ಬಂದಿರಲು ರೋಹಿಣೀ ನಕ್ಷತ್ರ ದಲ್ಲಿ ಸಮುದ್ರಘೋಷಕ್ಕೆ ಸಮಾನವಾದ ಇಂದ್ರನ ವಾದ್ಯಧ್ವನಿ ಭೋರ್ಗರೆಯು ತ್ತಿರಲು ಇಕ್ಷ್ವಾಕುವಂಶವೆಂಬ ಉದಯಾಚಲದಮೇಲೆ ಅಜಿತತೀರ್ಥಂಕರನೆಂಬ ಸೂರ್ಯನ ಉದಯವಾಯಿತು. [ಅಜಿತನೆಂಬುದು ಮುಂದೆ ಈ ಶಿಶುವಿಗೆ ಬರಲಿರುವ ಹೆಸರು.] ಇಕ್ಷ್ವಾಕುವಂಶವನ್ನು ಉನ್ನತ ಶೈಲಾಗ್ರವನ್ನಾಗಿಯೂ, ಅಜಿತ ತೀರ್ಥೇಶನನ್ನು ಸೂರ್ಯನನ್ನಾಗಿಯೂ ರೂಪಣ ಮಾಡಿರುವುದರಿಂದ ಇಲ್ಲಿ ರೂಪಕಾಲಂಕಾರವಿದೆ.

೫. ದ್ವಾಸಪ್ತತಿಲಕ್ಷವರ್ಷ=ಎಪ್ಪತ್ತೆರಡು ಲಕ್ಷ ಪೂರ್ವವರ್ಷ. ಪರ ಮಾಯು=ಶ್ರೇಷ್ಠವಾದ ಆಯುಷ್ಯ; ಪೂರ್ಣಾಯುಷ್ಯ. ಅಘತ್ರಾಸಪಟು =ಪಾಪಭಯಕ್ಕೆ ಶೂರ [ನಾದ. ವೈರಿ] ನವಶತಾರ್ಧಶರಾಸನ ಮಿತದೇಹನ್=

ನಾಲ್ಕುನೂರ ಐವತ್ತು, ಬಿಲ್ಲುಗಳಷ್ಟು ಉನ್ನತವಾದ ದೇಹವುಳ್ಳವನು. ಅಪಗತ ಮೋಹಂ=ಮೋಹದೂರನು.

೬. ಪರಮೇಶ್ವರಿ=ಸಾರ್ವಭೌಮನರಾಣಿ—ವಿಜಯಸೇನಾದೇವಿ, ಅಗೆ ಪುಳಕಂಗಳಿಂ=ರೋಮಾಂಚದ ಮೊಳಕೆಗಳಿಂದ, ಏಂ ಕರಮೆಸೆದಳೋ=ಅದೆಷ್ಟು ಶೋಭಿಸಿದಳೋ! ಸುಗ್ಗಿ....ವೋಲ್=ವಸಂತ ಕಾಲದಲ್ಲಿ ಚಿಗುರಿದ ಹೊಸ ಮಾವಿನ ಬಳ್ಳಿಯಂತೆ ಮಗನನ್ನು ಪಡೆದ ತಾಯಿಯ ಸಂತೋಷವನ್ನು ಈ ಉಪಮೆ ಅಭಿವ್ಯಕ್ತಿಸುತ್ತದೆ.

೭. ಹೇತು=ಕಾರಣ, ಅಕ್ಷಯನಿಧಿ=ನಾಶವಿಲ್ಲದ—ವೃದ್ಧಿಸುವ ಸಂಪತ್ತು, ಮಗನನ್ನು ಪಡೆದ ತಂದೆಯ ಆನಂದೋತ್ಸಾಹವನ್ನು ಈ ಮಾಲೋಪಮೆ ಅಭಿವ್ಯಕ್ತಿಸುತ್ತದೆ. ಆಸನಕಂಪ=ತೀರ್ಥಂಕರನ ಪಂಚ ಕಲ್ಯಾಣಗಳೇ ಮೊದಲಾದ ಮಹತ್ತರ ಘಟನೆಗಳನ್ನು ಸೌಧರ್ಮೇಂದ್ರನಿಗೆ ತಿಳಿಸುವ ಸೂಚನೆ, ಆತ ಕುಳಿತ ಆಸನ ಕಂಪಿಸುವುದು. ಸಹಸ್ರಲೋಚನ=[ವೈದಿಕ ಪುರಾಣಗಳಂತಲ್ಲ] ದೇವೇಂದ್ರ, ಜನ್ಮಾಭಿಷೇಕ ಕಲ್ಯಾಣಪೂಜೆ=ತೀರ್ಥಂಕರನಾಗಲಿರುವ ಶಿಶುವಿಗೆ ದೇವೇಂದ್ರನು ತನ್ನೆಲ್ಲ ಪರಿವಾರದೊಂದಿಗೆ ಮಾಡುವ ಎರಡನೆ ಕಲ್ಯಾಣದ ಮಹಾಪೂಜೆ. ಇಂದ್ರಾಣಿ (ಇಂದ್ರ+ಆಣಿ)=ಇಂದ್ರನ ಪತ್ನಿ—ಶಚೀದೇವಿ. ಐರಾವಣ ಮಹಾವಾರಣ=ಐರಾವತ ಮಹಾಗಜ, ಸ್ಕಂಧ=ಹೆಗಲು, ಆರೂಢ=ಏರಿದ, ಚತುರ್ನಿಕಾಯಾಮರ=ನಾಲ್ಕುವರ್ಗ (ಭವನ, ವ್ಯಂತರ, ಜ್ಯೋತಿಷ್ಕ, ಕಲ್ಪಲೋಕವಾಸಿಗಳು) ದ ದೇವತೆಗಳು,

೮. ದಿವಿಜೇಂದ್ರ (ದಿವಿ+ಜ+ಇಂದ್ರ)=ದೇವತೆಗಳ ಒಡೆಯ—ಇಂದ್ರ, ಅನಲ=ಬೆಂಕಿ—ಅಗ್ನಿ, ಕಾಲ=ಯಮ, ಸರಿನ್ನಾಥ (ಸರಿತ್+ನಾಥ), ವರುಣ, ಅನಿಲ=ಗಾಳಿ—ವಾಯು, ಅರ್ಥೇಶ್ವರ=(ಅರ್ಥ+ಈಶ್ವರ) ಸಂಪತ್ತಿಗೆ ಒಡೆಯ—ಕುಬೇರ, ಈಶ=ಈಶಾನ, ವಿರಿಂಚಿ=ಬ್ರಹ್ಮ. ನವ ಖಂಡ =ಹೊಸದೊಂದು ಭೂಭಾಗ—ಖಂಡ, ಅಷ್ಟದಿಕ್ಪಾಲಕರು ತಮ್ಮ ತಮ್ಮ ದಿಕ್ಕುಗಳ ಭಾಗಗಳಿಂದ ತಮ್ಮ ತಮ್ಮ ವಾಹನ ಆಯುಧ ಪತ್ನಿಯರು, ಶರೀರ ಸಂಪರ್ಕವಿಲ್ಲದ ವಿಲಾಸದಿಂದ ಕಾಂತಿ ಮೂರ್ತಿಗಳು (ಕಂಗೊಳಿಸುವವರು) ಹೊರಡುವುದೂ-ವಾಯು ಮಂಡಲವು ದೇವತೆಗಳ ಸಮೂಹದಿಂದ ಹೊಸದೊಂದು ಪ್ರದೇಶವ ಬರೆಯಲ್ಪಟ್ಟಂತಾಯಿತು.

೯–೧೦. ತ್ರಿದಶ = ದೇವ, ತೂರ್ಯ್ಯಾರಾವ = ವಾದ್ಯಧ್ವನಿ, ಕಿನ್ನರೀ = ಕಿನ್ನರಸ್ತ್ರೀ, ಮನಮಂಕೊಳ್—ಮನಂಗೊಳ್ + ಇಸು = ಮನಂಗೊಳಿಸು + ಎ = ಮನಸ್ಸು ಸೂರೆಗೊಳ್ಳುವಂತೆ—ಮೆಚ್ಚುವಂತೆ ಆಗಲು, ಆನಮ್ರ ನಮಸ್ಕರಿಸಲ್ಪಟ್ಟ, ಇರ್ಪುದು + ಉಂ—ಸಮುಚ್ಚಯಾರ್ಥಕ ಪ್ರತ್ಯಯ, ಉಪಾದ್ಯ = ಗುರು ; ಉಪಾಸ್ಯ(?) ಆರಾಧಿಸಲು ಯೋಗ್ಯ, ಪಾದ್ಯಂ ಬೊಲ್ = ಪಾದ್ಯವನ್ನು ಬಿಡುವಂತೆ—ಹಸ್ತದ ಮೇಲಿಂದ [ಪಾದಗಳ ಮೇಲೆ] ನೀರನ್ನು ಹರಿಸುವುದು, ಅಚ್ಛ = ಸ್ವಚ್ಛ ರೋಚಿ = ಕಿರಣ—ಕಾಂತಿ ' ಆ ಅಮರೇಶ್ವರನ ಕಿರೀಟದ ರತ್ನಮಣಿಗಳ ಸ್ವಚ್ಛವಾದ ಕಿರಣಗಳೆಂಬ ಜಲವು ಪೂಜ್ಯನಾದ ಅಜಿತನಾಥನ ಪಾದಕಮಲಗಳಿಗೆ ಎರೆದ ಪಾದ ಪೂಜೆಯ ನೀರಿನಂತೆ ಶೋಭಿಸುತ್ತಿದ್ದಿತು ' ಅಚ್ಛ (ತ್ಸ) ಅಚ್ಚ (ತ್ಭ), ಗುಚ್ಛ (ತ್ಸ) ಕುಚ್ಚು (ತ್ಭ) ಇಲ್ಲಿ ರೋಚಿಯನ್ನು ಜಲವಾಗಿ ರೂಪಣ ಮಾಡಲಾಗಿದೆ—ರೂಪಕಾಲಂಕಾರ.

ವ : ಪೊಡೆಮಡು > ಪೊಡೆವಡು, ಭವದುರು.... ಭಗವತ್ ಅರ್ಹತ್ ಅವಲೋಕನ ಸಮಯ = ಭಗವಂತನೂ ಅರ್ಹಂತನೂ ಆಗಲಿರುವ ಶಿಶುವಿನ ದರ್ಶನ ಸಮಯ (ದಲ್ಲಿ). ಸಂ + ಉದಂಚತ್ = ಚೆನ್ನಾಗಿ ಮೇಲೆದ್ದು ಕಾಣುವ. ಕಂಚುಕಿತ = ಕಂಚುಕ (ಉದ್ದವಾದ ನಿಲುವಂಗಿ) ವನ್ನು ತೊಟ್ಟ. ಗಾತ್ರನ್ + ಉಂ = ದೇಹವುಳ್ಳವನೂ, ವಿಗಳತ್ = ಸೋರು—ಹರಿಯುತ್ತಿರುವ, ಅಶ್ರು = ಕಣ್ಣೀರು. ಧಾರಾ = ನೀರು ಒಂದೇ ಸಮನೆ ಸುರಿಯುವುದು ; ಪೂರ = ಪ್ರವಾಹ. ಪರಿಪ್ಲಾವಿತ = ತುಂಬಿದ, ಜಿನ ಶಿಶುವನ್ನು ಇಂದ್ರನು ದರ್ಶನ ಮಾಡುವಾಗ ಮೈ ರೋಮಾಂಚವಾಗಿದೆ. ಕಣ್ಣಿನಿಂದ ಧಾರೆಯ ಪೂರದಂತೆ ಆನಂದದ ಕಣ್ಣೀರು ಒಂದೇ ಸಮನೆ ಹರಿಯುತ್ತಿದೆ. ಭಾವೀ ತೀರ್ಥಂಕರ ದರ್ಶನದಿಂದ ದೇವೇಂದ್ರನಿಗೆ ಅನೇಕ ಭವಗಳ ಬಯಕೆಯು ಈಡೇರಿದಂತಾಗಿ ರೋಮಾಂಚನವಾಯಿತು ಅವನನ್ನು ಕಂಚುಕಿತಗಾತ್ರನೆನ್ನುವಂತಿದೆ ; ಇಲ್ಲಿ ಸಹಸ್ರ ನೇತ್ರನೆಂಬ ಪದ ಪ್ರಯೋಗವು ಧ್ವನಿಪೂರ್ಣವಾಗಿದೆ. ತ್ರಿಃಪ್ರದಕ್ಷಿಣಂಗೆಯ್ದು = ಮೂರುಸಲ ಸುತ್ತಿ ಬಂದು. ದೇವೇಂದ್ರನು ಜನ್ಮಾಭಿಷೇಕಕ್ಕೆ ಜಿನ ಶಿಶುವನ್ನು ಎತ್ತಿಕೊಂಡು ಹೋಗಲು ಶಚೀದೇವಿಯನ್ನು ಪ್ರಸೂತಿಕಾಗೃಹಕ್ಕೆ ಕಳುಹಿಸಿ, ಅಲ್ಲಿರುವವರಿಗೆಲ್ಲಾ ಮಾಯಾ ನಿದ್ರೆಯನ್ನು ಬರಿಸಿ, ಮಾಯಾ ಶಿಶುವೊಂದನ್ನು ತಾಯಿಯ ಪಕ್ಕದಲ್ಲಿಡಿಸಿ, ತರಿಸಿಕೊಳ್ಳುವುದು ಪುರಾಣೋಕ್ತಕ್ರಮ.

೧೧. ವಕ್ತ್ರ=ಮುಖ, ಲಕ್ಷಿತ=ಲಕ್ಷಣಗಳಿಂದ ಕೂಡಿದ, ಪಸವೋಡು ವಿಸಂ=ಕಣ್ಣ ಬಯಕೆ ತೃಪ್ತಿಯಾಗುವವರೆಗೂ. ನಡೆನೋಡು=ಚೆನ್ನಾಗಿ ನೋಡು. ಪಲ್ಲವ ಸ್ಫುರಿತ=ಚಿಗುರಿಸಂತೆ ಹೊಳೆಯುವ, ಸಮುಲ್ಲಸತ್ ಕರತಳಂಗಳಿಂ= ತುಂಬ ಸೊಗಸಾದ ಅಂಗೈಗಳಿಂದ, ಅಱ್ತಿಯೊಳೆತ್ತಿ=ಪರಮಾದರದಿಂದ ಎತ್ತಿ ಕೊಂಡು. ಪುಲೋಮ ಪುತ್ರಿ=ಪುಲೋಮನ ಮಗಳು—ಪೌಲೋಮಿ— ಶಚೀದೇವಿ.

ವ: ಅಷ್ಟಮಂಗಳ=ಎಂಟು ಬಗೆಯಾದ ಮಂಗಲದ್ರವ್ಯಗಳು- ೧. ಛತ್ರ, ಚಾಮರ, ಗಿಂಡಿ, ಸುಪ್ರತಿಷ್ಠಕ, ಕನ್ನಡಿ, ಕಲಶ, ಧ್ವಜ, ಬೀಸಣಿಗೆ; ೨. ಶ್ವೇತಚ್ಛತ್ರ, ಗಿಂಡಿ, ಧ್ವಜ, ಚಾಮರ, ತೋರಣ, ತಾಲ, ನಂದ್ಯಾವರ್ತ, ದೀಪ—ಹೀಗೆ ಎರಡು ಬಗೆಯ ಹೇಳಿಕೆಗಳಿವೆ. ಅಂಗನೆಯರ್ಕಳ್=ಅಂಗನೆ+ ಅರ್+ಕಳ್—' ಅರು ' ವಿನ ಮೇಲೆ ' ಕಳ್ ' ಆಗಮ—' ವಿಕಲಂ ಪೆಱವರೊ ಳರುವಿಂಗೆ ಕಳಾಗಮಂ ' (ಶ. ದ. ಸೂ ೧೦೦) ಸಕಲಜಗದ=ಎಲ್ಲ ಲೋಕಗಳ, ಕಯ್ಯೆಡೆ=ಕೆಯ್ಯೆಡೆ=[ರಕ್ಷಣಾರ್ಥವಾಗಿ ನಂಬುಗೆಯಿಂದ] ಕೈಗೆ ಒಪ್ಪಿಸಿದುದು ' (ಕೈ+ಎಡೆ)—(ದಾನ ?) ' ಸಕಲ ಜಗದಮೂಲ್ಯರತ್ನ ' ಎಂದು ಶಿಶುವನ್ನು ಭಾವಿಸಿರುವುದು ತುಂಬ ಸಾರ್ಥಕವಾಗಿದೆ.

೧೨-೧೩. ಜಿನಶಿಶುವನ್ನು ಕಂಡ ದೇವೇಂದ್ರನ ಸಂಭ್ರಮ—ಮಗುವನ್ನು ಎಷ್ಟೆಷ್ಟು ಬಗೆಯಿಂದ ಹೇಗೆ ಹೇಗೆ ನೋಡಿದರೂ ತೃಪ್ತಿಯಿಲ್ಲ. ಬೞಿಯಂ= ಅನಂತರ, ಎತ್ತಂ ಮನದಿಂದೆ ಅಗಲ್ಚಲ್ ಆಱದೆ=ಹೇಗೂ ಮನಸ್ಸಿನಿಂದ [ನೋಡುವ ಬಯಕೆಯನ್ನು] ಬೇರ್ಪಡಿಸಲು ಸಮರ್ಥವಾಗದೆ, ಅನಿಮಿಷನಯನ =ದೇವತೆಗಳ (ರೆಪ್ಪೆಹಾಕದಿರುವ) ಕಣ್ಣು, ವಕ್ತ್ರ ಎಂಬ ಇಂದು-ಸಂ. ಪೂ. ಕ. ಸ. ಲೋಚನ=ಕಾಂತಿ, ಕುವಲಯ=ಕನ್ನೈದಿಲೆ ' ಜಿನಪತಿಯ ಮುಖವೆಂಬ ಚಂದ್ರವು ದೇವೇಂದ್ರನ ಸಾವಿರಕಣ್ಣುಗಳೆಂಬ ನೈದಿಲೆಯ ವನವನ್ನು ಅರಳಿಸಿತು. ಇಲ್ಲಿ ರೂಪಕಾಲಂಕಾರವಿದೆ, ಅನಿಮಿಷನಯನ, ಅನಿಮಿಷಪತಿ ಎಂಬಲ್ಲಿನ ವಿಶೇಷ್ಯ ಗಳು ಸಾಭಿಪ್ರಾಯವಾಗಿರುವುದರಿಂದ ಇಲ್ಲಿ ಪರಿಕರಾಂಕುರಾಲಂಕಾರವಿದೆ.

ವ: ಆಱೆ=ತೃಪ್ತಿಯಾಗುವಂತೆ.

೧೪. ವಾರದು=ಬರುವುದಿಲ್ಲ, ಸಂಕ್ರಂದನ=ಇಂದ್ರ, ದೇವೇಂದ್ರನಿ

ಗಾಗಿ ಜಿನಶಿಶುವಿನ ಸಂಸ್ಪರ್ಶ ಸುಖದ ಆಧಿಕ್ಯವನ್ನು, 'ಜಿನಭಕ್ತಿಸುಖದ ಚಿತ್ರ' ವನ್ನು ಕಾಣಬಹುದಾಗಿದೆ.

೧೫. ವಿಲೋಕನ=ನೋಟ, ದಿವಿಜ ಮುಖವೆಂಬ ಗುಹಾಮುಖ. ಪಾರ್ದನಿ=ಮಾರುದನಿ=ಪ್ರತಿಧ್ವನಿ. ನಂದನಂದ=ಸಂತೋಷ! ಸಂತೋಷ! ರವ=ಶಬ್ದ. ಧ್ವನಿಯೊಂದು ಗುಹೆಯಲ್ಲಿ ಪ್ರತಿಧ್ವನಿಸುವಂತೆ, ದೇವೇಂದ್ರನ ಸಂತೋಷವು ದೇವತೆಗಳಲ್ಲಿಯೂ ಕಾಣಬರುತ್ತಿದೆ; ಅವರು ನಂದ! ನಂದ! ಜಯ! ಜಯ! ಎಂದು ಉದ್ಘೋಷಿಸುತ್ತ ಹರ್ಷಿಸುತ್ತಿದ್ದಾರೆ. ದೇವತೆಗಳ ಉದ್ಘೋಷವನ್ನು ಗುಹೆಯ ಪ್ರತಿಧ್ವನಿಯಾಗಿ ಸಂಭಾವಿಸುವಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

ವ: ನಿಜಗಜೇಂದ್ರ=ಐರಾವತವೆಂಬ ತನ್ನ ಆನೆ, ಬಂಧುರ=ಸುಂದರವಾದ, ಆರೂಢ=ಏರಿದ, ಅಮರೇಂದ್ರ ಗಿರೀಂದ್ರ=ಮೇರುಪರ್ವತ.

೧೬-೧೮. ತನ್ನ ವಿಕ್ರಿಯಾ ಶಕ್ತಿಯಿಂದ ಐರಾವತವು ತಳೆದ ರೂಪ ವರ್ಣನೆ; 'ಒಂದು ಭವ್ಯವಾದ ದೃಶ್ಯ ತೆರೆದುಕೊಳ್ಳುತ್ತದೆ.'—'ಮೂವತ್ತೆರಡು ಮುಖ, ಸೊಂಡಿಲುಗಳು, ಒಂದೊಂದು ಮುಖದಲ್ಲಿಯೂ ಎಂಟೆಂಟು ದಂತಗಳು, ಒಂದೊಂದು ದಂತದಲ್ಲಿಯೂ ಒಂದೊಂದು ತಾವರೆಕೊಳ, ಒಂದೊಂದು ಕೊಳದಲ್ಲಿಯೂ ಮೂವತ್ತೆರಡು ಕಮಲ ಪುಷ್ಪಗಳು, ಒಂದೊಂದು ಪುಷ್ಪದಲ್ಲಿಯೂ ಮೂವತ್ತೆರಡು ಎಸಳುಗಳು, ಒಂದೊಂದು ಎಸಳಿನ ಮೇಲೂ ಮೂವತ್ತೆರಡು ದೇವತಾಸ್ತ್ರೀಯರು ನರ್ತನ ಮಾಡುತ್ತಿದ್ದಾರೆ.' ಇದು ಸುರದ್ವಿಪದ (ದೇವಲೋಕದ ಆನೆ) ಲೀಲೆ! ಕವಿಯ ಕಲ್ಪನಾಶಕ್ತಿ ಭವ್ಯತೆಯನ್ನು ಮುಟ್ಟಿದೆ 'ಇದು ... ........ ಭೂಮ ಬಂಧುರ ಚಿತ್ರವಾಗಿದೆ.' 'ಪುಣ್ಯವಿದ್ದಷ್ಟೂ ಊಹಿಸಿಕೊಳ್ಳಿ! ಅರ್ಹತೆಗೆ ತಕ್ಕಂತೆ ಅನುಭೂತಿ!'

ವ:—ವಿಕ್ರಿಯಾ ಬಲ=ಭೂಮತೆಯನ್ನು ತಳೆಯು ಭವ್ಯಶಕ್ತಿ; ದಿವ್ಯಶಕ್ತಿ; ವಿಗುರ್ವಿಸು=ಸೃಷ್ಟಿಮಾಡು, ಅದ್ಭುತವಾದ ಶಕ್ತಿಯನ್ನು ಹೊಂದು.

೧೯. ಎರಡನೆಯದು ಈಶಾನಕಲ್ಪ; ಮೂರನೆಯದು ಸನತ್ಕುಮಾರಕಲ್ಪ; ನಾಲ್ಕನೆಯದು ಮಾಹೇಂದ್ರ ಕಲ್ಪ; ಅಲ್ಲಿನ ಅಧಿಪತಿಗಳು ಅದೇ ಹೆಸರಿನ ಇಂದ್ರರು; ಇವರು ಜಿನಶಿಶುವಿಗೆ ಕೊಡೆ ಹಿಡಿವ, ಚಾಮರವಿಕ್ಕುವ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

೨೦. ಅಜಿತೇಂದ್ರನಂ ಇತರರ್......... ..ಇಕ್ಕೆಲದೊಳ್ ಎಸೆದು ........ ವೇಷ್ಟಿಸಿ =ಸುತ್ತುಗಟ್ಟಿ, ಓಳಿ= ಸಾಲು, ಪಾಳಿ =ಸಮೂಹ, ಸಾಲು. ಪಾಳಿ ಮಹಾಧ್ವಜಂಗಳ್=ಪರಿವಾರ ಧ್ವಜಗಳು ಮತ್ತು ಮಹಾಧ್ವಜಗಳು (?) ನೋ ; ಪಾಳಿಧ್ವಜ, ಮಹಾಧ್ವಜ ಮತ್ತು ಉಪಧ್ವಜ—ಕ. ಸಾ. ಪ. ಸಂ : ೫೪—ಸಂ. ೧—ಜೂನ್, ೧೯೬೯—ಡಾ|| ಎಂ. ಚಿದಾನಂದ ಮೂರ್ತಿ.

೨೧. ದಿಕ್+ಇಭ+ಇಂದ್ರ=ದಿಗ್ಗಜಗಳ ಒಡೆಯ=ಐರಾವತ-ಜಶ್ತ್ವ+ಗುಣ ಸಂ. ಪೊರ್ದು=ಹೊದ್ದು=ಸೇರು, ತೂರ್ಯ = ವಾದ್ಯ—ತುತ್ತೂರಿ, ಬಿರ್ದು (ಕ)—ವಿರುಂದು (ತ)=ಔತನ, ಆ ಐರಾವತವು ಮೇರು ಪರ್ವತವನ್ನು ಸೇರಿದಾಗ ದೇವವಾದ್ಯ ಮೊಳಗುತ್ತಿರಲು ಕನಕಾದ್ರಿಗೆ ಖಗಾದ್ರಿ (ಒಂದು ಯಕ್ಷ ಪರ್ವತ) ಸಂತೋಷದಿಂದ ಔತಣಕ್ಕೆ ಬಂದಂತೆ ತೋರುತ್ತದೆ. ಐರಾವತಕ್ಕೆ ಅಭ್ರ ಮಾತಂಗ ಆಕಾಶದಲ್ಲಿ ಅಥವಾ ಮೋಡದಲ್ಲಿ ಸಂಚರಿಸುವ ಆನೆ ಎಂಬ ಹೆಸರಿದೆ. ಇದನ್ನೇ ಇಲ್ಲಿ ಖಗಾದ್ರಿ ಎಂದು ಸಂಭಾವಿಸಿದೆ ; ಲೋಕಪ್ರಸಿದ್ಧವಾದ ಉಪಮಾನವಾಗಲಾರದು ; ಇಲ್ಲಿ ಉಪಮಾನವಾಚಕ ಶಬ್ದವೂ ಇದೆ. ಆದರೂ ಇದು ಉತ್ಪ್ರೇಕ್ಷಾಲಂಕಾರವೇ ಆಗಿದೆ.

೨೨. ಮೇರುಪರ್ವತದಲ್ಲಿ ಒಂದರಮೇಲೊಂದರಂತೆ ನಾಲ್ಕು [ಭದ್ರಶಾಲಾ, ನಂದನ, ಸೌಮನಸ, ಪಾಂಡುಕ] ಉಪವನಗಳಿವೆ. ಸುಮೇರು—ಮೇರು—ಪರ್ವತದ ತಪ್ಪಲಿನಿಂದ ಮೇಲಕ್ಕೆ ಈ ನಾಲ್ಕು ವನಗಳೂ ಕ್ರಮವಾಗಿವೆ. ಇವುಗಳ ಸೌಂದರ್ಯದಿಂದ ಆ ಪರ್ವತ ಅತಿಶಯವಾಗಿ ಶೋಭಿಸುತ್ತಿದೆ.

೨೩. ಕಾರ್ತಸ್ವರ=ಚಿನ್ನ. ಅಜಿತನಾಥನ ಆಗಮನದ ಸಂಭ್ರಮವನ್ನು ಸುಂದರವಾಗಿ ವರ್ಣಿಸಿದೆ—' ಕಾಡಾನೆಗಳ ಧ್ವನಿಯ ಮೂಲಕ ತನ್ನ ಆನಂದೋದ್ಗಾರಗಳನ್ನು ಸೂಚಿಸುತ್ತ, ಶ್ರೇಷ್ಠವಾದ ರತ್ನರಾಶಿಗಳ ಮೂಲಕ ತನ್ನ ವಂದನಮಾಲಿಕೆಯನ್ನು ಅರ್ಪಿಸುತ್ತ, ಅಗ್ರ ಭಾಗದಲ್ಲಿ ಹರಿಯುವ ನದಿಯ ಮೂಲಕ ತನ್ನ ಧ್ವಜವನ್ನು ಹಾರಿಸುತ್ತ ಮೇರುಪರ್ವತವು ಅಜಿತನಾಥನ ಆಗಮನದ ಸಂಭ್ರಮದಿಂದ ಕಂಗೊಳಿಸಿತು.' ಕನತ್+ಮಣಿ=ಕನನ್ಮಣಿ—ಅನುನಾಸಿಕ ಸಂಧಿ. ಕನತ್=ಹೊಳೆಯುವ, ಉತ್ಪ್ರೇಕ್ಷಾಲಂಕಾರವಿದೆ.

೨೪. ಸ್ನಪನ-ಸವನ=ಅಭಿಷೇಕ, ಸವನಂ (ಸಂ.) ಬಲವರು=ಬಲಗಡೆಯಿಂದ ಸುತ್ತಿ ಬರು=ಪ್ರದಕ್ಷಿಣೆ ಮಾಡು, ಸೂಳ್=ಸಲ, ಎಂದುಂ ಕುಂದದೆ—ಇಲ್ಲಿನ ಒತ್ತನ್ನೂ ದೇವತೆಗಳ ಆನಂದ ಭಕ್ತಿಗಳನ್ನೂ ಗಮನಿಸಿ.

ವ: ಬಲಾಂತಕ=ಇಂದ್ರ, ಅಘ ಬಲಾಂತಕ=ಜಿನ; ಇಲ್ಲಿ ಜಿನನಾಗಲಿರುವ ಶಿಶು, ಬಲಾಹಕ(ಬಳಾಹಕ)=ಮೋಡ—ಮೇಘ, ಮೇಘರಾಜ=ವರುಣ, ತ್ರಿವಿಧಸೋಪಾನ (?)

೨೫. ಸುರದ್ರುಮ=ಕಲ್ಪವೃಕ್ಷ, ಪುದಿದಿರೆ=ವ್ಯಾಪಕವಾಗಿ ಹರಡಿರಲು, ಮಿಡುಕಲ್ಕೆ ಆಱದೆ=ಚಲಿಸಲಾರದೆ, ತ್ರಿವೇಣೀಕ್ರಮ (?)

ವ: ಪೂರ್ವ ದಕ್ಷಿಣದಿಗ್ವಳಯ=ಆಗ್ನೇಯದಿಕ್ ಪ್ರದೇಶ.

೨೬. ಆ ಗಿರಿಮಸ್ತಕದಲ್ಲಿ ಸಮೆದಿದ್ದ, ಅರ್ಧಚಂದ್ರಾಕಾರದ ಪಾಂಡುಕ ಶಿಲಾತಲದ ವರ್ಣನೆ—ನೂರು ಯೋಜನ ಉದ್ದ, ಐವತ್ತು ಯೋಜನ ವಿಸ್ತಾರ, ಎಂಟು ಯೋಜನ ಎತ್ತರ 'ಅಷ್ಟಮಿಯ ಚಂದ್ರಾಕೃತಿಯಲ್ಲಿ ಭೀಮ ರಮ್ಯವಾಗಿದೆ.' ಪ್ರೋಚ್ಛ್ರಿತ್=ಉನ್ನತವಾದ.

೨೭. ಆ ಪಾಂಡುಕ ಶಿಲಾತಲದಮೇಲೆ ದೇವತೆಗಳು ಅಭಿಷೇಕ ಮಂಡಪವನ್ನು ನಿರ್ಮಿಸುತ್ತಾರೆ; ಅದರ ಸ್ವಭಾವೋಕ್ತಿ ಚಿತ್ರ ಸುಂದರವಾಗಿದೆ. ಪಾಂಡುಕ –ಹಳದಿ ಮಿಶ್ರಿತವಾದ ಬಿಳಿ ಬಣ್ಣ. ಕನಕಾಭ ಭಾಸಿ=ಚಿನ್ನದಂತೆ ಹೊಳೆಯುವ, ದಂಡಿಗೆ=ಪಲ್ಲಕ್ಕಿ: ಲಂಬಣ=ಹಾರ, ಈ ಟಿಕ್ಕೊಳ್=ಅಪಹರಿಸು, ಸೆಳೆದುಕೊ, ಪ್ರತಾನ=ಸಮೂಹ, ವಿತಾನ=ಮೇಲ್ಕಟ್ಟು. ತೀರ್ಥಕರ್ತೃ=ಪುಣ್ಯವನ್ನುಂಟು ಮಾಡುವವ, ತೀರ್ಥಂಕರ, ಜಿನ, ಆಖಂಡಲ=ಇಂದ್ರ, ಮಂಡನ=ಅಲಂಕಾರ. ಜಗತ್ರಿತಯ ಮಂಡನಂ=ಮೂರುಲೋಕಗಳಿಗೂ ಅಲಂಕಾರಪ್ರಾಯವಾದುದು.

ವ: ಮಹೋತ್ತುಂಗ (ಮಹಾ ಉತ್ತುಂಗ) ತುಂಬ ಉನ್ನತವಾದ, ಅರ್ಭಕ=ಶಿಶು, ಅಭಿಮುಖನಾಗಿ ಇರಿಸಿ=ಎದುರಾಗುವಂತೆ ಕುಳ್ಳಿರಿಸಿ.

೨೮. ಸ್ಫುರಿತ ಕನಕ ಪ್ರಭಂ=ಹೊಳೆಯುವ ಚಿನ್ನದ ಕಾಂತಿಯುಳ್ಳವನು ಪಟ್ಟಕ=ಪೀಠ, ಪಾಂಡುರ=ಮಾಸಲು ಬಿಳುಪು, ಪರಮಂ=ಶ್ರೇಷ್ಠವಾದವನು, ಉಪಮಾಲಂಕಾರ–ಸಾದೃಶ್ಯ ಸಂಪತ್ತು ಹೃದ್ಯವಾಗಿದೆ.

ವ: ಶಚೀಪ್ರೇಯಸ=ಶಚಿಯಪ್ರಿಯ—ಸೌಧರ್ಮೇಂದ್ರ, ಜನ್ಮಾಭಿಷೇಕದ ಮಂಗಲ ಮಹೋತ್ಸವಕ್ಕೆ ಬೇಕಾದ ಪೂಜಾದ್ರವ್ಯಗಳನ್ನುಳ್ಳವನಾಗಿ–

೨೯. ಧರ್ಮಾಂಕುರ=ಧರ್ಮವೆಂಬ ಮೊಳಕೆ, ನೀರ್ವೊಯ್ದು=ನೀರಂ ಪೊಯ್ದು–ಕ್ರಿ. ಸ. ದೊರೆ=ಸಮಾನ, ಒಡರಿಸು=ಕೆಲಸವನ್ನು ಕೈಗೊಳ್ಳು–ಸಿದ್ಧನಾಗು, ವಿಧಿ=ಕಟ್ಟಳೆ. ಜಿನನನ್ನು ಜನ್ಮಾಂಕುರವೆಂದೂ ಜನ್ಮಾಭಿಷೇಕ

ವನ್ನು ನೀರು ಹೊಯ್ಯುವುದೆಂದೂ, ಪುಣ್ಯವನ್ನು ಫಲವೆಂದೂ, ಸುರಪತಿಯನ್ನು ವನಪಾಲಕನೆಂದೂ ಸಂಭಾವಿಸಿದೆ–ಉತ್ಪ್ರೇಕ್ಷಾಲಂಕಾರ ಸುಂದರ ಕಲ್ಪನೆ ಇದೆ.

೩೦. ಸುರಾಚಲ=ದೇವತೆಗಳ ಬೆಟ್ಟ–ಮೇರುಪರ್ವತ, ಸುರಾರ್ಣವ=ದೇವತೆಗಳ ಸಮುದ್ರ—ಕ್ಷೀರಸಮುದ್ರ. ಜಂಗಮಸೇತು=ಚಲಿಸುವ ಸೇತುವೆ, ಜಿನಶಿಶುವಿನ ಜನ್ಮಾಭಿಷೇಕವಿಧಿಗೆ ಬಾವಿ, ಸರೋವರ, ನದಿಗಳ ನೀರು ಸಾಲದಂತೆ! ಅದಕ್ಕೆ ಅಗಾಧ ಕ್ಷೀರಸಾಗರದ ನೀರೇ ಬೇಕು. ಸುರಾಚಲದಿಂದ ಸುರಾರ್ಣವದವರೆಗೆ ದೇವತೆಗಳು ಸಾಲುಗಟ್ಟಿ ನಿಂತುದು ಜಂಗಮಸೇತು ಬಂಧವೇ ಎನ್ನಿಸಿತು! ಅಷ್ಟೇಕೆ ಅದನ್ನೂ ಮೀರಿಸಿತು! 'ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕ್ಕೆ ಷಜಿವುನೀರ್ತಗವು'—ಪಂಪ.

೩೧. ಓಳಿ=ಸಾಲು, ದೇವತೆಗಳು ಎರಡು ಸಾಲಾಗಿ ನಿಂತಿರುವುದು ದೇವೇಂದ್ರ ತನ್ನೆರಡು ತೋಳುಗಳನ್ನೂ ನೀಡಿದುದನ್ನು ಅನುಕರಿಸುವಂತಿತ್ತಂತೆ! 'ಕನಕ' ಪ್ರಯೋಗ ಸೌಂದರ್ಯ ಗಮನಾರ್ಹವಾಗಿದೆ.

೩೨. ಪಂಚಮಾಬ್ಧಿ=ಐದನೆಯ ಸಮುದ್ರ–ಕ್ಷೀರಸಮುದ್ರ, ಸಮುದಗ್ರ-(ಸಂ+ಉದಗ್ರ)=ಉನ್ನತವಾದ, ಅಷ್ಟೂಮಂದಿ ದೇವತೆಗಳೂ ಮೊಗೆಮೊಗೆದು ಕೊಡುತ್ತಿರುವ ಕುಂಭಗಳು ಇಂದ್ರನ ಕೈಯಲ್ಲಿ ಶೋಭಿಸುತ್ತಿವೆ!

೩೩. ಅತ್ತ ಲೋಕೋತ್ತರವಾದ ಮುಗಿಲ ದೇವ ವಾದ್ಯಗಳ ಮಧುರ ಧ್ವನಿ; ಇತ್ತ ಜಗತ್ತಿಗೇ ಆಹ್ಲಾದವನ್ನೂ ಒಂದು ಬಗೆಯ ವಿನೋದವನ್ನೂ ಈ ಅಭಿಷೇಕ ಉಂಟುಮಾಡುತ್ತಿರುವುದಲ್ಲದೆ ಜಗತ್ತಿನ ಸಂತಾಪಹಾರಿಯೂ ಆಗಿದೆ, ಆಶ್ಚರ್ಯ!

೩೪. ಸುರಿಯೆ ಸುರವೃಂದಂ=ದೇವತೆಗಳು ಕ್ಷೀರಸಾಗರ ಜಲವನ್ನು ಸುರಿಯುತ್ತಿರಲು-ಅಭಿಷೇಕ ಮಾಡುತ್ತಿರಲು, ಉತ್ಸವ.... ಮೊದಲ್=ದೇವತೆಗಳ ಸಮೂಹವು ಈ ಉತ್ಸವವನ್ನು ಕಂಡು ತಮ್ಮನ್ನೇ ತಾವು ಮರೆಯುವುದು ಮೊದಲಾಗಿರಲು, ಮಸಗಿ ಬೊಬ್ಬಿಱಿಯೆ=ಅತಿಶಯವಾಗಿ ಉತ್ಸಾಹಗೊಂಡು ಬೊಬ್ಬೆಹಾಕಿ, ಜಯಜಯ ಧ್ವನಿ ಮಾಡುತ್ತಿರಲು, ನಿರಂತರವಾಗಿ ದಟ್ಟವಾಗಿ ಪ್ರವಹಿಸುತ್ತಿರುವ ದೇವತೆಗಳ ಪುಷ್ಪವೃಷ್ಟಿಯು ದಿಗಂತವನ್ನೆಲ್ಲ ವ್ಯಾಪಿಸಿತು. ನಿಸ್+ಸೃತ=ನಿಃ+ಸೃತ=ಪ್ರವಹಿಸುತ್ತಿರುವ. ನಿಬಿಡ=ದಟ್ಟವಾದ.

ವ: ಅಮೃತಜಲಧಿ=ಕ್ಷೀರಸಮುದ್ರ, ಅಷ್ಟ.... ಕುಂಭಂಗಳಿಂ=

ಎಂಟು ಯೋಜನ ಸುತ್ತಳತೆ, ಒಂದು ಯೋಜನ ವಿಸ್ತಾರವಾದ ಮುಖವುಳ್ಳ (ಆ ಚಿನ್ನದ ಕೊಡಗಳಿಗೆ ಹೊಟ್ಟೆಯ ಸುತ್ತಳತೆ ಎಂಟು ಯೋಜನ, ಬಾಯ ಸುತ್ತಳತೆ ಒಂದು ಯೋಜನ) ಸಾವಿರದೆಂಟು ಸುವರ್ಣಕುಂಭಗಳಿಂದ. ವಿಕ್ರಿಯಾ ಗುಣದಿಂ ವಿಗುರ್ವಿಸಿ=ವಿಕ್ರಿಯಾಶಕ್ತಿಯ ಗುಣದಿಂದ ಭವ್ಯಾಕೃತಿಯನ್ನು ತಳೆದಂ. 'ಅಣಿಮಾದಿ ಶಕ್ತಿಗಳನ್ನು ಬಳಸಿಕೊಂಡು ಅದಕ್ಕೆ ತಕ್ಕ ರೂಪನ್ನು ಧರಿಸಿಕೊಳ್ಳು ವುದಕ್ಕೆ 'ವಿಕ್ರಿಯೆ' ಎಂದು ಸಂಜ್ಞೆ; ಅವಗಾಹ=ಆಳ.

೩೬. ಶಾತ....ಕುಂಭಂಗಳಂ=ತಮ್ಮ ಹೊಳಪಿನಿಂದ ಚಿನ್ನದ ಕುಂಭ ಗಳನ್ನೂ ಮಂಕಾಗಿಸುವಂತಹ ಕುಂಭಗಳನ್ನು, ದುಗ್ಧಾರ್ಣವಸಾರಕ್ಷೀರದಿಂದಂ= ಕ್ಷೀರ ಸಮುದ್ರದ ಸಾರವಾದ (?) ಕ್ಷೀರದಿಂದ, ಭವದವಜ್ವಾಳ=ಸಂಸಾರವೆಂಬ ಕಾಡಿಗೆ ಬೆಂಕಿ, ಬಾಳ=ಬಾಲ, ಕೂಟ ವಿಟಂಕಸ್ಥಾನದೊಳ್=ಪರ್ವತ ಶಿಖರದ ಅಗ್ರಭಾಗದಲ್ಲಿ—ಶಿಖರಗಳ ಸಂದುಗೊಂದುಗಳಲ್ಲಿ, ತತ್ ಮಂದರ=ತನ್ಮಂದರ —ಅನುನಾಸಿಕ ಸಂಧಿ, ಮಹೀ ಧರ=ಪರ್ವತ. ಧಾರೆಧಾರೆಯಾಗಿ ಸುರಿಯು ತ್ತಿರುವ ಹಾಲಿನ ಪ್ರವಾಹವು ಚಂಚಲವೂ ಹೊಳೆಯುತ್ತಿರುವುದೂ ಆಗಿ ಚಂದ್ರಕಾಂತಿಯ ಬಿಳುಪನ್ನು ಆ ಬೆಟ್ಟಕ್ಕೆ ಉಂಟು ಮಾಡಿತು. ಮೊದಲೇ ಬೆಳ್ಳಿಬೆಟ್ಟ; ಈಗ ಅದು ಮತ್ತೂ ಬೆಳ್ಳಗೆ ಬೆಳಗುತ್ತಿದೆ ಎಂಬುದು ತುಂಬ ಹೃದ್ಯವಾಗಿದೆ.

೩೭. ತೀವ್ರ=ತುಂಬು, ಜನ್ಮಾಭಿಷೇಕದ ಸಂಭ್ರಮದಲ್ಲಿ 'ಇಂದ್ರನ ಬಾಹು ಸಹಸ್ರ ಅರಘಟ್ಟಘಟೀಯಂತ್ರ (ನೀರೆತ್ತುವಯಂತ್ರ)ಕ್ಕೆ ಸಮಾನ ವಾಯಿತೆಂಬ ಉಪಮಾನ ಜನಜೀವನದಿಂದ ಬಂದುದಾಗಿದ್ದು ಸುಂದರವಾಗಿದೆ.'

೩೮. ಪ್ಲವ=ಹಬ್ಬುಗೆ, ಅಂಭ=ನೀರು–ಕ್ಷೀರ, ತೇಂಕು=ತೇಲು ಮೂಡಿಮುಳುಗುತಿರ್ದಪ್ಪಂ ರವಿ ಅರ್ದಿರ್ದಪ್ಪೊಂ–ಅನ್ವಯ 'ಎಲ್ಲೆಲ್ಲಿಯೂ ಕ್ಷೀರ ಜಲ ಪ್ರವಾಹ ಕವಿಯುತ್ತದೆ; ಎಲ್ಲವೂ ಅದರಲ್ಲಿ ಮೂಡಿ ಮುಳುಗುತ್ತದೆ' ಎಂದು 'ಕ್ಷೀರ ಪ್ರವಾಹದ ಹಬ್ಬುಗೆಯನ್ನು ಕವಿ ಪರಿಣಾಮಕಾರಿಯಾಗಿ ವರ್ಣಿಸು ತ್ತಾನೆ.'

೩೯. 'ಗಿತಾ ವರ್ಷತಿ ವಾಸವ' (ಗಿರಿಯಲ್ಲಿ ಇಂದ್ರ ಮಳೆಯನ್ನು ಸುರಿ ಸುತ್ತಾನೆ) ಎಂಬುದು ಆ ಕ್ಷೀರಾಭಿಷೇಕದಿಂದ ಸತ್ಯವಾಯಿತೆಂದು ಹೇಳುತ್ತಾನೆ ಕವಿ.'

೪೦. ನಾಸಾಪುಟ=ಮೂಗಿನ ಹೊಳ್ಳೆ, ಮೇಳಿಸು=ಅಂಟಿಕೊಳ್ಳು, 'ಜಿನಶಿಶುವಿನ ಮೂಗಿನ ಹೊಳ್ಳೆಯಲ್ಲಿ ಹಾಲಿನ ಕಣಗಳು ಅಂಟಿಕೊಳ್ಳಲಾಗಿ, ಮಗು ಉಸಿರು ಬಿಟ್ಟಾಗ ದೇವತೆಗಳು ತರಗೆಲೆಗಳಂತೆ ಹಾರಿದರೆಂದು ಕವಿ ಹೇಳುವುದು ಅಷ್ಟೇನೂ ಗಂಭೀರವಾಗಿ ತೋರುವುದಿಲ್ಲ. ಶಿಶುವಿನ ಅಪ್ರಾಕೃತ ಸ್ವರೂಪವನ್ನು ಅವನು ಈ ತೆರನಾಗಿ ಪ್ರಕಟಿಸಬೇಕಿರಲಿಲ್ಲ' ಎಂಬ ಅಭಿಪ್ರಾಯವಿದೆ; ಹೀಗೆ ಭಾವಿಸುವುದು ತಪ್ಪಾಗುತ್ತದೆ. ಹಿಂದಿನ ಮತ್ತು ಮುಂದಿನ ಪದ್ಯಗಳಲ್ಲಿ ಪ್ರಯೋಗವಾಗಿರುವ ಅತಿಶಯೋಕ್ತಿಯೂ ಇದಕ್ಕೆ ಅನುಗುಣವಾಗಿದೆ ಎಂಬ ಅಭಿಪ್ರಾಯವೂ ಇದೆ. ನೋ: ಆ ಲೀಲೋಚ್ಛ್ವಾಸಮೆ ತೂಳ್ದಿದೇವರೊಡನಾ ನಾನಾ ವಿಮಾನಂಗಳಂ' [ಆ. ಪು. ೭-೯೨] 'ಆ ಮಗು ಬಿಟ್ಟ ಉಸಿರು ಅವರ [ದೇವತೆಗಳ] ವಿಮಾನಗಳನ್ನು ತೂಗಾಡುವಂತೆ ತಟ್ಟಿತು.'

೪೧. ಜಿನಪತಿಯ ಸವನಕಾಲದಲ್ಲಿ ಕ್ಷೀರಪ್ರವಾಹವು ದಟ್ಟವಾಗಿ ಹರಿದು ಬಂದು ಆಶ್ಚರ್ಯಕರವಾಗುವ ರೀತಿಯಲ್ಲಿ, ಲವಣ ಸಮುದ್ರವು ಕ್ಷೀರಸಮುದ್ರಕ್ಕೆ ಸಮನೆನಿಸುವ ರೀತಿಯಲ್ಲಿ ಮಾಡಿತು! ಇಲ್ಲಿ ಪ್ರತೀಪ ಅಥವಾ ವಿಪರ್ಯಾಸೋಪಮೆ ಎಂಬ ಅಲಂಕಾರವಿದೆ. ಲವಣ ಸಮುದ್ರವು ಕ್ಷೀರಸಮುದ್ರಕ್ಕೆ ಎಣೆಯಾಯಿತು.

೪೨. ಜಿನಪತಿಯ ಸವನದ ಜಿಡ್ಡಾದ ಹಾಲಿನಿಂದ ತುಂಬ ಜಿಡ್ಡುಗಟ್ಟಿದ ಮೇರುಪರ್ವತವು ಹಿಮವತ್ಪರ್ವತವೆಂಬ ಶಂಕೆಯನ್ನುಂಟು ಮಾಡುತ್ತಿತ್ತು. ಇಲ್ಲಿ ಸಂದೇಹಾಲಂಕಾರವಿದೆ.

೪೩. ಐದು ಪಾಲ್ಮರಂಗಳು=ಅತ್ತಿ, ಆಲ, ಬಸರಿ, ಗೋಣಿ ಅರಳಿ–ಇವೈದು ಹಾಲು ಬರುವ ಮರಗಳು [ಆದರೆ ಅತ್ತಿ, ಅರಳಿ, ಮಾವು, ಆಲ ಕಗ್ಗಲಿ, ಬಸರಿ, ನೇರಿಳೆ–ಇವನ್ನು ಬಳಸುವ ರೂಢಿ ಇದೆ] ತಿಗುಡು=ತೊಗಟೆ, ಚಕ್ಕೆ, ತಿಗುಡು+ಕಟು್=ತಿಗುಟ್ಗಳ್. ವಿಗತ ಕಷಾಯನಾದವನಿಗೆ ಕಷಾಯಾಭಿಷೇಕ!............

೪೪. ಮಳಯೋರ್ವೀರುಹ–ಮಲಯ ಪರ್ವತದಲ್ಲಿ ಹುಟ್ಟಿದ ಶ್ರೀಗಂಧ, ಗಂಧೋದಕ=ಕರಿಯ ಅಗರು, ಕಕ್ಕೋಳ, ಜಾತಿಪಲ [ಜಾಯಿಕಾಯಿ], ಜಾತಿ ಪತ್ರ (ಜಾಯಿಪತ್ರೆ), ಗೋ ಶೀರ್ಷ– (ಅರಿಶಿನದ ಬಣ್ಣವುಳ್ಳ ಚಂದನ). ಗೋರೋಜನ (ಹಸುವಿನ ಕೆಚ್ಚಲಿನಲ್ಲಿ ಉತ್ಪತ್ತಿಯಾಗುವ ಹಳದಿ ಕೆಂಪು ಮಿಶ್ರಿತ ಸುಗಂಧದ್ರವ್ಯ), ಚಂದನ (ಶ್ರೀಗಂಧ), ಲವಂಗ ಕುಂದುರುಷ್ಕ (ಕುಂದುರುಕ)–ಈ

ಸುಗಂಧ ದ್ರವ್ಯಗಳನ್ನು ಅರೆದು ಕುಂಕುಮ ಕೇಸರಿ, ಪಚ್ಚಕರ್ಪೂರಗಳನ್ನು ಮಿಶ್ರ ಮಾಡಿದುದು, ಇದಕ್ಕೆ ಹಲವು ತೀರ್ಥಕ್ಷೇತ್ರಗಳ ಜಲವನ್ನೂ ಸೇರಿಸಿ ಮಘವನು (ಇಂದ್ರನು) ಗಂಧಾಭಿಷೇಕವನ್ನು ಮಾಡಿದನು. ಇದು ಮದಿಸಿದ ಆಳಿಕುಲ ಸಮೂಹಕ್ಕೂ ಮಾಧುರ್ಯವನ್ನು ಉಂಟುಮಾಡುವಂತಹುದಾಗಿತ್ತು.

೪೫. ಪವ: ವಜ್ರಾಯುಧ, ವಿನಮತ್ ಭುವನ=ಭುವನದಿಂದ ನಮಸ್ಕರಿಸ ಲ್ಪಡುವವನು, ಅಜಿತನ ಗಂಧೋದಕಸ್ನಾನ ತೀರ್ಥದಿಂದ ಇಂದ್ರನು ಪವಿತ್ರ ಗೊಂಡ ಶರೀರವುಳ್ಳವನಾದನು, ' ಪವಿತ್ರ ' ಎಂಬ ಹೆಸರಿಗೆ ಅರ್ಹತೆಯನ್ನು ಪಡೆದನು. ದೇವ ಶ್ರೇಷ್ಠನನ್ನೂ ಪಾವನಗೊಳಿಸುವ ದಿವ್ಯಮಹಿಮೆಯನ್ನು ಆ ಅಭಿಷೇಕ ಗಂಧೋದಕದಲ್ಲಿ ಕವಿ ಪರಿಭಾವಿಸುತ್ತಾನೆ; ಭವ್ಯವಾದ ಕಲ್ಪನೆ ಇದು. ಇಲ್ಲಿ ಮಾತಿನ ಜಾಣ್ಮೆಯಿದೆ, ಶ್ಲೇಷ ಮೂಲವಾದ ಕಾವ್ಯಲಿಂಗಾಲಂ ಕಾರವಿದೆ. 'ಈ ವಿಲಕ್ಷಣ ಶ್ಲೇಷವಿ ದ್ವತ್ತಿನ ಒಣಸಕರತ್ತಲ್ಲದೆ ಮತ್ತೇನಲ್ಲ' ಎಂಬ ಟೀಕೆಯೂ ಇದೆ.

೪೬. ಈ ಅಭಿಷೇಕದಿಂದ ದೇವೇಂದ್ರನು ಮಾತ್ರವಲ್ಲದೆ ದೇವ ಪರ್ವ ತವೂ ಭುವನವೂ ಪವಿತ್ರವಾದುವು.

೪೭. ಅಷ್ಟು ಮುಂದಿ ದೇವೇಂದ್ರರು ತನ್ನನ್ನು ಅಮೃತಜಲದಿಂದ ಮೀಯಿಸಿದರೆ, ಅಜಿತನ ಅಮೃತಮಯ ದೃಷ್ಟಿಯಿಂದ ಅಮರೇಂದ್ರರು ಮಿಂದರು. ಉಪಕಾರಕ್ಕೆ ಪ್ರತ್ಯುಪಕಾರ ಮಾಡಬೇಕೆಂಬ ಲೋಕಧರ್ಮವನ್ನು ಮೆರೆದಿದ್ದಾನೆ ಕವಿ. ಅಮೃತ=ಹಾಲು; ಪುನರುಜ್ಜೀವನ ವಸ್ತು.

ವ: ಅರಾತಿ=ಶತ್ರು, ನಿರ್ವರ್ತಿಸು=ಪೂರೈಸು. ದಿವಿಜರಾಜನು ಪುಣ್ಯಜನ್ಮನಾದುದರಿಂದಲೇ ಅವನಿಗೆ ಈ ಪುಣ್ಯ ಕರ್ಮವನ್ನೆಸಗುವ ಪುಣ್ಯ ದೊರೆತುದು. ಅಪುನರ್ಜನ್ಮಲಕ್ಷ್ಮಿ=ಮತ್ತೆಹುಟ್ಟದಿರುವ (ಮೋಕ್ಷ)ಲಕ್ಷ್ಮಿ.

೪೮. ಅಭಿಷೇಕಾನಂತರ ಅಷ್ಟವಿಧಾರ್ಚನೆ—ಸುರಸಿಂಧು ಉದಕ, ಯಕ್ಷ ಕರ್ದಮ, ಲಸತ್ ಮುಕ್ತಾಕ್ಷತ, ಆಮೋದ ಬಂಧುರ ಮಂದಾರ, ಸುಧಾರ ಸಾನ್ನ, ಮಣಿಮಾಲಾ ದೀಪ್ರದೀಪ, ಅಸಿತಾಗರು, ಧೂಪ, ತ್ರಿದಶಾವನೀಜಫಲ —ಇವೇ ಅಷ್ಟವಿಧಾರ್ಚನಾವಸ್ತುಗಳು. ಸುರಸಿಂಧೂದಕ=ದೇವನದಿಯನೀರು ಯಕ್ಷ ಕರ್ದಮ=ಪಚ್ಚಕರ್ಪೂರ, ಅಗರು, ಕಸ್ತೂರಿ ಮತ್ತು ಕಕ್ಕೋಲ ಮಿಶ್ರಿ ತಲೇಪನದ್ರವ್ಯ; "ಕರ್ಪೂರಾಗರು ಕಸ್ತೂರೀ ಕಕ್ಕೋಲೈರ್ಯಕ್ಷ ಕರ್ದಮಃ"

ಆಪ್ಪೆ ನಿಘಂಟು, ಕುಂಕುಮ ಕೇಸರಿ ಮುಂತಾದ ಸುಗಂಧ ದ್ರವ್ಯಮಿಶ್ರಿತವಾದ ಶ್ರೀಗಂಧ. ಕರ್ದಮ=ಕೆಸರು (ಗಂಧ) ಲಸತ್‌ಮುಕ್ತ ಅಕ್ಷತ=ಮುತ್ತಿನಂತೆ ಹೊಳೆಯುತ್ತಿರುವ ಮೊನೆ ಮುರಿಯದ ಅಕ್ಕಿ, ಆಮೋದ ಬಂಧುರ ಮಂದಾರ= ಮನೋಹರವಾದ ಸುವಾಸನೆಯಿಂದ ಕೂಡಿದ ಸುಂದರವಾದ ಮಂದಾರದ ಹೂ, ಮಣಿಮಾಲಾ ದೀಪ್ರದೀಪ=ರತ್ನಮಣಿಮಾಲೆಯಂತೆ ಪ್ರಜ್ವಲಿಸುವ ದೀಪ, ಅಸಿತಾಗರು=ಕಾಳಾಗರು, ತ್ರಿದಶಾವನಿ (ತ್ರಿದಶರ ಅವನಿ)=ದೇವಲೋಕ.

ವ : ಪೂಜಾನಂತರ ಪಂಚಭಕ್ತಿಸ್ತೋತ್ರ ; ಮೊದಲನೆಯದೇ ಸಿದ್ಧ ಭಕ್ತಿ : ಚೈತ್ಯಭಕ್ತಿ, ಪಂಚಗುರುಭಕ್ತಿ, ಶಾಂತಿಭಕ್ತಿ, ಸಮಾಧಿಭಕ್ತಿ–ಇವೇ ಉಳಿದ ನಾಲ್ಕು, ಅಭಿಷ್ಟುತಿ=ಸ್ತೋತ್ರ.

೪೯. ಆ ಜನ್ಮಾಭಿಷೇಕೋತ್ಸವದ ಸಂಭ್ರಮವನ್ನು ಏನೆಂದು ತಾನೇ ಬಣ್ಣಿಸಲಿ ಎಂದು ಕವಿಯ ಉದ್ಗಾರ ! ಕಾರಣ—ಕನಕಾಚಲವೇ ಸ್ನಾನದ ಮಣೆ, ಕ್ಷೀರವೇ ಸ್ನಾನದ ನೀರು, ಇಂದ್ರನೇ ಸ್ನಾನ ಮಾಡಿಸುವವನು, ದೇವತೆಗಳೇ ಪರಿಚಾರಕರು, ಗಂಧರ್ವರೇ ಗಾಯಕರು, ದೇವಾಂಗನೆಯರೇ ನರ್ತಕಿಯರು. ವಜ್ರಿ=ವಜ್ರಾಯುಧವನ್ನು ಉಳ್ಳವ—ಇಂದ್ರ (ಬ. ಸ) ಮೀ=ಧಾ, ಮಜ್ಜನ +ವಳ್ಳ—ಈತ ಇದನ್ನು ನಡೆಸುತ್ತಾನೆ ಎಂಬರ್ಥದಲ್ಲಿ–ವಳ–ವಳ್ಳ ಪ್ರತ್ಯಯ ಗಳು ಸೇರುತ್ತವೆ. (ಶ. ದ. ಸೂ. ೧೯೮) ಪರಿಚಾರಕ+ಅರ್+ಕಳ್ ; ಇಂದ್ರಾಂಗನೆ+ಅರ್+ಕಳ್ 'ಅರುಘಿಂಗೆ ಕಳಾಗಮಂ ವಿಕಲ್ಪಂ' (ಶ. ದ. ಸೂ ೧೦೦) ತೀರ್ಥೋದಕ (ತೀರ್ಥ+ಉದಕ). ಬಾಲಾರ್ಕ=ಬಾಲಸೂರ್ಯ– ಭಾವೀ ತೀರ್ಥಂಕರ.

೫೦. ಉರ+ಗ+ಅಧೀಶ್ವರ=ಆದಿಶೇಷ. ಎರಡುಸಾಸಿರ=ಇರ್ಚ್ಛಾಸಿರ—ದ್ವಿಗು. ಸ. ತಣಿಯನೆ=ತೃಪ್ತಿಗೊಳ್ಳಲಾರನೆ ? ಈ ಮಹಾ ಸಂಭ್ರಮ ವನ್ನು ಆದಿಶೇಷನು ಎರಡು ಸಾವಿರ ನಾಲಿಗೆಗಳಿದ್ದೂ ಹೊಗಳಿ ತಣಿಯಲಾರ ; ಸುರೇಶ್ವರ ಸಾಸಿರ ಕಣ್ಣುಗಳಿದ್ದೂ ನೋಡಿ ತಣಿಯಲಾರ. ಇಲ್ಲಿ ವಿಶೇಷಣಗಳು ಸಾಭಿಪ್ರಾಯವಾಗಿರುವುದರಿಂದ ಪರಿಕರಾಲಂಕಾರವಿದೆ.

೫೧. ಕುಳ–ಕುಲ, ತ್ರಿಜಗತ್‌ತಿಳಕಂ=ಮೂರುಲೋಕಗಳಿಗೂ ತಿಲಕ ಪ್ರಾಯ–ಶ್ರೇಷ್ಠನಾದವನು. ಕುಳಿಶಧರಂ=ವಜ್ರಾಯುಧವನ್ನು ಹಿಡಿದವನು–

ಇಂದ್ರ. ಐಂದ್ರ=ಜನ್ಮಾಭಿಷೇಕದ ನಂತರ ದೇವೇಂದ್ರನು ಎಸಗುವ ಆನಂದ ನೃತ್ಯ; ಇದನ್ನೇ ಇಲ್ಲಿ ' ನಾಟಕ ವಿಧಿ ' ಎಂದಿದೆ.

೫೨. ಪರೀಷಹ=ಮುಕ್ತಿ ಸಾಧನೆಯ ಮಾರ್ಗದಲ್ಲಿ ಬರುವ ಬಾಧೆ. ಕೌಶಿಕ=ಇಂದ್ರ, ಆನಾಟಕ ವಿಧಿಯಲ್ಲಿ ನಾಲ್ಕು ಬಗೆಯ ಅಭಿನಯಗಳು ಪ್ರಕಟಗೊಂಡವು. ಆಂಗಿಕ (ಅಂಗಚಲನೆಗಳು), ವಾಚಿಕ (ಮಾತಿಗೆ ಸಂಬಂಧಪಟ್ಟವು), ಆಹಾರ್ಯಕ (ವೇಷಭೂಷಣಾದಿಗಳ ರಚನೆ), ಸಾತ್ವಿಕ (ರೋಮಾಂಚಾದಿಗಳ ಪ್ರದರ್ಶನ).

೫೩. ಕ್ವಣ=ಧ್ವನಿ=ಪ್ರಣಾದ, ಒರಲ್ಚಿದುವು=ಪ್ರೀತಿಯಿಂದ ಕೇಳುವಂತೆ ಮಾಡಿದುವು ತತ=ಭೇರಿ–ಚರ್ಮವಾದ್ಯ ತಂತಿವಾದ್ಯ—ವೀಣೆ (?) ಅವನದ್ಧ=ಮದ್ದಲೆ, ಘನ=ತಾಳ, ಸುಷಿರ=ಕೊಳಲು ವಂಶ=ಪಿಳ್ಳಂಗೋವಿ ಮುರಜ=ಮದ್ದಲೆ, ಈ ವಾದ್ಯ ಭೇದ ತರಂಗಳು (?) ತರಂಗಗಳು ಜನಿಯಿಸೆ ಜನಮಂ ಒರಲ್ಚಿದುವು, ಒಱಲ್ಚು=ಪ್ರೀತಿ ಹುಟ್ಟಿಸು. ತಂತಿವಾದ್ಯಗಳು, ಚರ್ಮವಾದ್ಯಗಳು, ತಾಳ ಮುಂತಾದ ವಿವಿಧ ವಾದ್ಯಗಳ ಮನೋಹರ ಧ್ವನಿಗಳು ಮೊದಲಾಗಲು ಜನರು ಮೆಚ್ಚಿ ಕೇಳುವಂತೆ ಮಾಡಿದುವು.

೫೪. ಉದ್ಭಟಂ = ಉತ್ತಮವಾದ, ಅತಿಶಯವಾದ, ಅತ್ತ= ಅಲ್ಲಿಂದಾಚೆಗೆ, ಆಲ್ಲಿಯೂಸಿಗದು (?) ನಾಟ್ಯದಲ್ಲಿನ ಪದವಿನ್ಯಾಸ, ಕರವಿನ್ಯಾಸ, ವದನ ವಿನ್ಯಾಸಗಳೂ ಒಂದೊಂದು ಭಂಗಿಯೂ ಅದಲ್ಲದೆ ಬೇರಿಲ್ಲ ಎಂಬಂತೆ ಶೋಭಿಸಿದುವು. ಶತಮುಖ=ದೇವೇಂದ್ರನ ಈ ಹೆಸರು ಜೈನ ಪುರಾಣಾಧಾರಿತವಲ್ಲ. ನೋ: ' ವಿಸ್ಮೃತಿಯ ಚೋದ್ಯ ಮತ್ತು ರೂಢಿಯ ಪ್ರಭಾವ' —ಹೆಮ್ಮಿಗೆ ದೇಶಿಕಾಚಾರ್ ಪ್ರ.ಕ. ೪೨-೧: ೧೯೬೦. ಹೀಗೆಯೆ ಬಲಾಂತಕ.

೫೫. ಭ್ರಮರಿಗುಡು=ವೃತ್ತಾಕಾರವಾಗಿ ಚಲಿಸು, ಅಸಿತರುಚಿ=ಕಪ್ಪು ಕಾಂತಿ, ಬಾಸಿಗ=ಹೂವಿನ ದಂಡೆ (?) ಕನ್ನೈದಿಲೆ=ಕನ್ನೈದಿಲೆಯ ಗುಚ್ಛವನ್ನು ಆಡಿಸಿದಂತೆ, ದುಂಡಾಗಿ ತಿರುಗುತ್ತಿದ್ದ ದೃಶ್ಯವಿದ್ದಿತು. ದೇವೇಂದ್ರನ ಅಪೂರ್ವ ನಾಟ್ಯ ವಿಳಾಸದಿಂದ ಸಭೆಯ ಮೇಲಾದ ಪರಿಣಾಮದ ಚಿತ್ರಣ ಇಲ್ಲಿದೆ. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

೫೬. ಜನ್ಮಾಭಿಷೇಕ ಕಾಲಕ್ಕೆ ದೇವೇಂದ್ರನು ವಿಕ್ರಿಯಾಶಕ್ತಿಯಿಂದ ತಳೆದ ಭವ್ಯ ಭೂಮಾಕೃತಿಯಿಂದಲೇ ಈಗ ನೃತ್ಯವಾಡುತ್ತಿರುವುದು. ಇಂದ್ರನ

ತೋಳುಗಳ ಮೇಲೆ ನಿಂತ ಸುರಕಾಂತೆಯರ ಸಾಮೂಹಿಕ ನೃತ್ಯ. ಶಿವನ ತಾಂಡವ ನೃತ್ಯದಂತೆ ಇಲ್ಲಿ ಮಘವ (ದೇವೇಂದ್ರ)ನ ತಾಂಡವ ನೃತ್ಯ. ದೇವ ವಿಲಾಸಿನಿಯರದು ವಿಲಸಿತ ಲಾಸ್ಯ. ಆಡು=ನರ್ತಿಸು, ಈ ನೃತ್ಯಲಾಸ್ಯ ಗಳೆರಡೂ ಒಟ್ಟೊಟ್ಟಿಗೇ ನಡೆಯುತ್ತಿದ್ದು ಅದೆಷ್ಟು ರಮಣೀಯವಾಗಿದ್ದಿತೋ!

೫೭. ಪರಿಣತವೃತ್ತಿ=ಅಖಂಡ-ಪಕ್ವವಾದ—ಜಾಣ್ಮೆ, ಭೂಮಂಡಲ ದಲ್ಲಿಂತೋ ಅಂತೇ ದಿಗ್ವಲಯ (ಕಕುಭರಂಗ), ವಾಯುಪಥಗಳಲ್ಲೂ ತನ್ನ ನೃತ್ಯ ಪರಿಣತಿಯನ್ನು ವಿಸ್ತರಿಸಿ, ಇಂದ್ರಜಾಲಿಗ ತನವನ್ನು ಮೆರೆಸುತ್ತಿರುವ ಇಂದ್ರ ಸರ್ವವ್ಯಾಪಿಯಾಗಿ ತೋರಿದನು. ಇದಕ್ಕೆ ಮೂಲ (?) ವೆನಿಸುವಂತಿರುವ ಆದಿ ಪುರಾಣದ ಪದ್ಯ (ನೋ : ೭-೧೨೩) ಅಲ್ಲಿ ಇನ್ನೂ ಸೊಗಸಾಗಿ ಬಂದಿರುವುದನ್ನು ನೋಡಬಹುದು.

೫೮. ಸಹಸ್ರ ನೇತ್ರನಾದ ಇಂದ್ರನು ನರ್ತನದಲ್ಲಿ ತನ್ನ ಹಸ್ತ ಪಾದಗಳ ವಿನ್ಯಾಸದಿಂದ ಸಹಸ್ರಕರನೂ, ಸಹಸ್ರಪದನೂ ಅನ್ನುವಂತೆ ವಿರಾಜಿಸಿದನು.

೫೯. ದೇವೇಂದ್ರನ ತೋಳು, ಎದೆ, ಕರತಲ, ಮಣಿ ಬಂಧ (ಮುಂಗೈ) ಅಂಗುಲಿ, ನಖಗಳ ಮೇಲೆ ಇಂದ್ರ ಸುಂದರಿಯರು ತಮ್ಮ ನರ್ತನ ವಿಲಾಸವನ್ನು ಮೆರೆದರು.

೬೦. ವಾಸವನ ನಾಟ್ಯದೆದುರು ತಾವು ಸಪ್ಪೆಯಾಗುವೆವೆಂದು ತಿಳಿದ ಊರ್ವಶಿ, ಮೇನಕಾ, ರಂಭೆಯರು ತಲೆ ತಗ್ಗಿಸಿದರಂತೆ!

ವ: ನಿಸ್ಸಂಗ=ಸಂಗದೂರನಾಗಲಿರುವವನು, ಬಾಹ್ಯ × ಅಭ್ಯಂತರ, ಅ + ಜಿತ=ಗೆಲ್ಲಲಸಾಧ್ಯ, ಸಹಜಚ್ಛಿದ್ರಕರ್ಣಂ=ಹುಟ್ಟಿನಿಂದಲೇ ಕಿವಿಯಲ್ಲಿ ಆಭರಣ-ಕುಂಡಲಿಗಳನ್ನಿಡಲು ರಂಧ್ರವಿದೆ ; ಇದರಿಂದ ಕಿವಿ ಚುಚ್ಚುವ ಕೆಲಸವಿಲ್ಲ.

೬೧. ಚರಮ=ಕಡೆಯದಾದ, ಔದಾರಿಕ ಶರೀರಂ=ಮಹತ್ವದಿಂದ ಕೂಡಿದ ಶರೀರ. ಉತ್+ಜ್ವಲ=ಅತಿಶಯವಾಗಿ ಹೊಳೆಯುವ—ಶ್ಚುತ್ವ ಸಂಧಿ. ಇಲ್ಲಿ ಸುಂದರವಾದ ಉಪಮಾಲಂಕಾರವಿದೆ.

೬೨. ಜನ್ಮಾಭಿಷೇಕವನ್ನು ಮಾಡುವ ಸಲುವಾಗಿ ಶಿಶುವನ್ನು ಮಂದರ ಗಿರಿಗೆ ಒಯ್ದಿದ್ದ ದೇವೇಂದ್ರನು ಅಭಿಷೇಕಾನಂತರ ಆಲಂಕರಿಸಿ ನಾಮಕರಣ ವನ್ನು ಮಾಡಿ, ಆನಂದ ನೃತ್ಯವನ್ನೆಸಗಿ ಅಯೋಧ್ಯೆಗೆ ಹಿಂದಿರುಗಿ ತಂದೆ ತಾಯಿ ಯರಿಗೊಪ್ಪಿಸಿ, ಅವರನ್ನೂ ಪೂಜಿಸಿದ್ದಾನೆ. ಗುರುಜನ—ತಂದೆ ತಾಯಿಯರು,

ಸ್ರಕ್+ರಾಜಿ=ಸ್ರಗ್ರಾಜಿ—ಹೂಗೊಂಚಲು—ಜಸ್ತ್ವಸಂಧಿ, ಸ್ರಕ್=ಪುಷ್ಪ ಮಾಲೆ. ಪೂರ್ಣಕ್ರಿಯಾಪದವಿಲ್ಲ.

ವ: ತಾನು ಶಿಶುವಿಗೆ ಎಸಗಿದ ಮಂಗಲ ಕಾರ್ಯಗಳನ್ನು ಬಿನ್ನವಿಸಿ, ತಂದೆ ತಾಯಿಯರ ಸನ್ನಿಧಿಯಲ್ಲಿ ಮತ್ತೆ ಆನಂದನೃತ್ಯ ಮಾಡುತ್ತಾನೆ. ಸನ್ನಿಭ= ಸದೃಶ.

೬೩. ಸವನಿಸು—ಸಮನಿಸು=ಒದಗಿಬರು, ಜಿತಶತ್ರುವಿನ ಮನೆಯಲ್ಲಿ ದೇವತೆಗಳೂ ಮಾನವರೂ ಕೂಡಿ ಆನಂದ ನೃತ್ಯವನ್ನು ಮಾಡಿದುದು ಇಲ್ಲಿನ ವೈಶಿಷ್ಟ್ಯ.

೬೪. ನಮೇರು=ಸುರಗಿ? ಸಂತಾನಕ, ನಮೇರು, ಮಂದಾರ, ಪಾರಿಜಾತ ಮುಂತಾದ ದೇವಲೋಕದ ಪುಷ್ಪ ಸಮೂಹಗಳಿಂದ ರಂಗಮಧ್ಯದಲ್ಲಿ ನಿಂತು ಜಿನಶಿಶುವಿಗೆ ಪುಷ್ಪಾಂಜಲಿಯನ್ನು ಮಾಡಿದನು, ಪ್ರಕರ=ಸಮೂಹ ರಾಶಿ, ಪುಷ್ಪಾಂಜಲಿ=ಕೈಬೊಗಸೆಯ ತುಂಬ ಹೂವನ್ನು ತೆಗೆದುಕೊಂಡು ಭಕ್ತಿ ಪುರಸ್ಸರವಾಗಿ ದೇವರ ಪಾದಗಳಲ್ಲಿ ಎರಚುವುದು.

ವ: ಭರತದ=ನಾಟ್ಯಶಾಸ್ತ್ರದ, ಪ್ರತ್ಯಕ್ಷಂ ಮಾಡಿದಾಗಳ್=ತನ್ನ ನಾಟ್ಯದಿಂದ ಅದೆಲ್ಲವನ್ನೂ ಕಣ್ಣಿಗೆ ಕಟ್ಟುವಂತೆ ಮಾಡಿದ್ದಾನೆ. ಆ ನಾಟ್ಯದ ವಿವರಗಳನ್ನು ಕೊಟ್ಟಿದ್ದಾನೆ. ನಾಟ್ಯ ಮತ್ತು ಸಂಗೀತ ವರ್ಣನೆಗಳನ್ನು ಕಾಣು ತ್ತೇವೆ. ಇಲ್ಲಿ ಸಹೃದಯನಾದ ಓದುಗ ಕವಿಗೆ ಸಾಹಿತ್ಯ ಶಾಸ್ತ್ರಗಳಲ್ಲಿ ಮಾತ್ರ ವಲ್ಲದೆ ಇತರ ಲಲಿತ ಕಲೆಗಳಲ್ಲೂ ಇರುವ ಪಾಂಡಿತ್ಯ ರಸಜ್ಞತೆಗಳನ್ನು ಗಮನಿಸ ಬೇಕು. ಆ ಕಾಲಧರ್ಮವನ್ನು ಪರಿಭಾವಿಸಬೇಕು. ಇದು ಯಾರನ್ನಾದರೂ ದಿಗ್ಭ್ರಮೆ ಗೊಳಿಸುತ್ತದೆ.

೬೫. ಕೇರಿ=ಸಮೂಹ (?) ಬೀದಿ, ಓಣಿ, ದೇವೇಂದ್ರನೊಂದಿಗೆ [ಈ ಹಿಂದಿನಂತೆ] ದೇವ ನರ್ತಕಿಯರೂ ಕೂಡಿ ನರ್ತಿಸಿದರು. ದೊರೆಯ ಆಸ್ಥಾನದ ರಂಗಮಂದಿರ ನಾಟ್ಯಪಾಡುವವರ ಕೇರಿಯೋ ಎಂಬಂತೆ ಭಾಸವಾಗುತ್ತಿತ್ತು. ಓಜೆ=ಕ್ರಮ, ರೀತಿ. ಬಿಡೌಜ=ಇಂದ್ರ. ದೇವೇಂದ್ರನೆ ನರ್ತಿಸುತ್ತಿರುವಾಗ, ದೇವಸ್ತ್ರೀಯರು ಸುಮ್ಮನಿರಲಾದೀತೇ?

೬೬. ಇಂತಹ ಕೂಟ ಸುಪಥವಲ್ಲದೆ, ಕುಪಥವಾಗಲಾದೀತೇ?

ವ: ಮಾರ್ಗ=ಅಭಿನಯದ ಪ್ರೌಢಿಮೆ, ದೇಸಿ=ಪ್ರಾಂತೀಯ ರೀತಿ.

ಭಾವ ಪ್ರಧಾನವಾದ ನೃತ್ಯವು 'ಮಾರ್ಗ'; ತಾಲ ಲಯಾಶ್ರಯವಾದ ನೃತ್ಯವು 'ದೇಸಿ', ಮೃದು ಮತ್ತು ಉಗ್ರ ಭೇದದಿಂದ 'ಲಾಸ್ಯ' ಮತ್ತು 'ತಾಂಡವ' ಎಂದು ಎರಡು ವಿಧ–ಮೃದು ನರ್ತನವು 'ಲಾಸ್ಯ' ಉಗ್ರ ನರ್ತನವು ತಾಂಡವ; ಇಲ್ಲಿ ದೇವತಾ ಸ್ತ್ರೀಯರದು ಲಾಸ್ಯ ನೃತ್ಯ, ದೇವೇಂದ್ರನದು ತಾಂಡವನೃತ್ಯ.

೭೭. ದೇವೇಂದ್ರನು ಜಿನೋತ್ತಮನಾಗಲಿರುವ ಶಿಶುವಿಗೆ ಮನಸಾ ಪಂಚ ಕಲ್ಯಾಣ ಮಹಿಮೆಯನ್ನು–ಎರಡನೆಯದಾದ ಜನ್ಮಾಭಿಷೇಕೋತ್ಸವವನ್ನು ಮಾಡಿದ್ದಾನೆ. ಲಘು ಕರ್ಮನಾದಪೊಂ=ಕರ್ಮಕ್ಷಯಗೊಂಡವನಾಗುತ್ತಾನೆ. ಧರ್ಮಾನುರಾಗಿಗೆ ಈ ಲೋಕದಲ್ಲಿ ಒದಗದಿರುವುದು ಎಂಬುದೂ ಉಂಟೆ? ಇಲ್ಲಿ ಅರ್ಥಾಂತರನ್ಯಾಸಾಲಂಕಾರವಿದೆ.

೭೮. ಇಂದ್ರನು ಸಹಸ್ರಲೋಚನನಾದುದಕ್ಕೆ ಜೈನ ಪುರಾಣಗಳು–ಅಂತೆಯೇ ಕವಿ ಕೊಡುವ ವಿವರಣೆ ಇದು. ಇಲ್ಲಿ ಕಾವ್ಯಲಿಂಗಾಲಂಕಾರವಿದೆ.

೭೯. ಮುಯ್ಪು=ಭುಜ, ತನ್ನ ಮಗನಿಗಾಗಿ ದೇವೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಮಾಡಿದ ನೃತ್ಯವನ್ನೂ ನಮಸ್ಕಾರ ಮಾಡುತ್ತಿರುವುದನ್ನೂ ಜಿತಶತ್ರುಮಹಾರಾಜನು ನೋಡಿ ಹೆಮ್ಮೆಯಿಂದ ತನ್ನೆರಡು ಭುಜಗಳನ್ನೂ ನೋಡಿಕೊಂಡನು.

೮೦. ತಾಯ್ತನ, ಸಹಜವಾದ ಮಮತೆ, ಪುತ್ರವಾತ್ಸಲ್ಯ, ರಾಣಿಗಾದ ಸಂತೋಷ, ಅದನ್ನು ಅವಳು ವ್ಯಕ್ತಪಡಿಸಿರುವ ರೀತಿ, ಎಳವಿ (ಎಳವು–ಧಾ)=ಲಜ್ಜಾಭರದಿಂದ ಉಂಗುಷ್ಟವನ್ನು [ನೆಲಕ್ಕೆ] ಸವರುತ್ತಾ

೮೧. ತಾಯ್ತನ ಸಹಜವಾದ ಮಮತೆ; ಪುತ್ರವಾತ್ಸಲ್ಯ. ಕಣ್+ಎಱಕ=ಕಣ್ಣಿನ ಪ್ರೀತಿ, ಗಿಱು=ಭಾವಿಸು, ಗಿರು=ಎಣಿಸು, ಗೆತ್ತು=ಭೂತನ್ಯೂನ, ಆಸ್ಥಾಯಿಕೆ=ಆಸ್ಥಾನ, ಕೂರ್ತು (ಕೂರ್-ಧಾ)=ಪ್ರೀತಿ. ಕಣ್ಣೆಸರಾದೀತೆಂಬ ಭಯದಿಂದ 'ಉಃಪಿರಿ'ಯಲು ಇಚ್ಚಿಸಿ, ತಾನಿರುವೆಡೆಯನ್ನೂ ತನ್ನ ಶಿಶು ಜಿನೋತ್ತಮನೆಂಬುದನ್ನೂ ನೆನೆದು ಬಹು ಕಷ್ಟದಿಂದ ತಡೆಹಿಡಿದಳು!

೮೨. ತಾಯ್ತನದ ಪರಾಕಾಷ್ಠೆಯನ್ನು, ಮನೋಜ್ಞ ಚಿತ್ರಣವನ್ನು ಇಲ್ಲಿ ಕಾಣುತ್ತೇವೆ. ತೊಱೆ=ತುಂಬು (?) ಅಂಬು+ಇಱೆ+ಬಿಟ್ಟು=ಹನಿ

ಹನಿಯಾಗಿ ಬಿದ್ದು—ಅರಿಸಮಾಸ. ತೊರೆ=ಸೋರೆಬಿಡು. ಬಿಜೀಬಿಡು<ಬಿಜೀವಿಡು =ಸಡಿಲಗೊಳ್ಳು. ನೋ: ಬಿಗಿದ ಕೆಚ್ಚಲ ತೊರೆದೊಗುವ ಹಾಲುಗಳ........ (ಕು. ವ್ಯಾ. ಭಾ. ಪ. ೪. ಸಂ. ೭ ಪ. ೫೦) ದೇವೇಂದ್ರ ಮಾಡಿದ ಸ್ನಾನ ಸಾಲ ದೆಂಬಂತೆ, ತಾಯಿ ಸ್ನಾನ ಮಾಡಿಸುವಂತಾಯಿತು. ಕುಚಕಲಶ—ರೂಪಕ.

ವ; ಉಪಸಂಹೃತಿ=ಉಪಸಂಹಾರ; ಅವಸರ=ಸಮಯ-ಸಂದರ್ಭ.

೭೩. ಉಗಿಬಗಿಯಾಗು = ಹೊಯ್ದಾಡು, ಕಕ್ಕಾಬಿಕ್ಕಿಯಹಾಗು. ದೇವೇಂದ್ರನು ಜಿನನನ್ನು ಅಗಲಲಾರದ ಸ್ಥಿತಿ, ಮಗುಟ್ದು=ಹಿಂದಿರುಗಿ ಮಗುಳೆ=ಮತ್ತೆ. ಮೇಲಿನ ಮೂರೂ ಪದ್ಯಗಳಲ್ಲಿ ಭಾವ ಹೃದಯಸ್ಪರ್ಶಿ ಯಹಾಗಿದೆ; ಕವಿತೆ ಹರಿದಿದೆ.

೭೪. ದೇವೇಂದ್ರನು ದೇವನ ಚರಣಗಳನ್ನೇ ಸೇವಿಸಿಕೊಂಡಿರುವ ನಿಶ್ಚಯವನ್ನು ಮಾಡುತ್ತಾನೆ. ಇಲ್ಲಿ ಆತನ ಭಕ್ತಿ ನಿರ್ಭರತೆಯನ್ನು ಕಾಣಬಹು ದಾಗಿದೆ.

೭೫. ಸುರಮಂತ್ರಿ=ಲೋಕಾಂತಿಕದೇವ (?) ಕಲ್ಯಾಣಗಳಿನ್ನೂ ಉಳಿ ದಿವೆ; ಮತ್ತೆ ಬರೋಣ ಎಂದು ಎಚ್ಚರಿಸಿದರು. ಆಗ ಅಜಿತನನ್ನು ತನ್ನ ಹೃತ್ಪದ್ಮದಲ್ಲಿ ತಾಳ್ದಿ ಒಲ್ಲದ ಮನದಿಂದ, ಕರ್ತವ್ಯ ದೃಷ್ಟಿಯಿಂದ ಸ್ವರ್ಗಕ್ಕೆ ತೆರಳಲನುವಾದನು. ಇಲ್ಲಿನ ಮಾತುಕತೆ—ಸಂಭಾಷಣೆ ತುಂಬ ಸಹಜವಾಗಿದೆ.

## ಪರಿನಿಷ್ಕ್ರಮಣ ಕಲ್ಯಾಣಂ

೧. ಜಿನಶಿಶುವಿನ ಬಾಲ್ಯ, ಬೆಳವಣಿಗೆ—ಶಿಶು ಎಲ್ಲ ಮಕ್ಕಳಂತೆಯೇ ಬೆರಳು ಚೀಪುತ್ತಾನೆ. ಆದರೆ ಕವಿ ಅದಕ್ಕೊಂದು ವಿಶೇಷ ಕಾರಣವನ್ನು ಕೊಡುತ್ತಾನೆ—ದೇವೇಂದ್ರ ಮಗುವಿನ ನಡುಬೆರಳಿನಲ್ಲಿ ಅಮೃತ ಸ್ರವಿಸುವಂತೆ ಮಾಡಿದ್ದಾನೆ ಎಂದು. ಸಂಕ್ರಮಣ=ಸೇರು. ಗಳಂ=ಗಡಂ.

೨. ಗಾಡಿ=ಸೌಂದರ್ಯ, ಲೋಳೆವಾಯ್=ಜೊಲ್ಲು ಸುರಿಯುವ ಬಾಯಿ, ಮಂಡನ=ಅಲಂಕಾರ, ರಕ್ಕೆ=ರಕ್ಷೆ. ರಕ್ಕೆಮಣಿ—ರಕ್ಷೆಗಾಗಿ ಕಟ್ಟುವ ಮಣಿ, ಅಂದುಗೆ=ಕಾಲಿನ ಕಡಗ, ಕಾಲಂದುಗೆ, ಮನಂಗೊಳ್=ಮನಸ್ಸನ್ನು ಆಕರ್ಷಿಸು—ಮನಮಂಕೊಳ್=ಕ್ರಿ. ಸ. ಮಗುವಿಗೆ ತೊಡಿಸುತ್ತಿದ್ದ ಒಡವೆ

ಗಳು, ಮಾಡುತ್ತಿದ್ದ ಅಲಂಕಾರಗಳು ಒಪ್ಪುವಂತಹವೇ ಆಗಿದ್ದುವು. ಸ್ವಭಾವೋಕ್ತಿ ಅಲಂಕಾರ.

೩. ವದನ ಪದ್ಮಾವಾಸ=ವದನ ಪದ್ಮವೇ ಆವಾಸ—ಅವಧರಣಾ ಪೂ. ಪ. ಕ. ಸ. ಅವ್ಯಕ್ತವಚಸ್ಸ್ವಭಾವ=ತೊದಲಮಾತು. ತತ್+ನ+ ದೋಷಂ=ತನ್ನದೋಷಂ—ಅದು ದೋಷವಲ್ಲ. ಇದು ಧರ್ಮದ ಮೊಳಕೆ. ಆ ದೇವಿಗೆ ಪುಣ್ಯಾಂಕುರ ಎನ್ನುವಂತೆ ಹಲ್ಲುಗಳು ಮೊಳೆತವು ಎಂಬಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

೪. ಚೋದ್ಯ=ಅಚ್ಚರಿ, ಪೇಟೆಂಬ=ಹೇಳು ಎನ್ನುವೆಯಾ? ಕವಿಯೊಂದಿಗೆ ನಾವೂ ಅಚ್ಚರಿಪಡುವೆವಲ್ಲವೆ? ಕಾರಣವಿಲ್ಲದೆ ಕಾರ್ಯವಾಯಿತು ಎಂಬಲ್ಲಿ ವಿಭಾವನಾಲಂಕಾರವಿದೆ.

೫. ಹಿಂದಿನ ಜನ್ಮದ ಎಲ್ಲ ವಿದ್ಯೆಗಳೂ ಹೇಗೆ ಮತ್ತೆ ಬಂದು ನೆಲೆಸಿದವೆಂಬುದನ್ನು ಚಿತ್ರಿಸಿದೆ. ಉಪಮಾಲಂಕಾರವಿದೆ.

೬. 'ತನಗೆ ತಾನೇ ಗುರು'—ವಿದ್ಯಾಗುರುವಾಗಲಿ, ದೀಕ್ಷಾಗುರುವಾಗಲಿ ಸಂಭವಿಸುವುದಿಲ್ಲ. ಕಾರಣ—ಅವಧಿಜ್ಞಾನ, ಮತಿಜ್ಞಾನ, ಶ್ರುತಜ್ಞಾನಗಳನ್ನೂ ಎಲ್ಲ ತತ್ವಗಳನ್ನೂ ತಿಳಿದವನಾಗಿದ್ದನು. ಅವಗತ=ಚೆನ್ನಾಗಿ ತಿಳಿದ. ಸಂಭವಿಸನುಮೆನೆ=ಸಂಭವಿಸಂ+ಉಂ+ಎನೆ— 'ಉಂ' ಕ್ರಿಯಾಪದದೊಂದಿಗೆ ಸೇರಬಾರದು.'

೭. ಈ ತೀರ್ಥಕರನ ಪುಣ್ಯವು ಅಗಣ್ಯ. ಜೀವಾದಿ ಪದಾರ್ಥ=ಜೀವ, ಅಜೀವ, ಆಸ್ರವ, ಸಂವರ, ನಿರ್ಜರಾ ಮೋಕ್ಷಗಳೆಂಬ ಆರು ಪದಾರ್ಥಗಳು—ಆತ್ಮವಿದ್ಯೆ. ದೇವನಂ ಬಲಗೊಳೆ ಭವ್ಯಾವಳಿಗೆ ವಿದಳಮಕ್ಕುಂ, ವಿದಳ= ದಳ ತೆರೆವುದು—ಸ್ಪಷ್ಟ.

೮. ದಾರಕರೂಪ=ಶಿಶುರೂಪ, ವೃಂದಾರಕ=ದೇವತೆ, ದುರಿತ ವಿದಾರಕ=ಪಾಪವನ್ನು ನಾಶಮಾಡುವವನು. ಇವನ ಬಾಲಲೀಲೆಗಳೂ ಸ್ವರ್ಗೀಯವಾಗಿದ್ದುವೆನ್ನಬಹುದ? ಯಮುಕಾಲಂಕಾರ.

೯. ಮೃಗಮದ=ಕಸ್ತೂರಿ, ಚೆಚ್ಚರಂ=ಚಟುವಟಿಕೆಯಿಂದ, ಪೋಗಿ ತರವೇಳ್—ಪೋತರವೇಳ್, ತರಲ್+ಪೇಳ್=ತರವೇಳ್—ಅಲುವಿನ ಲೋಪಕ್ಕೆ ಉದಾಹರಣೆ (ಶ.ದ.ಸೂ. ೭೩೫). ಜಿನಬಾಲಕನ ಶೃಂಗಾರ ಸಾಧನಗಳನ್ನು

ಆದಷ್ಟೂ ತ್ವರೆಯಿಂದ ತರಿಸಿಕೊಳ್ಳುವ ಪ್ರಯತ್ನ ಇಲ್ಲಿ ತರವೇಳ್ ಪೋತರವೇಳ್, ನೀಂತರವೇಳ್‌ಗಳಿಂದ ಕಾಣುವಂತಿದೆ.

೧೦. ಉಪರೋಧ=ಒತ್ತಾಯ, ಅನಿವಂಗೆಯ್=ಒತ್ತಾಯ ಮಾಡು [ ಅನಿವ+ಗೆಯ್ (<ಕೆಯ್). ಮಗುವಿಗೆ ತನ್ನ ವಯೋನುಗುಣವಾದ ಯಾವ ಸಂತೋಷದ ಕಡೆಗೂ ಮನವಿಲ್ಲ. ಸ್ನಾನಾದಿಗಳೊಂದೂ ಬೇಕಿಲ್ಲ. ತಂದೆ ತಾಯಿಯರ ಒತ್ತಾಯಕ್ಕಾಗಿ ಒಪ್ಪುತ್ತಾನೆ. ದೇವನು ಅದೆಷ್ಟು ನಿರ್ಲಿಪ್ತನೋ!

ವ: ಅಷ್ಟಾದಶಲಕ್ಷಪೂರ್ವ=ಹದಿನೆಂಟು ಲಕ್ಷ ವರ್ಷಗಳು, ಕುಮಾರ ಕಾಲ=ಐದುವರ್ಷಕಾಲ.

೧೧. ಆನಂದನ=ಸಂತೋಷವನ್ನುಂಟುಮಾಡುವ, ವಿಶದ=ಮೇಘ ರಹಿತ, ಶರತ್‌ಚಂದ್ರ=ಶರಶ್ಚಂದ್ರ=ಶರತ್ಕಾಲದಚಂದ್ರ—ಶ್ಚುತ್ವ ಸಂಧಿ, ಭೂಮಂಡಲ ರಾಜ್ಯಭಾರ ಸಮರ್ಥನಾಗಿ ಆನೆಯ ಸೊಂಡಿಲಿನ ಆಕಾರದ ಶೋಭಾಯಮಾನವಾದ ಕರಗಳು, ಯೌವನದ ಲಕ್ಷ್ಮಿಯ ಕ್ರೀಡಾಪರ್ವತ ಸದೃಶವಾದ ಭುಜಗಳು, ಮೋಕ್ಷ ಲಕ್ಷ್ಮಿಯ ಹೊಳೆಯುವ ಚಿನ್ನದ ಸೊಬಗಿನ ಮಂದಿರ ಶ್ರೀನಿಲಯವೇ ವಿಶಾಲ ವಾದವೆದೆಯುಳ್ಳವ. ಶ್ರೀವಧೂ= ಲಕ್ಷ್ಮಿ. ಶುಂಭತ್=ಹೊಳೆಯುತ್ತಿರುವ, ಇಂಥ ತಾರುಣ್ಯದಲ್ಲಿಯೂ ಮೋಕ್ಷದ ಬಯಕೆ ಸದಾ ತುಂಬಿತ್ತೆಂದರೆ ಅವನ ಹಿರಿಮೆ ಎಂಥದೆಂಬುದನ್ನು ಕಾಣಬಹು ದಾಗಿದೆ. ಮಾಲಾರೂಪಕಾಲಂಕಾರವಿದೆ.

೧೨. ದಿವ್ಯಸೌಂದರ್ಯ, ದೇಹಕಾಂತಿ, ಕಟಾಕ್ಷವೀಕ್ಷಣೆ, ಮುಗುಳ್ನಗೆ ಮೋಹಕವಾದ ನಡೆ, ಮಂಜುಳ ಸ್ವರ, ಗಾಂಭೀರ್ಯ—ಈ ಮುಂತಾದುವುಗಳಿಂದ ಸುಂದರ ಯುವತಿಯರ ಮನವನ್ನು ತನ್ನತ್ತ ಸೆಳೆದುಕೊಂಡನು.

ವ: ಮಂತಣ=ಆಲೋಚನೆ, ವಿಚಾರ, ಒಡಂಬಡನೆ ಎಂದು= ಒಡಂಬಡನೆಂದು, ತತ್ತಪಣಂ ಗೆಯ್=ತತ್ತುಪೆಣಂ ಗೆಯ್=ಜೊತೆ ಗೊಳಿಸು (?) ತತ್ತವಣೆ=ಹಂಚಿಕೆ, ಉಪಾಯ, ತತ್ತವಣೆ>ತತ್ತುಪಣೆ, ತತ್ತವಣೆಗೆಯ್ (ತತ್ತಪಣೆ+ಕೆಯ್)=ಹಂಚಿಕೆಹಾಕು ಉಪಾಯಮಾಡು, ತಥ್ಯ (ತ್ಸ)-ತತ್ತ (ತ್ಬ) ಈ ಪಾಠ ಸಂದರ್ಭಕ್ಕೆ ತುಂಬ ಹೊಂದಿಕೆಯಾಗುತ್ತಿದೆ.

೧೩. ಮಾತಿಗೆ ಮೊದಲಿಡುವ ರೀತಿ ತುಂಬ ಸಹಜವಾಗಿದ್ದು ಚೆನ್ನಾ ಗಿದೆ. ಲೋಕವ್ಯಾಪಾರ ನಡೆದ ದಾರಿಯಲ್ಲೇ ನೀನೂ ನಡೆ; ಆ ಪುಣ್ಯ ನಿನ್ನ

ದಾಗಲಿ ಎಂದು ಅಳುಕುತ್ತಾ ಪೀಠಿಕೆ ಹಾಕಿಕೊಂಡು ಆದಿಜಿನನು ನಡೆದಂತೆಯೇ ನೀನೂ ನಡೆದರೆ ಅದರಲ್ಲಿ ದೋಷವೇನು ? ಎಂದು ನಿದರ್ಶನವನ್ನಿತ್ತು ಪ್ರಶ್ನಿಸು ತ್ತಾನೆ. ಇಲ್ಲಿ ಮಾತಿನ ಜಾಣ್ಮೆಯನ್ನು ಗಮನಿಸಬೇಕು ; ಮದುವೆ ಎಂಬ ಮಾತೇ ಇಲ್ಲ.

೧೪. ಬಹುಶಃ ಅವನ ಮೌನವನ್ನು ಕಂಡೇ ಮದಂಪೆಯ ಮಾತಿಗೆ ತೊಡಗುತ್ತಾರೆ ; ಹಿರಿಯರ ಬಯಕೆಯ ಸುಂದರ ಚಿತ್ರ ಇಲ್ಲಿದೆ. ಒಸೆ=ಪ್ರಸನ್ನ ವಾಗು. ಬೇಟ್ಪುದೆ=ಇಷ್ಟಪಡುವೆಯಾ ? (ಬೇಡು+ವ) ಅರ್ತಿಗರ್= ಪ್ರೀತಿಯುಳ್ಳವರು, ವೆಱಂ=ನಿಶ್ಚಯವಾಗಿ, ನೋಟ್ಪೆವೆ=ಒಪ್ಪಿಗೆಯನ್ನು ಎದುರು ನೋಡೋಣವೇ ? ಚೈತ್ರ್ಯ[ತ] ಶಾತ್ರವ=ಕರ್ಮಶತ್ರು ಸಮೂಹ ವನ್ನು ಗೆದ್ದವನು, ಆತನ ಮಂದಹಾಸದ ಮುಖವೇ ಇವರಿಗೆ ಒಪ್ಪಿಗೆಯ ಸೂಚಕವಾಯಿತು.

'ಆತ ಯಾವ ಪ್ರತಿಭಟನೆಯನ್ನೂ ವ್ಯಕ್ತಪಡಿಸುವುದಿಲ್ಲ. ಇದು ಅಸಹಜ ವಲ್ಲವೆ ಎನಿಸಬಹುದು. ಆದರೆ ಅವನ ' ಸ್ಮಿತ ' ಅರ್ಥಗರ್ಭಿತವಾಗಿರುವಂತೆ ತೋರುತ್ತದೆ. ಸಂತಸವಾಗಲಿ, ವ್ಯಥೆಯಾಗಲಿ ಇಲ್ಲದ ನಿರ್ಲಿಪ್ತವಾದ ನಗೆ ಅದು. ಮುಂದೆ ಏನಾಗುತ್ತದೆ ಎಂಬುದು ಅವನಿಗೆ ತಿಳಿಯದೆ ? ಆದರೆ ಮದುವೆ ಎನ್ನುವುದೊಂದು ಅನಿವಾರ್ಯಕರ್ಮ, ಅದರಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಹಾಗೆ ತಪ್ಪಿಸಿಕೊಳ್ಳುವುದು ಅಪೇಕ್ಷಣೀಯವೂ ಅಲ್ಲ ಎಂಬ ಭಾವನೆಯಿಂದ ಅವನು ಒಡಂಬಡುತ್ತಾನೆ. ಸಂತತಿಯನ್ನು ಮುಂದುವರಿಸಲು ಮದುವೆಬೇಕು. ಅದು ಮುಂದಿನ ವೈರಾಗ್ಯ ತಪಸ್ಸುಗಳಿಗೆ ಚೇತನವನ್ನು ಹದಗೊಳಿಸುವ ಸಾಧನವೂ ಹೌದು. ಆದ್ದರಿಂದ ಅದೂ ಆಗಿ ಹೋಗಲಿ ; ಎಂದೋ ಒಂದು ದಿನ ಈ ಸಂಸಾರವನ್ನು ತ್ಯಜಿಸುವುದು ಇದ್ದೇ ಇದೆ ಎಂಬ ಆಲೋಚನೆಯನ್ನು ಅಜಿತನ ಸಸ್ಮಿತಾನನದಲ್ಲಿ ಗುರುತಿಸಬಹುದೇನೋ.'

ವ : ಗುಡಿ=ಬಾವುಟ, ಬದ್ದವಣಂ=' ಮಂಗಳವಜ್ಜೆ '=ಮಂಗಳ ವಾದ್ಯ ; ಬದ್ದವಣಂ <ವರ್ಧಮಾನ (ಸಂ) ವಿಭ್ರಮ=ಒಯ್ಯಾರ, ಪಾಣಿಗ್ರಹಣ=ಕೈಹಿಡಿಯುವುದು, ವಿವಾಹವು ಜೀವನದ ಒಂದು ಕಲ್ಯಾಣಕ್ರಿಯೆ, ಮಂಗಲಕಾರ್ಯ.

೧೫. ಬೆಡಂಗು+ಪೆತ್ತ=ಬೆಡಂಗುವೆತ್ತ—ಪೆಱು=ಧಾ. ಪತ್ನಿಯರ

ನಡುವೆ ಅಜಿತನು ಕಲ್ಪಲತೆಗಳ ನಡುವಣ ಕಲ್ಪವೃಕ್ಷವನ್ನು ಹೋಲುತ್ತಿದ್ದನು.

ವ : ಅಂಗನಾ=ಸುಂದರವಾದ ಅಂಗಗಳುಳ್ಳವಳು–ಹೆಂಗಸು, ಗಣಕ= ಜೋಯಿಸ, ಗಣಕರಣ=ಜೋಯಿಸ (?) ಉತ್ತುಂಗ=ಉನ್ನತವಾದ—ಶ್ರೇಷ್ಠ ವಾದ, ಮದುವೆಯೊಂದಿಗೇ ರಾಜ್ಯಾಭಿಷೇಕವೂ ಆಗಿ ಹೋಗಿದೆ. ಮನ ಬದಲಿಸಿ ಯಾನೆಂಬ ಶಂಕೆಯೆ ?

೧೬. ಎಲ್ಲವೂ ಧವಳ—ಶುಭ್ರ—ಶುದ್ಧ. ಚಮರಜ=ಚಮರಿಮೃಗದ ಮೈಗೂದಲನಿಂದ ಮಾಡಿದ ಚಾಮರ ; ಇವುಗಳ ಶ್ರೇಣಿ—ಸಾಲುಗಳು, ವಾರ ನಾರಿಯರ ಕಡೆಗಣ್ಣೋಟವೂ ಧವಳವೇ, ದಿಗ್ಭಿತ್ತಿ=ದಿಕ್ಕುಗಳ ಗೋಡೆ – ದಿಕ್ಕು ಗಳ ಕಡೆ. ಸಮ್ಯಕ್ತ್ವ=ರತ್ನತ್ರಯ (ಸಮ್ಯಗ್ದರ್ಶನ, ಸಮ್ಯಜ್ಞಾನ, ಸಮ್ಯಕ್ಚಾ ರಿತ್ರ) ದಲ್ಲಿ ಅಚಲವಾದ ನಂಬಿಕೆ. ಸಮ್ಯುಕ್ತ್ವವೆಂಬ ಲಕ್ಷ್ಮಿಯಿಂದ ಧವಳಿತ ನಾದವನು ಅಜಿತನಾಥ.

ವ : ಪಟ್ಟ=ಪಟ್ಟಾಭಿಷೇಕದ ಸಮಯದಲ್ಲಿ ಹಣೆಯಮೇಲೆ ಧರಿಸುವ ಆಭರಣ ; ರಾಜತ್ವಸೂಚಕವಾದುದು.

೧೭. ಅಜಿತನಾಥನಿಗೆ ಉತ್ಸವ ಪರಂಪರೆಗಳೇ ಉಂಟಾಗುವಂತೆ, ವಿವಾಹೋತ್ಸವ, ಪಟ್ಟಬದ್ಧೋತ್ಸವ–ಈ ಉತ್ಸವಗಳಿಗಾಗಿ ದೇವೇಂದ್ರಾದಿಗಳ ಆಗಮನ, ಇದೇ ಹೊತ್ತಿಗೆ ವಸಂತಋತುವಿನ ಆಗಮನ–ಹೀಗೆ ಸಂತಸದ ಮೇಲೆ ಸಂತಸ ಉಂಟಾಗುತ್ತಿವೆ !

ವ : ನಾಗಾಚಲ=ಮಲಯ ಪರ್ವತ, ಸಿರಿಕಂಡ=ಶ್ರೀಖಂಡ ಎಂಬ ಚಂದನ. ಬಾಲಪ್ರವಾಲ=ಎಳೆಯ ಚಿಗುರು, ಅಪನೋದ=ಹೋಗಲಾಡಿಸಿ ದಂತಹವ.

೧೮. ಸಮಸ್ತ ಭವ್ಯ ಜನರಿಗೆ ಶರಣ್ಯನೂ, ಸಂಪೂರ್ಣ ಪುಣ್ಯನೂ ಎನಿಸಿ ಅಜಿತಸೇನನೆಂಬ ಒಳ್ಳೆಯ ಹೆಸರಿನ ಮಗ ಹುಟ್ಟಿದನು. ಇದು ಆ ಕೂಡಲೇ ದೇವೇಂದ್ರನಿಗೆ ಆಸನಕಂಪ—ಸಿಂಹಾಸನ ಅಲುಗಾಡುವುದು—ದಿಂದ ತಿಳಿಯು ತ್ತದೆ.

೧೯. ವೃದ್ಧರಾಜ್ಯ=ಜ್ಞಾನರಾಜ್ಯವೃದ್ಧ=ಅನುಭವ, ಆದಿರಾಜ್ಯ= ಪರಂಪರಾಗತವಾದ ರಾಜ್ಯ. ಯೌವರಾಜ್ಯ=ಯುವರಾಜತ್ವ.

೨೦. ತನ್ನ ತಪೋಗ್ನಿಯಿಂದ ಹೇಗೂ ನನ್ನನ್ನು ಆ ದೇವನು ಸುಡದಿರ

ನೆಂದು ಮೆಲ್ಲಮೆಲ್ಲಗೆ ಒಳಸಾರಿದ್ದ ಮನ್ಮಥನೂ ವೀತರಾಗನಾದ ಅಜಿತನ ಮನಕ್ಕೆ ಆಸಕ್ತಿಯನ್ನು ಪುಟ್ಟಿಸಲಾರದೆ ಹೋದನು. ಉದ್ಭ=ಶ್ರೇಷ್ಠ, ತನ್ವೀ= ತನ್ವಿ=ತನ್ವಂಗಿ=ಹಂಗಸು ಸಡಸುಡಂಗೆಯ್=ಚಡಪಡಿಸು,

ಸಾರ್ವ ಅಂಗಜಂ ಒಯ್ಯಗೊಯ್ಯಗೆ ಒಳಸಾರ್ದಿರ್ದು ಅಳ್ಕಿದಂತೆ ಉಳ್ಕಿ ದಂತೆ ಅಗಿವಂತೆ ಆಜಿನೆ—ಇದು ಪದವಿಭಾಗ. ಉಳ್ಕು=ವೇದನೆಯಹಾಗು. ಅಗಿ=ಭಯಪಡು, ಆಜಿನೇ (ಆಜಿನ್+ಎ)=ಸಮರ್ಥನಾಗನೆ ? ಸಮರ್ಥ ನಾಗಲೇ ಇಲ್ಲ.

೨೧. ಅಜಿತನ ಮನಸ್ಸಿನಲ್ಲಿ ಮದುವೆಯ ಯೋಚನೆ ಇತ್ತೆ ? ತಂದೆ ತಾಯಿಯರ ತೃಪ್ತಿಗಾಗಲ್ಲವೆ ಇವನು ಮದುವೆಗೊಪ್ಪಿದ್ದುದು ? ಅಂದಮೇಲೆ ಪರಿಗ್ರಹದಲ್ಲಿ ಆಗ್ರಹ ಹೇಗುಂಟಾದೀತು ? ಗುರುಗಳ್=ತಂದೆ ತಾಯಿಯರು.

೨೨. ಮುಕ್ತಿ ಶ್ರೀಕಾಂತಯೊಡನೆ ಆಸಕ್ತನಾದವನಿಗೆ ಉಳಿದ ಕಾಂತೆ ಯರು ಆಸಕ್ತರಾಗಬಲ್ಲರೆ ? ಆದಮೆ (ಆದಂ+ಎ) ವಿಶೇಷವಾಗಿಯೆ, ಅಗ್ಗಲಿಸು (ಅಗ್ಗಲ+ಇಸು)=ಹಿಗ್ಗು, ನಲಿ ಹೆಚ್ಚುಗಾರಿಕೆಯನ್ನು ತೋರಿಸು, ಪೆರ್ಚುಗೆವಡೆ (ಶ.ದ) ಎಡೆಯೊಳ್=ಬೇರೆಯುವರೊಂದಿಗೆ

ವ : ಮಾರ್ದವ=ಮೃದುತ್ವ, ಆರ್ಜವ=ಋಜುಸ್ವಭಾವ ಉಪೇತ= ಕೂಡಿದ.

೨೩. ಜೀವನಸಮುದಾಯಕ್ಕೆ ಏರಿಳಿತಗಳು, ಹುಟ್ಟುಸಾವುಗಳು ಉಂಟು ಎಂಬುದನ್ನು ನೆನಪಿಸುವ ದಿನನಿತ್ಯದ ಉದಾಹರಣೆ ಎನ್ನುವಂತೆ ಸೂರ್ಯ ಉದಯವಾಗಿ ಅಸ್ತಮಿಸಿದನು. ಇದನ್ನು ದಿನದಿನವೂ ಕಾಣುತ್ತಿರುವ ಮಾನವನು ಮಾತ್ರ ಇದು ತನಗಲ್ಲವೆಂಬುತೆ, ಪ್ರಕೃತಿ ವ್ಯಾಪಾರವೆಂಬುತೆ ನಿರ್ಲಿಪ್ತನಾಗಿರು ತ್ತಾನೆ.

೨೪. ದಿಙ್ನಾಗ, ದಿಗ್ನಾಗ ಎಂಬ ಎರಡು ರೂಪಗಳೂ ಉಂಟು. 'ದಿಗ್ನಾಗ' ಎಂಬುದೇ ಶುದ್ಧರೂಪವೆಂದು ರನ್ನನ ಭಾವನೆಯಾಗಿರಬಹುದೆ ? ಇದರಂತೆ ದಿಗ್ನಾರಿ, ದಿಗ್ನಾಯಕ, ತುಹಿನಕರ ತಂಪಾದ ಕಿರಣಗಳುಳ್ಳವ=ಚಂದ್ರ, ದಿಗ್ಗಜಗಳ ಸೊಂಡಿಲ ತುದಿಯಲ್ಲಿ ಸೇರಿರುವ ಚಂದ್ರಕಾಂತ ಶಿಲೆಯ ಕಳಸ, ದಿಕ್ಪಾಲಕರ ಶಿರೋರತ್ನಗಳು ಸೇರಿರುವ ಉದಯ ಶಿಖರ. 'ಲಗ್ನೋದಯ' ಎಂಬಲ್ಲಿನ ಪ್ರಾಸಕ್ಕಾಗಿ 'ದಿಗ್ನಾರಿ' ಇತ್ಯಾದಿಗಳನ್ನು ಬಳಸಿರಬಹುದೆಂಬುದು

ಸರಿಯೆನಿಸದು. (ನೋ : ಗ. ಯು. ಸಂ. ೬-೨೩) ಇಲ್ಲಿ ಉಲ್ಲೇಖಾಲಂಕಾರವಿದೆ.

೨೫. ಚಂದ್ರೋದಯದ ಸುಂದರ ವರ್ಣನೆ ; ರನ್ನನ ಬಗೆಗೆ ಅಚ್ಚರಿ ಪಡುವಂತಹುದು. ಬೆಲಗಸೆ=ಬೋಗಸೆ (?) ಬೆಲಗಸೆಯಿಂ ತೀವಿಕೊಂಡು= ಬೆಲಗಸೆದೀವಿಕೊಂಡು, ಬೆಳದಿಂಗಳನ್ನು ಜನ ಭಾವಿಸಿದ ರೀತಿ ಇದು. ಬೆಲಗು (?) ಚಂದ್ರನ ಒಂದು ಕಲೆ. ಅತಿಶಯೋಕ್ತಿ ಅಲಂಕಾರವಿದೆ.

ವ : ಚಂದ್ರಿಕಾಶ್ರೀವಿಲಾಸ ಎಂಬುದು ಎಷ್ಟೊಂದು ಹೃದ್ಯವಾಗಿವೆ ! ನಿರವದ್ಯ ವಿದ್ಯಾಧರಂ=ಕಲಂಕರಹಿತವಾದ ವಿದ್ಯೆಗಳನ್ನು ಧರಿಸಿರುವವನು. ವಿದ್ಯಾಧರರು ಮಧ್ಯಮಲೋಕದ ವಿಜಯಾರ್ಧ ಪರ್ವತಗಳ ಮೇಲೆ ವಾಸಿಸುವ ದೇವ ನಿಕಾಯದವರು ; ಇವರು ಗಗನ ಗಮನ ಸಮರ್ಥರೂ ಭೋಗಿಗಳೂ ಆಗಿದ್ದಾರೆ.

೨೬. ಅಜಿತನ ಜೀವನಕ್ಕೆ ತಿರುವುಗೊಡುವ ಘಟನೆ ಈ ಉಲ್ಕಾಪಾತ ಕಣ್ಣುಳ್ಕೆ=ಕಣ್ಣು ಕೋರೈಸುವಂತಾಗಲು, ತೇಱೆ=ಅಳಿಯಲು, ಬೀಳುವಿನಂ= ಬೀಳ್ವಿನಂ. 'ಬೆಳ್ದಿಂಗಳಿನಲ್ಲಿ ಉಲ್ಕಾಪಾತವಾಗುವುದು ಅರ್ಥವತ್ತಾಗಿ ತೋರುತ್ತದೆ. ಬೆಳ್ದಿಂಗಳು ಭೋಗಕ್ಕೆ, ಶೃಂಗಾರಕ್ಕೆ ಸಂಕೇತ ; ಅದು ನಶ್ವರ, ನಿಸ್ಸಾರ ಎಂದು ಸಾರುವಂತೆ ಆಗುತ್ತದೆ ಉಲ್ಕಾಪಾತ.' ಪ್ರಾಸಸ್ಥಾನದಲ್ಲಿ ಟ ಮತ್ತು ಳ-ಗಮನಾರ್ಹ. ಆದಿನಾಥನಿಗೆ ನೀಲಾಂಜನೆಯ ನೃತ್ಯ ವೈರಾಗ್ಯ ಹೇತುವಾದರೆ, ಅಜಿತನಾಥನಿಗೆ ಈ ಉಲ್ಕಾಪಾತ.

ವ : ಅಸುಂಗೊಂಡು=ಗಾಬರಿಗೊಂಡು.

೨೭. ವಿಮಲವಾಹನಭವದ ನಿರ್ವೇಗಗಳು ಮತ್ತೆ ಪಲ್ಲವಿಸುತ್ತವೆ. ಪೋದುವೆ, ಆದುವೆ-ಈ ಪ್ರಶ್ನೆಗಳು ಅವಧಾರಣಾ (?) ಸೂಚಕವಾಗಿವೆ. ವಿದುಲವಾಹನ ಭವದ ನಿರ್ವೇಗಗಳು ಅಜಿತ ಭವದಲ್ಲಿ ವಿಕಾಸಗೊಂಡಿವೆ ಎಂಬುದು ಧ್ವನಿತಾರ್ಥ.

೨೮. ಲೌಕಿಕದ ನಶ್ವರತೆಯನ್ನು ಮನಗಾಣುತ್ತಿದ್ದಾನೆ-ಜಲದ=ಮೋಡ ಆಟೋಪ=ಆರ್ಭಟ, ಉಪಮಂ=ಹೋಲುವಂತಹುದು, ಫೇನ=ನೊರೆ ಆಕಾಳಿಕೀ=ಕ್ಷಣಿಕವಾದುವು. ಜೀವಿತವು ಗುಡುಗಿನ ಆಟೋಪಕ್ಕೆ ಸಮನಾದುದು, ನೀರಮೇಲಿನ ಗುಳ್ಳೆಗಳನ್ನು ಹೋಲುವಂತಹುದು, ನೊರೆಯರಾಶಿಗೆ ಸಮನಾದುದು, ಜಲರೇಖೆಯಂತೆ ನಶ್ವರ, ಕಾಮನಬಿಲ್ಲಿನ ಲೀಲೆಯಂತೆ ಕ್ಷಣಿಕ

ಚಂಚಲ. ಈ ಸೌಂದರ್ಯಾದಿಗಳೆಲವೂ ಇಂತಹವೇ. ಇದೆಲ್ಲವನ್ನೂ ತಿಳಿತಿಳಿದೂ ಮತ್ತೆ ಹೇಗೆ ತಾನೆ ತಡೆಯಲಿ ? ಈ ನಶ್ವರತೆಯನ್ನು ಕಾಣುವುದು ಅನುಪ್ರೇಕ್ಷೆಯ ಮೂಲಸ್ಥಾನ, ಇಲ್ಲಿ ಕಾಣುವ ಮಾನವ ತೊಳಲಾಟವನ್ನೂ ನಿರ್ವೇಗವನ್ನೂ ಗಮನಿಸಬೇಕು. ಇಲ್ಲಿ ದೀಪಾಲಂಕಾರವಿದೆ.

೨೯. ಯಮನು ನಿರ್ದಯನಾಗಿ ಕುತ್ತಿಗೆಯನ್ನು ಕೊಯ್ದು (ಹಿಚಿಕಿ) ಎಳೆದುಕೊಂಡು ಹೋಗುವಾಗ ಯಾರಿದ್ದಾರೆ? 'ಸಾವು ಬಂದಾಗ ಯಾರೂ ಕಾಪಾಡುವುದಿಲ್ಲ. ಕರ್ಮದ ಫಲವನ್ನು ಯಾರೂ ನಿವಾರಿಸಲಾರರು'. ಧರ್ಮ ವೊಂದೇ ರಕ್ಷಕ.

೩೦. ಚತುರ್ಗತಿಗಳಲ್ಲಿ ಭ್ರಮಿಸುವ ಯಾವಗತಿಯಲ್ಲೂ ಯಾರೂ ಸಹಾ ಯಕರಿಲ್ಲ, ತಾನೊಬ್ಬನೇ. 'ತನ್ನ ಕಾರ್ಯ' ದ ಫಲವನ್ನು ತಾನೊಬ್ಬನೇ ಉಣ್ಣ ಬೇಕು.

೩೧. ಜೀವನು ಅದೇನು ಜಡಸ್ವಭಾವದವನೋ! ನಾನ್ ಆರ್ಗೆ= ನಾನು ಯಾರವನು, ಯಾರ ಮಗ ಎಂದು, 'ಆರ್ಗೆ' ಎಂಬುದು ಸಂಸ್ಕೃತದ 'ಕಸ್ಯ' ಎಂಬುದರ ಭಾಷಾಂತರವೆಂದು ತೋರುತ್ತದೆ. ಆದರೆ ಇದು 'ಆರ್ಗಡ' (ಯಾರಂತೆ, ಯಾರು) ಎಂಬುದರ ರೂಪಾಂತರವೆಂದು ಅಭಿಪ್ರಾಯ ಪಡು ವವರೂ ಉಂಟು'.

೩೨. ತಱಿಸಲ್=ನಿಶ್ಚಯಿಸು, 'ತಱಿಸಲ್ ನಿಶ್ಚಯೆ' (ಶ. ಮ. ದ' ತಱಿಸಲ್+ಅಲ್=ತಱಿಸಲಲ್. ದೇಹಾನಿತ್ಯತೆಯ ಅರಿವುಮೂಡುವುದೇ ದುಃಸಾಧ್ಯ, ಅದು ಮೂಡಿದರೂ ದೀಕ್ಷೆಗೆ ದೃಢನಿಶ್ಚಯ ಮಾಡುವುದು ಇನ್ನೂ ದುಃಸಾಧ್ಯ; ಇವೆರಡೂ ಆದರೂ ತಪಸ್ಸಿನಲ್ಲಿ ದೇಹವನ್ನು ನಿಲ್ಲಿಸುವುದು ಇನ್ನೂ ಹೆಚ್ಚಿನ ದುಃಸಾಧ್ಯ, ಅಸಾಧ್ಯವೇ. ಹೀಗೆನಿಸುವ ಅರಿವೇ ದಿವ್ಯಜ್ಞಾನವಾಗು ತ್ತದೆ.

೩೩. ಪಾವನ ಚಾರಿತ್ರ=ಸಮ್ಯಕ್ಚಾರಿತ್ರ, ಪಾವನ=ಪವಿತ್ರ. ದೋಷ ತ್ರಯ=ಸತಿ, ಸುತ, ಸಂಪತ್ತುಗಳ (ಬಯಕೆ). ಈ ಚಾರಿತ್ರವೇ ಔಷಧ; ಇದರ ಸೇವನೆಯೇ ದೋಷತ್ರಯಗಳನ್ನು ಕೆಡಿಸುವಂತಹುದು. ಆಮಯ (ರೋಗ) × ಅನಾಮಯ. ತಪೋಭಾವನೆಯಿಂದ ಶೋಭಿಸುವ, ನಿರೋಗಿಯಾದ ಮುನಿಯೇ ಧರ್ಮರಕ್ಷಕ. ಆರ್ಮಂ=ರಕ್ಷಕ, 'ಕೂರ್ಮೆಯಿನಾ ಮುನಿಯಂ

ಕಂಡಾರ್ವರ್ಗ ನೀನಲ್ಲದಿಲ್ಲ ಪೆಱತೆಂದರಸು ಮೂರ್ಮೆ ಬಲವಂದು ನುತಿಸಿ ಪಲರ್ವೆ ತುಟಿಲ್ಗೆಯ್ದು ಭಕ್ತಿಯಿಂ ಬೆಸಗೊಂಡಂ [ಭಟ್ಟಾಕಳಂಕ-೮೮]

೩೪. ಸುರ್ಯೋದಯದ ವರ್ಣನೆ ವಿಶಿಷ್ಟವಾಗಿದೆ. ಪೂರ್ವದಿಕ್ಕೇ ಮೂಸೆ, ಕತ್ತಲೆಯೇ ಇದ್ದಿಲು, ವಾಯುವೇ ಆಕ್ಕಸಾಲೆ ; ಬೇಸಗೆಯೇ ಕುಲುಮೆ. ಪಿಂಜರಿ=ಬೆಳ್ಳಿ, ಪೞಂಗಾಸು=(ಪೞಂ+ಕಾಸು) ಹಳೆಯನಾಣ್ಯ—ಚೊಕ್ಕ ಚಿನ್ನದ್ದು. ಉದ್ಗತ=ಮೇಲೇರಿ ಬಂದ, ಕಿಸು=ಕೆಂಪು, ಕಿಸುಸಂಜೆ=ಸಂಜೆ ಗೆಂಪು. 'ಜನ ಜೀವನದ ಒಂದು ಚಿತ್ರ ಮೂಡಿರುವುದರಿಂದ ವರ್ಣನೆ ಮತ್ತಷ್ಟು ಸಂತೋಷದಾಯಕವಾಗುತ್ತದೆ.'

ವ : ಲೋಕಾಂತಿಕದೇವರು=ಬ್ರಹ್ಮಲೋಕವೆಂಬ ಐದನೆ ಸ್ವರ್ಗದ ಅಂತಿಮ ಭಾಗದಲ್ಲಿರುವವರು. ಇವರು ಸಕಲಶಾಸ್ತ್ರಗಳನ್ನೂ ಬಲ್ಲವರು ; ಬ್ರಹ್ಮ ಚಾರಿಗಳು ; ತೀರ್ಥಂಕರರ ತಪಃ ಕಲ್ಯಾಣದಲ್ಲಿ ಭೂ ಸಂಚಾರಿಗಳು ; ದೇವರ್ಷಿ ಗಳು, ದೇವಾಂತಿಕ=ದೇವ (ಅಜಿತ)ನ ಸಮೀಪ, ದಿವಸಕರನು ಕಮಲಾಕರ ಪ್ರಬೋಧಕರನಾದಂತೆ, ಲೋಕಾಂತಿಕದೇವರು ತೀರ್ಥಕರ ಪರಮ ದೇವನನ್ನು ಪ್ರಬೋಧಿಸುತ್ತಾರೆ.

೩೫. ಕೈಗಣ್ಮು=ಶೃಂಗರಿಸು, ಪ್ರಾಕೃತ ಮರ್ತ್ಯ=ಸಾಮಾನ್ಯ-ಸಂಸ್ಕಾರವಿಲ್ಲದ ಮನುಷ್ಯ, ದಂದುಗ=ತೊಂದರೆ, ತೊಡಕು. ಲೋಕಾಂತಿಕ ದೇವತೆಗಳು ಅಜಿತನನ್ನು ಎಚ್ಚರಿಸುತ್ತಾರೆ ; ಕರ್ತವ್ಯದ ಕಡೆ ತಿರುಗಿಸುತ್ತಾರೆ.

೩೬. ಚರಮ ದೇಹ=ಆತ್ಮನಿಗೆ ಇದೇ ಕಡೆಯ ದೇಹ-ಮರು ಹುಟ್ಟಿಲ್ಲ. ಪಂಚೇಷು (ಪಂಚ+ಇಷು), ಪಂಚಬಾಣ=ಮನ್ಮಥ, ಚೆಚ್ಚರ ಮೆಟ್ಟಿ=ಚುರುಕಾಗಿ-ಲಗುಬಗೆಯಿಂದ-ಎದ್ದು.

೩೭. ಕಷಾಯ ಚತುಷ್ಟಯ=ನಾಲ್ಕು ಕಷಾಯಗಳು ಕ್ರೋಧ, ಮಾನ, ಮಾಯಾ, ಲೋಭ. ಎಡೆಯಂ ಕಿಡಿಸಿ-ಎಡೆಗೆಡಿಸಿ, ದಾರಿಯನ್ನು ಕೆಡಿಸಿ ಭವಚಾತುಷ್ಟಯ=ನಾಲ್ಕು ಬಗೆಯಾದ ಜನ್ಮಗಳು ದೇವ, ಮಾನವ. ತಿರ್ಯಕ್, (ಪಶುಪಕ್ಷಿ ಮೊದಲಾದ ಪ್ರಾಣಿವರ್ಗ) ನಾರಕ. ಅನಂತ ಚತುಷ್ಟಯ=ಅನಂತ ಜ್ಞಾನ, ಅನಂತ ದರ್ಶನ, ಅನಂತವೀರ್ಯ, ಅನಂತ ಸುಖ ಎಂಬಿವು. ಇವು ಕೇವಲ ಜ್ಞಾನವನ್ನು ಪಡೆದವನಿಗೆ ಒದಗುವಂತಹವು. ಸಂಸೃತಿ=ಸಂಸಾರ.

೩೮. ವಿಜಿತ ಕಿಲ್ಬಿಷ=ದೋಷ, ಕೊಳೆ, ಪಾಪಗಳನ್ನು ಗೆದ್ದವನು,

ಪ್ರಾಜ್ಯಂ=ಪವಿತ್ರವಾದುದು, ಕೈವಲ್ಯ=ಮೋಕ್ಷ, ಪಾಲ್ಯ=ಪಾಲಿಸಲು ಅರ್ಹ.

೩೯. ಸಂಗತ=ಕೂಡಿದ. ನಿಱಿಯೆತೆಱೆಯೆ=ನೆರಿಗೆ—ಪದರ ಬಿಚ್ಚಿ ಕೊಳ್ಳುವಂತೆ ; ನೆರಿಗೆಯನ್ನು ಬಿಡಿಸಿತೋರಿಸು. ನೀನು ಜಿನಧರ್ಮವನ್ನು ಚೆನ್ನಾಗಿ ತಿಳಿದವನು, ಇಂತಹ ನಿನಗೆ ಅದನ್ನು ವಿಸ್ತರಿಸುವುದಿಲ್ಲ. ಹಾಗೆ ಮಾಡುವುದು ಸೂರ್ಯನಿಗೆ ಸೊಡರಿಂದ ಆರತಿ ಬೆಳಗುವ, ತೊರೆಗೆ ತರ್ಪಣದ ರೂಪದಲ್ಲಿ ನೀರು ತುಂಬುವ ಗಾಂಪತನ ವಾಗುತ್ತದೆ. ಪಂ. ಭಾ. ' ತೊಱೆಗೆ ನೀರಡಕಲು ಮಾದಿತ್ಯಂಗೆ ಸೊಡರಿಡಲುಂ ' [೯-೧೮೪] ' ಗುಡ್ಡಕ್ಕೆ ಕಲ್ಲು ಹೊತ್ತ ಹಾಗೆ ' ಎಂಬ ಗಾದೆ ಮಾತಿಗೆ ಸಂವಾದಿಯಾಗಿದೆ.

೪೦. ಭವ (ಸಂಸಾರ) ವೆಂಬ ಈ ಸಸ್ಯ ಸಮೂಹಕ್ಕೆ ತಾವು ಧರ್ಮವೆಂಬ ಅಮೃತದ ಮಳೆಗರೆಯುವುದು. ಇಲ್ಲಿ ಸುಂದರವಾದ ರೂಪಾಲಂಕಾರವಿದೆ.

೪೧. ಜಗತೀ ತಿಲಕನಾದ ಅಜಿತನ ಚಿತ್ತ ಉದಾತ್ತವಾದುದು, ಸಹಜ ವಾಗಿಯೇ ನಿರ್ಮಲವಾಗಿದ್ದುದು, ಈಗ ನಿರ್ಮಲತರವಾಯಿತು. ಮಣಿ ದರ್ಪಣ=ರನ್ನಗನ್ನಡಿ, ಇಟಿಸಿ=ಕಡಿಮೆಮಾಡಿ- ಹಿಂದುಮಾಡಿ.

೪೨. ಭಾಪು=ಮೆಚ್ಚಿಕೆಯನ್ನು ಸೂಚಿಸುವ ಮಾತು. ಭಾಪುಭಾಪು— ಈ ದ್ವಿರುಕ್ತಿಯನ್ನೂ, ಪದ್ಯದ ಕ್ರಿಯೆಯ ಓಟವನ್ನೂ ಗಮನಿಸಬೇಕು. ಉತ್ಸವ ಗಳನ್ನು ಅತಿಶಯವಾಗಿಯೇ ಮಾಡಿಸಿದ್ದಾನೆ. ಸಾಮ್ರಾಜ್ಯ ದೀಕ್ಷಾಗುರು=ಮಗ ನಿಗೆ ಸಾಮ್ರಾಜ್ಯಾಭಿಷೇಕವನ್ನು ಮಾಡಿ, ರಕ್ಷಣೆಯ ದೀಕ್ಷೆಯನ್ನು ಕೊಡುವುದರಲ್ಲಿ ಗುರು. ಭೋಂಕನೆ ತಳರ್ದಂ—ಇಲ್ಲಿನ 'ಭೋಂಕನೆ' (?) ಅವ್ಯಯ ; ಶಬ್ದಶಕ್ತಿ ಗಮನಾರ್ಹ, ಭೋಂಕನೆ (ಶ್ರೀಘ್ರಾರ್ಥದಲ್ಲಿ ಅವ್ಯಯ,)—ಥಟ್ಟನೆ

ವ: ಅನೇಕ ಮೂರ್ಧಾಭಿಷಿಕ್ತ ಭೂಭೃಚ್ಚಕ್ರಂ ಬೆರಸು=ಪಟ್ಟಾಭಿಷಿಕ್ತ ರಾದ ಚಕ್ರವರ್ತಿಗಳನೇಕರೊಡನೆ ಸೇರಿ. ಸಕಲ....ತಳರ್ವಂತೆ—ಎಲ್ಲ ಕುಲಪರ್ವತ ಗಳೊಡನೆ ಮೇರುಪರ್ವತವೇ ಚಲಿಸುವಂತೆ. ಶಿಬಿಕಾ (ತ್ಸ) ಸಿವಿಗೆ (ತ್ಭ)= ಪಲ್ಲಕ್ಕಿ. ಶಿಬಿಕಾಲಂಕೃತಸ್ಕಂಧರಾಗಿ=ಪಲ್ಲಕ್ಕಿಯನ್ನು ತಮ್ಮ ಹೆಗಲಿಗೆ ಅಲಂಕಾರ ವನ್ನಾಗಿಸಿಪವರಾಗಿ—ಪಲ್ಲಕ್ಕಿಯನ್ನು ಹೊತ್ತುಕೊಂಡವರಾಗಿ.

೪೩. ರಾಜರು, ಆಕಾಶಗಾಮಿಗಳು, ದೇವತೆಗಳು, ಅಸುರಕುಮಾರರು, ದೇವೇಂದ್ರರು ಕ್ರಮವಾಗಿ ಏಳೇಳು ಅಡಿಗಳಷ್ಟು ದೂರ ಸರದಿಯ ಮೇಲೆ ವಿನೀತರಾಗಿ ಸಹೇತುಕವನದವರೆಗೂ ಕೊಂಡೊಯ್ದರು. " ಆ ಪಾಲಕಿಯನ್ನು

ಮೊದಲು ಏಳು ಹೆಜ್ಜೆಗಳವರೆಗೆ ರಾಜರು ಹೊತ್ತರು ; ತರುವಾಯ ಆಕಾಶದಲ್ಲಿ ಏಳು ಹೆಜ್ಜೆಗಳವರೆಗೆ ವಿದ್ಯಾಧರರು, ಅನಂತರ ಏಳೇಳು ಹೆಜ್ಜೆಗಳವರೆಗೆ ದೇವತೆಗಳೂ ಅಸುರಕುಮಾರರೆಂಬ ದೇವತೆಗಳೂ, ಕಡೆಗೆ ಮುಂದಕ್ಕೆ ದೇವೇಂದ್ರರೂ ಆನಂದ ಪರವಶರಾಗಿ ಹೊತ್ತುಕೊಂಡು ನಡೆದು ಸಹೇತುಕ ವನವನ್ನು ಸೇರಿದರು. '' ಮದುವೆಯ ಸಪ್ತಪದಿಯನ್ನೂ 'ಸಖಾ ಸಪ್ತಪದಾಭವ '-ಏಳುಹೆಜ್ಜೆ 'ಇಟ್ಟವಳು ಸಖಿಳಾಗು (ಏಳು ಹೆಜ್ಜೆ ಒಟ್ಟಿಗೆ ನಡೆದರೆ ಮೈತ್ರಿಯುಂಟಾಗುತ್ತದೆಂಬ ಭಾವ)-ಎಂಬ ಮಂತ್ರಾರ್ಥವನ್ನೂ ಇಲ್ಲಿ ಸ್ಮರಿಸಬಹುದಾಗಿದೆ. ವೈದಿಕ ಸಂಪ್ರದಾಯದ 'ಸಪ್ತಪದಿ' ಯಂತೆ, ಜೈನ ಸಂಪ್ರದಾಯದಲ್ಲಿ 'ಸಪ್ತಪರಮಸ್ಥಾನ' ಗಳನ್ನು ಕಾಣಬಹುದಾಗಿದೆ. 'ಸತಾಂ ಗತಂ ಸಾಪ್ತ ಪದೀನಮುಚ್ಯತೆ' (ಸತ್ಪುರುಷರ ನಡೆಯನ್ನು ಏಳು ಹೆಜ್ಜೆಯದೆನ್ನುತ್ತಾರೆ) ಎಂಬ ಕಾಳಿದಾಸನ ಮಾತನ್ನೂ ಗಮನಿಸಿ. ಹಾಗಾದರೆ ಈ ಏಳರ ಅಂತರಾರ್ಥವೇನು ?

ವ : ಉಪವನ-ಉದ್ಯಾನವನ-ಯಾರಿಗೂ ರಾಗಹೇತುಕವಾದುದೇ, ಆದರೆ, ಅಂಥದೂ ಈಗ ಅಜಿತನಿಗೆ ವಿರಾಗಹೇತುಕವಾಯಿತು. ರಾಗ×ವಿರಾಗ.

೪೪. ತಂದೆ, ತಾಯಿ, ಮಗ-ಇವರು ಸಹಜ ಮೋಹದಿಂದ ಕಣ್ಣೀರಿಡುತ್ತಾ ಒಡನೆ ಬಂದರು.

೪೫. ತವರ್, ತವರು=ತನ್ನವರು-ಬಾಂಧವರು, 'ಅಜಿತನನ್ನು ಊರವರೆಲ್ಲ ಹಿಂಬಾಲಿಸಿದ್ದರಿಂದ ಅಯೋಧ್ಯೆ ಹೇಗಿತ್ತೆಂಬುದನ್ನು ಕವಿ ಒಳ್ಳೆಯ ಉಪಮಾನವೊಂದರಿಂದ ಧ್ವನಿಸುತ್ತಾನೆ. 'ಮದುವೆಗಳುಪಿದ ಮನೆಯಂದದಿ ನಿರ್ದುಗಿದಯೋಧ್ಯಾನಗರಂ ' ಮದುವೆ ಮನೆಯ ಸಂಭ್ರಮ ಕೋಲಾಹಲಗಳಿಗೂ, ಮದುವೆ ಮುಗಿದ ಮೇಲೆ ಅದು 'ಬಿಕೋ ' ಎನ್ನುವ ಸ್ಥಿತಿಗೂ ಇರುವ ಅಂತರವನ್ನು ಇದು ಮನಸ್ಸಿಗೆ ತಂದು, ಅಯೋಧ್ಯೆಯ ನಿರ್ಜನತೆಯನ್ನೂ ಉತ್ಸಾಹಶೂನ್ಯತೆಯನ್ನೂ ಸಮರ್ಥವಾಗಿ ತಿಳಿಸುತ್ತದೆ.' ಮದುವೆಗಳುಪಿದ= ಮದುವೆಯಿಂ ಕಳುಪಿದ-ಕ್ರಿ. ಸ.

ನೋ : ಬಿನ್ನನಿರ್ದುಗಿದು ಸುರಶೈಲಮದೊಂದು, ಮದುವೆಗಳಿಪಿದಮನೆವೊಲ್ (ಆ. ಪು. ೭. ೧೧೯) ಬಿನ್ನನೆ, ಬಿನ್ನಗೆ-ಎರಡೂ ರೂಪಗಳನ್ನು ಕೇಶಿರಾಜ ಕೊಟ್ಟಿರುವನು ; ಆದರೆ ಇಲ್ಲಿರುವ ರೂಪ ಬಿಮ್ಮಗೆ, ಬಿನ್ನನೆ='ಬಿಕೋ' ಎಂದು ಶೂನ್ಯವಾಗಿ.

ವ: ಆಕುಳವ್ಯಾಕುಳೆಯರಾಗಿ=ದುಃಖದಿಂದ ವ್ಯಥೆಗೊಂಡವರಾಗಿ. ಈ ಮುಂದೆ ಅಂತಃಪುರದ ಸಹಸ್ರಾಂಗನೆಯರ ಗೋಳನ್ನು ಹೃದ್ಯವಾಗಿ ಮನ ಕರಗು ವಂತೆ ಚಿತ್ರಿಸಿದ್ದಾನೆ. 'ಮಾನವತೆಯ ಅಂಶದಿಂದ ಹೃದಯಸ್ಪರ್ಶಿಯಾದ ಭಾಗ' ಇದು.

೪೬. ಪತಿ ತೆರಳಿದುದಕ್ಕೆ ಕೆಲರು ಲೋಕಕಾಂತಿಕ ದೇವತೆಗಳನ್ನು ಗುರಿ ಪಡಿಸುತ್ತಾರೆ. ಗಟಿಪು=ಹರಟು, ಸೂಟಿ=ಸರದಿ, ಕ್ರಮ. ಏನನಪ್ಪೊಡಂ ಗಟಿಪಿ–ಈ ಮಾತು ಎಷ್ಟು ಸಹಜವಾಗಿದೆ !

೪೭. ಸ್ತ್ರೀಸಹಜವಾದ ಸವತಿ ಮತ್ಸರ ಇಲ್ಲಿ ಅಭಿವ್ಯಕ್ತಗೊಂಡಿದೆ. ಪಚ್ಚು (ಪರ್ಚು–ಹ. ಗ)=ಪಿಸುಮಾತನಾಡು, ದೇವಿಯರ್ಕಳ್ ಅಗಲರ್ ಉಸಿರ್ ಪತ್ತಿಲ್ಲ—ಇದು ಪದವಿಭಾಗ ಪಚ್ಚಿ+ಪಚ್ಚಿ=ಪಚ್ಚಿವಚ್ಚಿ–' ಪ ' ಕ್ಕೆ ' ವ ' ಆದೇಶ; ದ್ವಿರುಕ್ತಿ.

೪೮. ಇವರು ವಿವೇಕವಿಕಳೆಯರಾಗಿ ಗೋಳಿಡುತ್ತಿರುವುದನ್ನು ಕಂಡ ಕ್ಕೆಲವರು 'ವಿವೇಕಿಗಳಂಬರಿಸಿ' ಸಮಾಧಾನ ಪಡಿಸಲೆತ್ನಿಸುತ್ತಾರೆ.

೪೯. ನೆರಪು=ಪೂರೈಸು–ಮಾಡು, ಅಸುಂಗಳೆದಪಂ=ಪ್ರಾಣತ್ಯಾಗ ಮಾಡೋಣ, ಬಲ್ಲಿದ=ಶಕ್ತ, ಜ್ಞಾನಿ, ಬಗೆಯಂಪೇಟ್ಟಿಪನೆ=ಬಗೆವೇಟ್ಟಿಪನೆ. ತಮಗಾದ ಅಗಲಿಕೆಯಿಂದ ಸಂತಾಪಗೊಂಡು ಪ್ರಲಾಪಿಸುತ್ತಾರೆ. ನಾವೇನು ಪಾಪ ವನ್ನು ಮಾಡಿದವೆಂದು ನಮಗೆ ಈ ಸ್ಥಿತಿ ! ಕೆಲವರು ಪ್ರಾಣವನ್ನೇ ಕಳೆದು ಕೊಳ್ಳೋಣವೆಂದರೆ, ಮತ್ತೆ ಕೆಲವರು ನಡೆಯಿರಿ ಅವನಲ್ಲಿಗೇ ಹೋಗೋಣ, ನಮಗೆ ದಾರಿ ತೋರನೇ ಎನ್ನುತ್ತಾರೆ.

೫೦. ಇನ್ನು ಕೆಲವರು ನಮಗೆ ಈ ಭೋಗದ ವಸ್ತುಗಳೊಂದೂ ಬೇಡ, ಇವನ್ನು ಇಟ್ಟುಕೊಂಡು ನಾವೇನು ಮಾಡುವುದೊ ? ಎಂದು ಗೋಳಿಡುತ್ತಾರೆ. ರಾಜಕೀರ=ಗಿಳಿ, ತಿಸರಿ=ಮೂರು ತಂತಿಯ ಒಂದು ಬಗೆಯ ವಾದ್ಯ; ತ್ರಿಸರಿ >ತಿಸರಿ(?) ತಿಸರಮಂ–ಪಾಠಾಂತರ.

೫೧. ಮತ್ತೆ ಕೆಲವರ ನಿರ್ಧಾರ ಇದು – ಮಾಣಲಾಗ=ಸುಮ್ಮನಿರ ಬಾರದು, ಬೆಸಕೇಳ್ದಪೆಂ=ಅಪ್ಪಣೆಯನ್ನು ಕೇಳುತ್ತೇನೆ. ನೇಲ್ದಳಿಪಿ=ಬಯಕೆ ದೋರಿ, ನಾವು ಒಡನೆ ಹೋಗದಿದ್ದರೆ ಸಜ್ಜನರೆನ್ನಿಸದೆ ದುರ್ಜನರೆನ್ನಿಸಿ ಕೊಂಡೇವು.

ವ: ಪರಿಚ್ಛೇದಂಗೆಯ್ದು=(ಹೊರಡಲು) ನಿರ್ಧರಿಸಿ, ಚೆಂಬೊನ್ನ=ಕರುಮಾಡ=ಸುವರ್ಣಮಯವಾದ ಉಪ್ಪರಿಗೆ.

೫೨. ತಾವು ನೀರ್ವೊಯ್ದು ಬೆಳೆಸಿದ ಗಿಡಬಳ್ಳಿಗಳನ್ನು ಅವರು ಅಪ್ಪಣೆ ಬೇಡುತ್ತಿರುವುದು ಕರುಣಾಜನಕವಾಗಿದೆ. ವಿಹ್ವಲೆಯರ್=ವ್ಯಾಕುಲಗೊಂಡವರು=ದುಃಖಿತರಾದವರು. ವಸಮಲ್ಲದ=ಬಸಮಲ್ಲದ=ತಡೆಯಲಾಗದ. 'ಅಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ' [ಆ. ಪು. ೪.೫೬] ಎಂಬುದು ತದ್ವತ್ತಾಗಿ ಬಳಕೆಗೊಂಡಿದೆ. 'ಬಸಮಲ್ಲದ' ಎಂಬ ಶಬ್ದದ ಔಚಿತ್ಯವನ್ನು ಗಮನಿಸಬೇಕು. ವಿಪ್ರಲಂಭ ಶೃಂಗಾರ ಇಲ್ಲಿ ಮತ್ತು ಮುಂದಿನ ಪದ್ಯದಲ್ಲಿ ರಸಸ್ಯಂದಿಯಾಗಿದೆ.

೫೩. ತಣ್ಮಲೆ (ತಣ್+ಮಲೆ)=ಹಿತವಾಗಿ ಪಸರಿಸು, ಹಿತವನ್ನು ಹೊಂದು–ಸುಖಪಡು. ಇವರ ನಿರ್ಧಾರದ ಮೊರೆ ಲಲಿತಾಂಗನ ಹಲುಬಾಟ [ಆ. ಪು–೩-೪]ವನ್ನು ನೆನಪಿಗೆ ತರುತ್ತದೆ.

೫೪. ಅಜಿತನಿಲ್ಲದೆ ತಮಗೆ ಎಲ್ಲವೂ ಶೂನ್ಯವೆಂದು ರೋದಿಸುತ್ತಾರೆ. ಇದು 'ಗದಾಯುದ್ಧ' ದ ದುರ್ಯೋಧನನ ಅಳಲನ್ನು ನೆನಪಿಸುತ್ತದೆ.

೫೫. ಅಜಿತನ ವಿಶಿಷ್ಟ ಗುಣಗಳನ್ನು ಸ್ಮರಿಸಿಕೊಂಡು ಗೋಳಿಡುತ್ತಿದ್ದಾರೆ.

೫೬. ಪಡಪಡ+ಪಾಯ್ವ=ಪಡಪಡವಾಯ್ವ—ಚಡಪಡಿಸುತ್ತಿರುವ, ಬಿಗುರ್ತಿರೆ (ಬಿಗುರ್=ಧಾ)=ಮುಂದೇನೆಂದು ತೋರದೆ ಭಯಪಟ್ಟಿರಲು, ನಿಡುಪಂ ಅಳುಂಬಮುಂ ಅಪ್ಪಿನೆಗಂ=ನೀಳವೂ ಅತಿಶಯವೂ ಆಗಿರಲು, ಈಶಂ ಅದೆಲ್ಲಿದಂ ಎತ್ತವೋದಂ ಆವೆಡೆಯಂ ಅಧೀಶಂ–ಪದವಿಭಾಗ. ಅಜಿತನ ಅಂಗನಾಜನ ಹಲವು ಬಗೆಯಿಂದ, ಹಲವು ಮಾತುಗಳಿಂದ ಹಲುಬುತ್ತಿದ್ದರು.

೫೭. ಗುಱುಗುಮ್ಮನೆ=ಅತ್ಯಂತ ಮೌನವಾಗಿ–ಯಾವ ಕೆಲಸವನ್ನೂ ಮಾಡದೆ. ತಮ್ಮ ಮಗ ಯೋಚಿಸದಿದ್ದರೆ ಹೋಗಲಿ ತಾವಾದರೂ ನಮ್ಮ ಬಗ್ಗೆ ಯೋಚಿಸಿದರೆ ಎಂದು ತಮ್ಮ ಅತ್ತೆಮಾವನ ಬಗೆಗೆ ಬೇಸರಿಸುತ್ತಾರೆ. ಅಜಿತನಿಲ್ಲದ ಮನೆ ಪಾಟ್ಮನೆ, ಅಜಿತನಿರುವೆಡೆಗೆ ಹೋಗುವುದೇ ಸರಿಯೆಂಬ ನಿಶ್ಚಯ. ಚೀ–ತಮ್ಮ ಬಾಳು ಎಷ್ಟು ನಿಕೃಷ್ಟವಾಯಿತೆಂಬುದನ್ನು ಈ ಅವ್ಯಯ ಎಷ್ಟು ಶಕ್ತಿ

ಯುತವಾಗಿ ಧ್ವನಿಸುತ್ತದೆ! ಇಲ್ಲಿ ಅಜಿತನಿಲ್ಲದ ಮನೆ ಪಾಟ್ಟಿನೆಯಾದರೆ, ಅಲ್ಲಿ (ಗ. ಯು) ಕರ್ಣನಿಲ್ಲದ ನೆಲ ಪಾಟ್ಚಿಲ.

ವ : ಬಾಜಿಸು=ಗದರಿಸು, ನಿಕಾಮ (ಸಂ.–ಅ)=ಅತಿಶಯವಾದ— 'ನಿಕಾಯ' ಎಂದಿರಬಹುದೆ (?)

ಪರ್ಯಂಕಾಸನ=ಪರಿ+ಅಂಕ+ಆಸನ=ಅಂಕ (ತೊಡೆ)ದ ಮೇಲೆ ಪಾದಗಳನ್ನಿಡುವ–ಎರಡೂ ತೊಡೆಗಳ ಮೇಲೆ ಎರಡು ಪಾದಗಳನ್ನು ಇಡುವ ಆಸನ–ಶುದ್ಧ ಪದ್ಮಾಸನ. ತ್ರಿಸಾಕ್ಷಿಕನಾಗಿ=ಆತ್ಮ, ಇಂದ್ರ, ಸಿದ್ಧಪರಮೇಷ್ಠಿಗಳು ಈ ಮೂವರ ಸಾಕ್ಷಿಯಾಗಿ.

೫೮. 'ನಮಸ್ಸಿದ್ಧೇಭ್ಯಃ' ಎಂದು ಸಿದ್ಧಪರಮೇಷ್ಠಿಗಳನ್ನು ಸ್ಮರಿಸಿ, ಕರ್ಮದ ಬೇರುಗಳನ್ನು ಹರಿಯುವಂತೆ-ಕಿತ್ತೆಸೆಯುವಂತೆ ದುಂಬಿಗಳ ಮಾಲೆಯೋ ಎಂಬಂತಿದ್ದ ತನ್ನ ಸುಂದರ ಕೇಶರಾಶಿಯನ್ನು ಐದು ಮುಷ್ಟಿಯಿಂದ ಹರಿದನು. ಮುನಿದೀಕ್ಷೆಯನ್ನು ತೆಗೆದುಕೊಂಡುದೇ ತಡ, ಕೂಡಲೆ ಮನಃ ಪರ್ಯಯ ಜ್ಞಾನವೂ ಉದಯಿಸಿತು. ಈಗಾಗಲೇ ತ್ರಿಜ್ಞಾನಿಯಾಗಿದ್ದವನು. ಈಗ ಚತುರ್ಜ್ಞಾನಿಯೂ ಆದನು,

ವ : ಪವಿತ್ರ ವಸ್ತುವನ್ನು ಪವಿತ್ರ ಸ್ಥಳದಲ್ಲಿಯೇ ಹಾಕಬೇಕೆಂಬ ಕಾರಣದಿಂದ ದೇವ ಸಮೂಹವು ಕೇಶಪಟಲವನ್ನು ವೈಭವದಿಂದ ತೆಗೆದುಕೊಂಡು ಹೋಗಿ ಕ್ಷೀರ ಸಮುದ್ರದಲ್ಲಿ ಹಾಕಿತು. ರೂಢಿಯಲ್ಲೂ ಈ ಕ್ರಮವನ್ನು ಕಾಣಬಹುದು.

೫೯. ಜನ್ಮಾಭಿಷೇಕೋತ್ಸವಕ್ಕೆ ಕ್ಷೀರಸಮುದ್ರವು ತಾನು ಕೊಟ್ಟ ಕ್ಷೀರ ಜಲಕ್ಕೆ ವಿನಿಮಯವಾಗಿ ಈ ಜಿನನ ಅಳಕದಲಾಭವಾಯಿತೆಂದು ಹಿಗ್ಗಿನಿಂದ ಕುಣಿಯುವಂತೆ ತೋರಿತಂತೆ! ಇಲ್ಲಿ ರೂಪಕಾಲಂಕಾರವೂ ಉತ್ಪ್ರೇಕ್ಷಾಲಂಕಾರವೂ ಇವೆ.

೬೦. ದಿಗಂಬರನಾಗಿ ನಿಂತ ಅಜಿತನ ಚಿತ್ರ–ವಸ್ತ್ರ, ಸುಗಂಧದ್ರವ್ಯ, ಆಭರಣಗಳನ್ನು ಕಿತ್ತೆಸೆದ ಅಜಿತನು ಸಂಜೆಗೆಂಪಿನಿಂದ ಕೂಡಿದ ಮೋಡದಿಂದ ವಿರಹಿತನಾದ ರವಿಯಂತಿದ್ದನು.

೬೧. ಪಂಕೇಜಾತ=ಕಮಲ, ಮುಗ್ಗಿ=ಬಿದ್ದು ಅಭವನಂ=ಭವವಿಲ್ಲದವನನ್ನು–ದೇವನನ್ನು, ಅಭ್ಯರ್ಚಿತು ಮಾಡಿ=ಪೂಜಿಸಿ.

## ಕೇವಲ ಜ್ಞಾನ ಕಲ್ಯಾಣಂ

೧. ಕಲ್ಪಂ=ಸದೃಶನಾದವ. ಕಲ್ಪಾಮರ=ಕಲ್ಪಲೋಕವಾಸಿ ದೇವತೆ, ಸಮೀಚೀನ ಚರಿತಂ=ಯೋಗ್ಯವಾದ-ಶ್ರೇಷ್ಠವಾದ ಚಾರಿತ್ರ್ಯ ಉಳ್ಳವನು, ಅಪಗತದುರಿತಂ=ಪಾಪದೂರನಾದವನು.

ವ: ದಾನಧರ್ಮ ಪ್ರಕಾಶನಂ ಮಾಡಲೆಂದು=ದಾನವೆಂಬ ಧರ್ಮವನ್ನು ಲೋಕದಲ್ಲಿ ಬೆಳಗುವ ಸಲುವಾಗಿ, ಯುಗಾಂತರ ದೃಷ್ಟಿಯಾಗಿ=ನಾಲ್ಕು ಮೊಳ ದೂರದವರೆಗೆ ನೆಲದ ಮೇಲೆ ದೃಷ್ಟಿಯನ್ನಿರಿಸಿದವನಾಗಿ, ಚರ್ಯಾ ಮಾರ್ಗ =ಮುನಿ ಭಿಕ್ಷೆಗಾಗಿ ತಿರುಗು-ಸಂಚರಿಸುವುದು; ಭಿಕ್ಷಾಟನೆ. ಜಘನ್ಯೋತ್ತಮ ಕೀಳು, ಮೇಲು-ಜೈನಮುನಿ ಆಹಾರವನ್ನು ಸ್ವೀಕರಿಸಲು ಶ್ರಾವಕರಲ್ಲಿ ಇವಕೀಳು, ಇವಮೇಲು ಎಂಬ ವ್ಯತ್ಯಾಸವನ್ನು ಕಾಣರು. ಚಂದ್ರಗತಿ=ಮಂದಗಮನ, ಮುನಿಗಳು ಆಹಾರಕ್ಕಾಗಿ ಅಲೆದಾಡುವ ವಿಶಿಷ್ಟ ರೀತಿ; ಬಡವ-ಬಲ್ಲಿದ ಭೇದ ಮಾಡದೆ ಯತಿಗಳು ಎಲ್ಲ [ಜೈನ]ರ ಮನೆಗಳ ಮುಂದೆ ಆಹಾರಕ್ಕಾಗಿ ಹೋಗುವ ವಿಶಿಷ್ಟ ರೀತಿ. ಅಷ್ಟ ಮಂಗಳ=ಎಂಟು ಬಗೆಯ ಮಂಗಳ ವಸ್ತುಗಳು—ಛತ್ರ, ಧ್ವಜ, ಕಲಶ, ಚಾಮರ, ಸುಪ್ರತಿಷ್ಟಕ (ಪೂಜಾದ್ರವ್ಯಗಳನ್ನಿಡುವ ಒಂದು ಬಗೆಯ ಪಾತ್ರೆ) ಭೃಂಗಾರ (ಗಿಂಡಿ), ಕನ್ನಡಿ. ಬೀಸಣಿಗೆ

೨. ಕ್ರಮಾನುಸಾರ ಸ್ವಾಮಿಯನ್ನು ಎದುರುಗೊಂಡನು, ಶ್ರದ್ಧಾ, ಶಕ್ತಿ, ಭಕ್ತಿ, ವಿಜ್ಞಾನ (ವಿಧಿಯ ತಿಳಿವಳಿಕೆ), ಅಲುಬ್ಧತೆ (ಯೋಗ್ಯ ವಸ್ತುಗಳಲ್ಲಿ ಲೋಭವಿಲ್ಲದಿರುವಿಕೆ) 'ಕ್ಷಮಾ', 'ತ್ಯಾಗ'-ಈ ಏಳು ದಾನಕೊಡುವವನ ಗುಣಗಳು. ಪಾತ್ರದ ಸ್ಥಾಪನೆ, (ಎದುರುಗೊಂಡು ನಿಲ್ಲಿಸುವಿಕೆ) ಉನ್ನತವಾದ ಸ್ಥಾನದಲ್ಲಿ ಕುಳ್ಳಿರಿಸುವಿಕೆ, ಪಾದ ಪ್ರಕ್ಷಾಲನೆ, ಪೂಜೆ, ನಮಸ್ಕಾರ. ಮನಃ ಶುದ್ಧಿ, ಕಾಯಶುದ್ಧಿ, ಆಹಾರ ಶುದ್ದಿ-ಈ ಒಂಬತ್ತು ದಾನ ಕೊಡುವವನ ಪುಣ್ಯಗಳು. ಬ್ರಹ್ಮನೃಪನ ಈ ಸೇವೆ ಕವಿಗೆ ಕೂಡಲೆ ಅತ್ತಿಮಬ್ಬೆಯನ್ನು ನೆನಪಿಗೆ ತರುತ್ತದೆ !

ವ: ಪಾಣಿಪಾತ್ರ=ಮುನಿಗೆ ಆಹಾರ ಸ್ವೀಕರಿಸಲು ಕೈಯೇ ಪಾತ್ರೆ, ಇಕ್ಷುರಸ=ಕಬ್ಬಿನ ರಸ, ಪಯೋರಸ=ಹಾಲು ಪಾನ=ಪಾನೆ (ಕುಡಿಯುವ ಪಾತ್ರೆ) (?) ಅಂತರಾಯ=ವಿಘ್ನ. ನಿರಂತರಾಯದಿ=ಮುನಿಯ ಆಹಾರ

ಸ್ವೀಕಾರಕ್ಕೆ ಯಾವ ಅಡ್ಡಿಯೂ ಬರದ, ಉತ್ತಮ ಪಾತ್ರ=ದಾನವನ್ನು ಪಡೆಯಲು ಯೋಗ್ಯ. ದಾನಕ್ಕೆ ಮುನಿ ಉತ್ತಮಪಾತ್ರ

೩. ಉತ್ತಮ ಪಾತ್ರಕ್ಕೆ ದಾನಮಾಡಿದ ಫಲವಾಗಿ ಐದುಬಗೆಯ ಆಶ್ಚರ್ಯಗಳುಂಟಾಗುತ್ತವೆ. 'ದಾನಕೊಟ್ಟಾಗ ಉಂಟಾಗುವ ಪಂಚಾಶ್ಚರ್ಯಗಳಲ್ಲಿ ದೇವೇಂದ್ರರು ಅನ್ನುವ ಅಹೋದಾನ! ಅಹೋದಾನ! ಎಂಬ ಕೊಂಡಾಟದ ನಿರ್ಘೋಷ' [ಆ. ಪು. ೪-೯೮]ವೂ ಒಂದು. ಈ ದಾನ ಫಲವಾಗಿಯೇ ಉತ್ತಮ ಭೋಗಭೂಮಿಗಳಲ್ಲಿ ಹುಟ್ಟುತ್ತಾರೆ.

ವ: ಅಕ್ಷಯ ದಾನಮಕ್ಕೆ=ನಿನ್ನ ದಾನ ಅಕ್ಷಯವಾಗಲಿ-ಇದು ಮುನಿಯ ಹರಕೆ. ನಗರ=ನಾಲ್ಕು ಗೋಪುರಗಳಿಂದ ಪ್ರಕಾಶಮಾನವಾದ, ಚಂದ್ರಶಾಲೆಗಳನ್ನುಳ್ಳ ಮಹಾಪಟ್ಟಣ.

೪. ಮತ್ತೆ ತಪೋನಿಷ್ಠನಾದ ಮುನಿಯ ಚಿತ್ರ ಇದು. ಮಲ=[ದೇಹದ] ಕೊಳೆ. ಕೈಗೈ=ಸಿದ್ಧನಾಗು, ಸಿಂಗರಿಸು, ಇಲ್ಲಿ ಕಾರಣಾಲಂಕಾರ ವಿದೆ-"ಕಾರಣಸ್ಯ ಚ ಕಾರ್ಯಸ್ಯ ವರ್ಣನಂ ಕಾರಣಂವಿದುಃ" ಇಲ್ಲಿ ಮುಕ್ತಿಯನ್ನು ಪಡೆಯುವುದು ಕಾರ್ಯ; ಅದಕ್ಕೆ ತಕ್ಕ ರೀತಿಯ ಅನುಷ್ಠಾನ ಕಾರಣ.

೫. ವನನಿಧಿ=ಸಮುದ್ರ. ಅಕ್ಷೋಭ=ಗಾಂಭೀರ್ಯವುಳ್ಳವನು, ಘನಮಾರ್ಗ=ಮೇಘಮಾರ್ಗ—ಆಕಾಶ

೬. ಮುನಿಯ ತಪಃ ಪ್ರಭಾವದ ವರ್ಣನೆ-ಪ್ರಾಣಿಗಳು ಸಹಜವಾದ ಜಾತಿ ವೈರವನ್ನು ಬಿಡುತ್ತವೆ. ಕಲಭ=ಆನೆಯ ಮರಿ. ಅಹಿ=ಹಾವು, ನಕುಲ=ಮುಂಗಸಿ, ಚಮೂರ=ಹುಲಿ.

೭, ಪ್ರಕೃತಿಯೂ ಮುನಿಯ ಸೇವೆಯಲ್ಲಿ ಪಾಲ್ಗೊಂಡಿತು. ಮಿಳಿರ್ವ=ಅಲುಗಾಡುವ, ವನಾವನಿಜಂಗಳ್-ಕಾಡಿನ ಮರಗಳು, ಗಿಡಮರಗಳು ತಾವೇ ತಮ್ಮ ಕೊಂಬೆಗಳೆಂಬ ಕೈಗಳಿಂದ ಮುನೀಶ್ವರನ ಪಾದ ಕಮಲಗಳಲ್ಲಿ ಹೂಗಳನ್ನು ಸುರಿದುವು; ಸರೋವರವು ಗಾಳಿಯ ಬಡಿತದಿಂದ ಮೇಲೆದ್ದ ಅಲೆಗಳೆಂಬ ತೋಳುಗಳಿಂದ ಶೋಭಿಸುತ್ತಾ, ಕೆಂದಾವರೆಗಳ ಸಮೂಹದಿಂದ-ಮಂಗಳಕರವಾದ ಕೈಗಳಿಂದ ಮುನಿಯ ಪಾದಗಳನ್ನು ತೊಳೆಯಿತು. ಇಲ್ಲಿ ಉತ್ಪ್ರೇಕ್ಷಾಲಂಕಾರವಿದೆ.

ವ: ಜಿನಕಲ್ಪ ಚರಿತ್ರದಿಂ=ಜಿನಮುನಿಗಳಿಗೆ ವಿಧಿಸಲ್ಪಟ್ಟಿರುವ ಎಲ್ಲ ನಿಯಮಂಗಳನ್ನೂ ಪೂರ್ಣವಾಗಿ ಪಾಲಿಸುವುದರಿಂದ, ಛದ್ಮಸ್ಥಕಾಲಂ=ಆತ್ಮನು

ಕೇವಲ ಜ್ಞಾನವನ್ನು ಪಡೆಯುವುದಕ್ಕೆ ಹಿಂದಿನ ಅವಸ್ಥೆಯಲ್ಲಿರುವ–ಮಾರೆಸಿಕೊಂಡಿರುವ ಕಾಲ. ಯೋಗ=ಚಿತ್ತವೃತ್ತಿನಿರೋಧ. ವಾಕ್ ಸಂಯಮಂ=ಮೌನ, ಅವಹಿತ=ನಿಯೋಜಿಸಿದ—ಅವಧಾನಗೊಂಡ, ಅವಹಿತಧ್ಯಾನ=ಧ್ಯಾನದಲ್ಲಿ ಮಗ್ನನಾದ,

೮. ಉಗ್ರೋಗ್ರ ತಪಸ್ಸನ್ನಾಚರಿಸುತ್ತಿರುವ ಅಜಿತಮುನಿಗೆ, ಲಕ್ಷ್ಮಿ ಸಿಂಹಪೀಠವನ್ನೂ ಆತಪತ್ರವನ್ನೂ ತಂದಿಟ್ಟಳು. ಗೂಢಪದ್ಮವಿಷ್ಟರಮಂ=ಗೂಢವಾದ ಪದ್ಮಪೀಠವನ್ನು–ಗುಪ್ತವಾದ ತಾವರೆಯ ಸಿಂಹಾಸನವನ್ನು, ನಿರಾದರಂಗೆ=ಸುಖದ ಆಸನವನ್ನು ಆದರಿಸದವನಿಗೆ, ಆತಪತ್ರ=ಛತ್ರಿ, ಅಲಕ್ಷಂ=ಲಕ್ಷಿಸದ, ತದ್ವಿಗುಣದೆ=ಅದಕ್ಕೆ ಎರಡರಷ್ಟು–ಅವಳ ಆದರಕ್ಕೆ ಎರಡರಷ್ಟು ಅನಾದರವುಳ್ಳವನಾಗಿ.

೯. ಮುನಿಯ ಯೋಗಮುದ್ರೆಯ ಚಿತ್ರ ಇಲ್ಲಿಂದ ಮೂರು ಪದ್ಯಗಳಲ್ಲಿದೆ. ಕಾಯೋತ್ಸರ್ಗ (ಕಾಯ+ಉತ್ಸರ್ಗ)=ಕೈಗಳನ್ನು ಇಳಿ ಬಿಟ್ಟುಕೊಂಡು ದೇಹವನ್ನು ನೇರವಾಗಿ ಮತ್ತು ನಿಶ್ಚಲವಾಗಿರಿಸಿಕೊಂಡು ಎರಡು ಪಾದಗಳ ಹಿಂಭಾಗವು–ಹಿಮ್ಮಡಿ–ನಾಲ್ಕು ಅಂಗುಲ ಎತ್ತರವಿರುವಂತೆಯೂ, ಎರಡೂ ಪಾದಗಳ ತುದಿ ಹನ್ನೆರಡು ಅಂಗುಲ ದೂರದಲ್ಲಿರುವಂತೆಯೂ ನಿಂತಿರುವುದು. ಋಜ್ವಾಗತ (ಋಜು+ಆಗತ) ನೇರವಾದಮಾರ್ಗ, ಸಹಜಮಾರ್ಗ.

೧೦. ವದನವು ಸ್ಥಿರವಾದ ಕಣ್ಣುಳ್ಳದು. ಕಣ್ನೋಟವುಳ್ಳದು. ಶ್ಲಿಷ್ಟ ದಂತಂ=ಕೂಡಿದ ಹಲ್ಲುಗಳು–ತುಟಿಗಳುಳ್ಳದು. ಅಪ್ಪಾಂಗಪಾತ(?) [ಅಪಾಪಾಂಗಪಾತ=ಕಡೆಗಣ್ನೋಟವಿಲ್ಲದಿರುವುದು] 'ಅಪಾಂಗಪಾತ' ಎಂಬ ಪಾಠವನ್ನು ಸ್ವೀಕರಿಸಿದರೆ ಛಂದೋ ಭಂಗವಾಗುತ್ತದೆ. ಅಭ್ರೂಭಂಗಾಸ್ಪದಂ=ಹುಬ್ಬುಗಂಟಿಲ್ಲದಿರುವುದು–ಇದೆಲ್ಲವೂ ಆ ಮಹಾಮುನೀಂದ್ರರ ಯೋಗ ನಿಯೋಗದಲ್ಲಿ ಶೋಭಿಸಿತು.

೧೧. ಕನತ್–ಸ್ವನದಿಂ=ಧ್ವನಿಗೈಯ್ಯುತ್ತಿರುವ ಸಮುದ್ರದ ಗರ್ಜನೆಯ ಧ್ವನಿಯಿಂದ, ಗುಂಜದ್ಗುಹಾದ್ರಿಯೆನೆ=ಗುಂಜಾರವದ ಗುಹೆಗಳನ್ನುಳ್ಳ ಪರ್ವತ ಎನ್ನುವಂತೆ, ಮನ...ಎಸೆಯೆ=ಮನಸ್ಸಿನಲ್ಲಿ ಅವ್ಯಕ್ತವಾಗಿ ಮಂತ್ರಾಕ್ಷರಗಳನ್ನು ಝೇಂಕರಿಸುವ ಶಬ್ದವು ಶೋಭಿಸಲು, ಮಂದರ ಕಲ್ಪಂ ಜಿನನಿರ್ದಂ, ಧ್ವನಿ

ಎಂಬುದರ ಸಮಾನಶಬ್ದ ಎರಡುಸಲ ಬಂದಿರುವುದರಿಂದ ವಿಶೇಷವಾದ ಧ್ವನಿ ಎಂದು ಭಾವಿಸಬೇಕು. ಜಲ್ಪ=ಅಸ್ಪಷ್ಟವಾದ ಉಚ್ಚಾರಣೆ.

ವ: ಶುಕ್ಲಧ್ಯಾನ=ನಾಲ್ಕುಬಗೆಯ ಧ್ಯಾನಗಳಲ್ಲಿ ಕಡೆಯದಾದ ಪರಿಶುದ್ಧವಾದ ಧ್ಯಾನ-ಮುಕ್ತಿ ಹೊಂದುವುದನ್ನೇ ಕುರಿತು ಚಿಂತಿಸುವುದು, ಘಾತಿ ಚತುಷ್ಟಯ=ನಾಲ್ಕು ಬಗೆಯ ಘಾತಿಕರ್ಮ (ಜ್ಞಾನಾವರಣ, ದರ್ಶನಾವರಣ ವೇದನೀಯ, ಮೋಹನೀಯ.)

೧೨. ಅಹಿಮಕೃನ್ಮಂಡಲ=ಸೂರ್ಯ ಮಂಡಲ, ಔರ್ವಾನಳ=ಬಡಬಾಗ್ನಿ, ಕರ್ಮವೇಲ್ಲದ್ವನದಾಹ=ಕರ್ಮವೆಂಬ ಅಲುಗಾಡುವ ವನವನ್ನು ಸುಡುವ ಬೆಂಕಿ, ತೀರ್ಥಕೃನ್ಮಂಡನನೊಳ್=ತೀರ್ಥಂಕರತ್ವವು ಭೂಷಣಪ್ರಾಯವಾಗಿರುವವನಲ್ಲಿ; ತ್ರಿಭುವನಜನ ಮಾಂಗಲ್ಯ ಕೈವಲ್ಯ ಬೋಧಂ=ಮೂರು ಲೋಕದ ಜನಕ್ಕೆ ಮಂಗಳಕರವಾದ ಕೇವಲ ಜ್ಞಾನ, ಅಗಾಧಂ=ಅತ್ಯಧಿಕವಾದ-ಅತ್ಯತಿಶಯವಾದ; ಆಳವಾದ. ಪ್ರಗುಣ=ಮಹತ್ತರವಾದ ಯೋಗ್ಯತೆಯುಳ್ಳ. ಅಜಿತನಿಗೆ ಕೇವಲ ಜ್ಞಾನೋತ್ಪತ್ತಿಯಾದುದನ್ನು ಉತ್ತಮವಾದ ಮೂರು ಉಪಮಾನಗಳಿಂದ ವಿವರಿಸಲಾಗಿದೆ. ಹಿಮಕೃತ್ (ಚಂದ್ರ) × ಅಹಿಮಕೃತ್ (ಸೂರ್ಯ).

## ನಿರ್ವಾಣ ಕಲ್ಯಾಣ

ವ: ದುರಿತ ತಿಮಿರ ವಿಘಟನ ಪಟು=ಪಾಪವೆಂಬ ಕತ್ತಲನ್ನು ನಾಶ ಮಾಡುವುದರಲ್ಲಿ ಸಮರ್ಥ, ಕೇವಲಜ್ಞಾನ ಭಾನು—ಕೇವಲ ಜ್ಞಾನವೆಂಬ ಸೂರ್ಯ, ರೂಪಕಾಲಂಕಾರ ಇದೆ.

೧. ಕೇವಲ ಜ್ಞಾನವಾದ ಕೂಡಲೆ ಅಜಿತದೇವನಿಗೆ ದೇವೇಂದ್ರನಿಂದ ಅಷ್ಟ ಮಹಾಪ್ರಾತಿಹಾರ್ಯಗಳುಂಟಾದುವು-ಸಿಂಹಪೀಠ, ದೇವತೆಗಳಿಂದ ಹೂಮಳೆ, ಕೋಮಲವಾದ ಅಶೋಕವೃಕ್ಷ, ಸುಂದರವಾದ ಚಾಮರಗಳು, ಸರ್ವ ಭಾಷಾಮಯಿಯಾದ ದಿವ್ಯಭಾಷೆ, ಅಂದವಾದ ಬಿಳಿಯ ಮುಕ್ಕೊಡೆ, ದೇವತೆಗಳ ಮಂಗಳ ವಾದ್ಯಧ್ವನಿ, ಸೂರ್ಯಮಂಡಲ ಸದೃಶವಾದ ಪ್ರಭಾಮಂಡಲ. ದಿವ್ಯ ಭಾಷೆ : ಒಂದೇ ಪ್ರಕಾರವಾಗಿದ್ದರೂ ಜಿನೇಶ್ವರನ ಮಹಿಮೆಯಿಂದ ಸಮಸ್ತ ಮನುಷ್ಯರ ಭಾಷೆಗಳನ್ನೂ, ಅನೇಕ (೭೦೦) ಕ್ಷುಲ್ಲಕ ಭಾಷೆಗಳನ್ನೂ ಒಳಗೊಂಡು

ಸಮಸ್ತ ಪ್ರಾಣಿಗಳಿಗೂ ಅವುಗಳ ಭಾಷೆಯಲ್ಲೇ ಅರಿವಾಗಿ ಅಜ್ಞಾನವನ್ನು ಹೋಗಲಾಡಿಸುವಂತಹುದು.

ವ : ಚತುಸ್ತ್ರಿಂಶತ್ (ಮೂವತ್ತನಾಲ್ಕು) ಅತಿಶಯಗಳು—ಜಿನನಾಗಲಿರುವವನಿಗೆ ಹುಟ್ಟಿನಿಂದಲೇ ಇರುವ ಹತ್ತು ಅತಿಶಯಗಳು ಕೇವಲಜ್ಞಾನ ಪ್ರಾಪ್ತವಾದ ಕಾಲದಲ್ಲಿ ಅದರಿಂದ ಕಂಡುಬರುವ ಹತ್ತು ಅತಿಶಯಗಳು ಮತ್ತು ದೇವತೆಗಳ ಜಿನನಿಗೆ ಮಾಡುವ ಹದಿನಾಲ್ಕು ಅತಿಶಯಗಳು—ಒಟ್ಟು ಮೂವತ್ತನಾಲ್ಕು. ಕೇವಲಾಗಮನನಾಗಿ=ಕೇವಲಜ್ಞಾನವನ್ನು ತಿಳಿದವನಾಗಿ ಬಲಾಹಕ ವಿಕ್ರಿಯಾ ವಿನಿರ್ಮಿತಂ ಅಪ್ಪ=ಬಲಾಹಕನೆಂಬ ದೇವನು ತನ್ನ ವಿಕ್ರಿಯಾ ಶಕ್ತಿಯಿಂದ ನಿರ್ಮಿಸಿದ ಕಾಮುಕೀ (ಕಾಮುಗ) ವಿಮಾನ. ನಾಗದತ್ತ ವಿಕ್ರಿಯಾ ಸಮುದ್ಭೂತಂ ಅಪ್ಪ=ನಾಗದತ್ತನೆಂಬ ವಾಹನ ದೇವತೆಗಳ ಅಧಿಪತಿಯು ವಿಕ್ರಿಯಾ ಶಕ್ತಿಯಿಂದ ಐರಾವತ ಗಜದ ಆಕಾರವನ್ನು ಧರಿಸಲು, ಸಪ್ತಾನೀಕಂ= ಏಳು ಬಗೆಯ ಸೈನ್ಯ ಸಮಾನರಾದ ಗಜ, ರಥ, ಅಶ್ವ, ಕಾಲಾಳು, ವೃಷಭ, ಗಂಧರ್ವ, ನರ್ತಕೀ—ಈ ಏಳು ಬಗೆಯ ದೇವತೆಗಳು. ಉಪಹೃತ= ಅರ್ಪಿಸಲ್ಪಟ್ಟ, ಕಾಣಿಕೆಯಾಗಿ ಒಪ್ಪಿಸಿದ.

ಸ್ತೋತ್ರ : ಘನ=ಮೋಡ, ಕೃತಭವ್ಯಜನಪುಳಕ=ಭವ್ಯಜನರಿಗೆ ರೋಮಾಂಚನವನ್ನುಂಟುಮಾಡಿದವನು. ತಮೋವಿಲಯ=ಅಜ್ಞಾನವೆಂಬ ಕತ್ತಲಿಗೆ ಪ್ರಳಯ ಸ್ವರೂಪನಾದವನು. ನಿರ್ದಳಿತ=ನಿತರಾಂದಳಿತ—ಚೆನ್ನಾಗಿ ನಾಶಮಾಡಲ್ಪಟ್ಟ.

೨. ಸ್ವಾಪತೇಯಪತಿ=ಸಂಪತ್ತಿಗೆ ಒಡೆಯ—ಕುಬೇರ, ಜಗನ್ಮಂಡನ= ಜಗತ್ತಿಗೇ ಭೂಷಣವಾದ, ಸಮವಸರಣ=ಜಿನಸಭೆ, ದೇವೇದ್ರನ ಅಪ್ಪಣೆಯಂತೆ ಕುಬೇರನು ಜಿನ ಸಭೆಗಾಗಿ ವೈಭವದಿಂದ ಮಹಾಮಂಡಪವನ್ನು ನಿರ್ಮಿಸುತ್ತಾನೆ.

೩. ಸಮವಸರಣ—ಭೂಮಂಡಲ ಈ ಮಹಾಮಂಡಪವು ಒಂದು ಮಹಾ ನಗರವೇ ಇದ್ದಂತೆ!

೪. ಒಲ್—ಒಳ್, ಇರ್ದಂ—ಇವಿಷ್ಟೇ ಕನ್ನಡ. ಜ್ಯೋತಿರ್+ಓಘ= ಜ್ಯೋತಿರೌಘ—ಬೆಳಕಿನ ಪ್ರವಾಹ, ವೃದ್ಧಿಸಂಧಿ. ಅಪಗತ=ಕಳೆದು ಹೋದ ಘಾತಿದ್ವಿಷದ್=ಘಾತಿಯೆಂಬ ಶತ್ರು, ಕಲಧೌತಕ್ಷ್ಮಾಧರ=ಕಾಂಚನ ಪರ್ವತ.

ದವರು ಯಾರಾದರೂ ಇದ್ದಾರೆಯೇ ? ಎಂದರೆ ಜಗತ್ತಿನಲ್ಲಿ ನಿನಗೆ ಎರಗ ದವರು ಯಾರೂ ಇಲ್ಲವೆಂದು ಭಾವವು.

೧೦. ನಿನಗೆ ಸಮಾನರಾದವರು ಬೇರೆ ಯಾರನ್ನೂ ಕಾಣೆನು. ಇಲ್ಲಿ ಉಪಮಾನೋಪಮೇಯಗಳೆರಡೂ ಒಂದರಲ್ಲಿಯೇ ಇವೆಯೆಂದು ಹೇಳುವುದ ರಿಂದ ಅನನ್ವಯಾಲಂಕಾರ.

೧೧. ಮೇರು ಚೂಡಾಮಣಿ=ಮೇರುವಿಗೂ ಉನ್ನತನಾದ ಶ್ರೇಷ್ಠ ವ್ಯಕ್ತಿ, ವಿನೇಯದಾನ ಚಿಂತಾಮಣಿ ಎನ್ನುವಲ್ಲಿ ಕವಿ ಅತ್ತಿಮಬ್ಬೆಯನ್ನು ಸ್ಮರಿಸು ತ್ತಾನೆ. ಚೂಡಾಮಣಿ ಮರೀಚಿರಂಜಿತ ಚರಣಾ=ದೇವತೆಗಳ ಕಿರೀಟರತ್ನ ಕಾಂತಿಯಿಂದ ರಂಜಿತ ಚರಣಗಳನ್ನುಳ್ಳವನು.

ವ: ಸ್ವಯಂಭು=ತನ್ನಿಂದ ತಾನೆ ಇರುವವನು-ಉಂಟಾದವನು—ಸ್ವಶಕ್ತಿ ಯಿಂದ ಇಂತಹ ಲೋಕೋತ್ತರ ಸ್ಥಾನವನ್ನು ಗಳಿಸಿಕೊಂಡವನು, ಸರ್ವದರ್ಶಿ= ಜ್ಞಾನಚಕ್ಷುವಿನಿಂದ ಎಲ್ಲವನ್ನೂ ಕಾಣಬಲ್ಲವನು, ಸರ್ವಗತ=ಸರ್ವವ್ಯಾಪಿ ಅನ್ವರ್ಥಂ=ಮಾಡೆ ಅರ್ಥಪೂರ್ಣವಾಗುವಂತೆ ಮಾಡಲು, ತ್ರಿಣೇತ್ರ ಮೂರು ಕಣ್ಣುಗಳು—ಬಾಹ್ಯನೇತ್ರಗಳು ಎರಡು ಮತ್ತು ವಿಮಲ ಜ್ಞಾನವೆಂಬ ಒಂದು ನೇತ್ರ.

೧೨. ಪುಣ್ಯಾರ್ಜನ (ಪುಣ್ಯ+ಅರ್ಜನ) —ಪುಣ್ಯೋಪಾರ್ಜನ(ಪುಣ್ಯ+ ಉಪಾರ್ಜನ)=ಪುಣ್ಯಸಂಪಾದನೆ, ಸ. ದೀ. ಸಂ.—ಗು. ಸಂ. ಕೂಡುವೆಂ= ಸೇರಿಸಿಕೊಳ್ಳುತ್ತೇನೆ. ತೀರ್ಥಭೂಪಾಲ=ಗೌರವಕ್ಕೆ ಪಾತ್ರನಾದ ದೊರೆ, ಪುಣ್ಯಾತ್ಮನಾದ ದೊರೆ, ಅರ್ಥಿ=ಯಾಚಕ, ಅರ್ಥಿಯಿಂ=ಅಟ್ಟಿಯಿಂ=ಪ್ರೀತಿ ಯಿಂದ, ಆಸಕ್ತಿಯಿಂದ ತೀರ್ಥಭೂಪಾಲನಾದ ಭರತ ಚಕ್ರೇಶ್ವರನು ಈ ಮೊದಲು ಅತ್ಯಾದರದಿಂದ ಬಂದು ಆದಿತೀರ್ಥೇಶ್ವರನ ಪಾದಗಳನ್ನು ಪ್ರೀತಿಯಿಂದ ಪೂಜಿಸಿ ಪುಣ್ಯ ಸಂಪಾದನೆ ಮಾಡಿದಂತೆ, ನಾನು ಪುಣ್ಯ ಸಂಪಾದನೆ ಮಾಡುವೆನೆಂದು ಸತ್ಯ ಭಾವನೆಂಬ ತೀರ್ಥಕ್ಷತ್ರಿಯನು ಅಜಿತನಾಥನನ್ನು ಭಾವ ಶುದ್ಧಿಯಿಂದ ಪೂಜಿಸಿ ದನು, ಈ ದೊರೆ ಸಮವಸರಣದಲ್ಲಿ ಶ್ರೋತೃ ಮುಖ್ಯನಾಗಿದ್ದನು.

ವ: ಗಣಧರ=ತೀರ್ಥಂಕರರ ಪ್ರಧಾನ ಶಿಷ್ಯ; ಶ್ರುತಕೇವಲಿ, ಪ್ರತ್ಯಕ್ಷ ಪರೋಕ್ಷ ಜ್ಞಾನಗಳೆರಡನ್ನೂ ಪಡೆದವ. ಸಮ್ಮೇದಾಚಲ=ಸಮ್ಮೇದ ಪರ್ವತ—ಬಿಹಾರಪ್ರಾಂತದ ಹಜಾರಿಬಾಗ್ ಜಿಲ್ಲೆಯಲ್ಲಿರುವ ಅತ್ಯಂತ ಪ್ರಸಿದ್ಧವೂ

೭: ಆವಹ=ಉಂಟುಮಾಡುವ, ಸಂಗೀತಕ=ಸಂಗೀತವಾದ್ಯಗಳೊಡನೆ ಸಾಮೂಹಿಕವಾಗಿ ಹಾಡುವುದು. ಇಲ್ಲಿಂದ ಮುಂದೆ ಕವಿಯುಭಕ್ತಿ ಬಳ್ಳಿಯ ಶೈಲಿಯಲ್ಲಿ ನಿರರ್ಗಳವಾಗಿ ಹರಿದಿದೆ. ಸ್ತುತಿಸಲ್ ಬಗೆದು—?

೫. ಘಟ್ಟಿತ=ತಾಕಿದ, ಸಿಂಹಾಸನ ಶಿಖರಸ್ಥಿತಚರಣಾ=ತೀರ್ಥಂಕರರು ಘಾತಿಕರ್ಮವನ್ನು ನಾಶ ಮಾಡಿದಾಗ ಆ ಕರ್ಮ ಪಾಶದಿಂದ ಬಿಡುಗಡೆಯನ್ನು ಹೊಂದಿ ಹರಳಿನ ಬೀಜದಂತೆ ಭೂಮಿಯಿಂದ ಐದುಸಾವಿರ ಧನುಷ್ಪ್ರಮಾಣ ಮೇಲೇರಿ ಅಲ್ಲಿ ವಿರಾಜಮಾನರಾಗುತ್ತಾರೆ. ದೇವೇಂದ್ರನು ಸಮವಸರಣವೆಂಬ ಮಣಿಮಯ ಮಂಟಪವನ್ನು ನಿರ್ಮಿಸಿ ಸ್ವಾಮಿಯ ಕೆಳಕ್ಕೆ ಸಂಯೋಜಿಸುವಂತೆ ಕುಬೇರನಿಗೆ ಅಪ್ಪಣೆ ಮಾಡುತ್ತಾನೆ. ಆದುದರಿಂದ ಸಿಂಹಾಸನದ ಶಿಖರದಲ್ಲಿ ಜಿನನ ಚರಣಗಳಿರುತ್ತವೆ. ಅಂಘ್ರಿ=ಪಾದದಿಂದ, ಪ=ಕುಡಿಯುವುದು (ಹೀರುವುದು)–ಸಸ್ಯಗಳು ಬೇರುಗಳಿಂದ ನೀರನ್ನು ಕುಡಿಯುತ್ತವೆಯಾದ್ದರಿಂದ ಅವುಗಳಿಗೆ ಅಂಘ್ರಿಪಗಳೆಂದೂ ಪಾದಪಗಳೆಂದೂ ಹೆಸರು.

೬. ನಿಳಿಂಪಪ್ರತತಿ=ದೇವತೆಗಳ ಸಮೂಹ (ನಿಲ್+ಇಂಪ=ಎವೆಗಳನ್ನು ಬಡಿಯದಿರುವುದು+ಎನ). ದೇವತೆಗಳ ಈ ಪುಷ್ಪವೃಷ್ಟಿ ಅತಿಶಯವೇ ಆದರೂ ಆಶ್ಚರ್ಯವೇನಲ್ಲ; ಲೋಕಕ್ಕೆಲ್ಲ ಧರ್ಮಾಮೃತ ವೃಷ್ಟಿಯನ್ನು ಕರೆದಂತಹವನಿಗೆ ಈ ಪುಷ್ಪವೃಷ್ಟಿ ಎಷ್ಟರದು?

೭. ವನಬರ್ಹಿ=ಕಾಡಿನಲ್ಲಿರುವ ನವಿಲು, ವಿಷ್ಟಪ=ಜಗತ್ತು. ಸಕಲ ತ್ರಿವಿಷ್ಟಪೈಕಾಧಿಪತೀ=ತ್ರಿಲೋಕಗಳಿಗೆಲ್ಲ ಒಬ್ಬನೇ ಅಧಿಪತಿ. ನವಿಲು ಆಕಾಶದಿಂದ ಬೀಳುವ ಮಳೆಯನೀರನ್ನು ಕುಡಿಯಲಿಚ್ಛಿಸುವುದೆಂದೂ ಆದರಿಂದ ಮೇಘಧ್ವನಿಯಾದಕೂಡಲೇ ಮಳೆ ಬರುವ ಸೂಚನೆಯೆಂದು ಸಂತೋಷಿಸುವುದೆಂದೂ ಪ್ರತೀತಿ (?)

೮. ನಾಕಾವತರಣ=ಸ್ವರ್ಗದಿಂದ [ತಾಯಿಯ ಗರ್ಭಕ್ಕೆ] ಇಳಿದು ಬರುವುದು—ಗರ್ಭಾವತರಣ ಕಲ್ಯಾಣ, ಭವದಭಿಷೇಕ (ಭವತ್+ಅಭಿಷೇಕ)=ಹುಟ್ಟಿದಾಗ ಮಾಡಿದ ಅಭಿಷೇಕ–ಜನ್ಮಾಭಿಷೇಕ ಕಲ್ಯಾಣ, ನಿಷ್ಕ್ರಮಣ ಕಲ್ಯಾಣ, ಕೇವಲೋದಯಾ–ಕೇವಲಜ್ಞಾನ ಕಲ್ಯಾಣ–ಹೀಗೆ ಈ ನಾಲ್ಕು ಕಲ್ಯಾಣಗಳೂ ಪ್ರಕಟಗೊಂಡವು. ಇನ್ನು ನಿರ್ವಾಣಕಲ್ಯಾಣವೊಂದು ಉಳಿದಿದೆ.

೯. ನಿನ್ನ ಪಾದಗಳಿಗೆ ಈ ಹೇಳಿದೆಲ್ಲರೂ ಎರಗುತ್ತಾರೆನ್ನುವಾಗ, ಎರ್ಗು

ಪವಿತ್ರವೂ ಆದ ತೀರ್ಥಕ್ಷೇತ್ರ—ಭವಸಾಗರವನ್ನು ಪಾರು ಮಾಡುವ ಮಾರ್ಗ ವನ್ನು ತಿಳಿಸುವ ಸ್ಥಳ.

೧೩. ಬರ್ದಂ=ಬದುಕಿಕೊಂಡೆನು-ಜನ್ಮ ಸಾರ್ಥಕವಾಯಿತು ಉದಗ್ರ =ಶ್ರೇಷ್ಠವಾದ--ತಲೆಯೆತ್ತಿನಿಂತ, ಸಮ್ಮೇದ ಪರ್ವತವು ಹೀಗೆಂದು ಹೆಮ್ಮೆ ಪಟ್ಟುಕೊಳ್ಳುತ್ತಿದೆ.

೧೪. ಆದಂ=ವಿಶೇಷವಾಗಿ, ವಿಯತ್+ಚರ=ವಿಯಚ್ಚರ--(ಆಕಾಶ ಗಾಮಿ) ಶ್ಚುತ್ವ ಸಂಧಿ.

ವ: ಅವನೀಧರ=ಬೆಟ್ಟ. ಕೃತಸಕಳಮೇದಿನೀ ವಿಹರಣನ್=ಸಮಸ್ತ ಭೂಮಂಡಲವನ್ನೂ ವಿಹಾರ ಮಾಡಿದವನು. ಒಂದು ತಿಂಗಳ ವಿಹರಣ ವಿಧಿಯಂ ಮಾಣ್ದು=ಒಂದು ತಿಂಗಳ ಆಯುಷ್ಯ ಉಳಿದಂದು ಸಮವಸರಣದೊಂದಿಗೆ ಮಾಡುತ್ತಿದ್ದ ವಿಹಾರವನ್ನು ಬಿಟ್ಟು, ಧ್ಯಾನ=ಅಭ್ಯಂತರ ತಪಸ್ಸುಗಳಲ್ಲಿ ಒಂದು ಸ್ಥಿರವಾದ ಪರಿಣಾಮ. ಪರಮಶುಕ್ಲ ಧ್ಯಾನ=ಯೋಗಿಯು ತನ್ನ ಆತ್ಮವನ್ನು ಕರ್ಮಮಲದಿಂದ ದೂರಗೊಳಿಸಿ, ಮೋಕ್ಷವನ್ನು ಪಡೆಯುವ ಶ್ರೇಷ್ಠವಾದ ಧ್ಯಾನ. ಘಾತಿಕರ್ಮ=ಆತ್ಮನ ಅನಂತ ಜ್ಞಾನ ದರ್ಶನ ಸುಖ ಶಕ್ತಿಗಳೆಂಬ ಸ್ವಾಭಾವಿಕ ಗುಣಗಳನ್ನು ಮರೆ ಮಾಡಿರುವ ಜ್ಞಾನಾವರಣ ದರ್ಶನಾವರಣ, ಮೋಹನೀಯ, ಅಂತರಾಯಗಳೆಂಬ ನಾಲ್ಕು ಕರ್ಮಗಳು, ಅಘಾತಿಕರ್ಮ= ಕರ್ಮಭೇದ--ಆತ್ಮನ ಅನಂತ ಗುಣಗಳಿಗೆ ಘಾತಿಯನ್ನುಂಟು ಮಾಡದ ಕರ್ಮ, ಇದು ನಾಲ್ಕು ವಿಧ ಆಯು, ನಾಮ, ಗೋತ್ರ, ವೇದನೀಯ. ಪ್ರಥಮಯೋಗ= ಅರ್ಹಂತಾವಸ್ಥೆ—ಕೈವಲ್ಯಪದವಿ; ದ್ವಿತೀಯ ಯೋಗವೇ ಸಿದ್ಧಾವಸ್ಥೆ.

೧೫. ಅಧಿಗತ=ಪಡೆದ; ತಿಳಿದ, ಕರ್ಮ+ಅರಾತಿ=ಕರ್ಮಶತ್ರು, ದಿಕ್ತತಿ—ದಿಕ್‌ತತಿ=ದಿಕ್ಕುಗಳ ಸಮೂಹ, ಆನಕಂ=ಭೇರಿ. ಬುದ್ಧಬೋಧ್ಯಂ= ಬುದ್ಧನೂ ಬೋಧ್ಯನೂ—ಜ್ಞಾನಿಗಳಿಗೆ ತಿಳಿಯಲು ಸಾಧ್ಯನಾದವನು, ತಿಳಿಯ ಲರ್ಹವಾದದ್ದನ್ನು—ತಿಳಿಯಬೇಕಾದ್ದನ್ನು ತಿಳಿದವನು: ಕೇವಲ ಜ್ಞಾನಿ. ಶಿವಪದ=ಮೋಕ್ಷಪದವಿ. ಸಿದ್ಧಸಾಧ್ಯಂ—ಸಿದ್ಧ ಪದವಿಯನ್ನು ಸಾಧಿಸಿದವನು.

೧೬. ಆಮ್ನಾಯದ=ಪರಂಪರಾಗತವಾಗಿ ಬಂದ, ಸಪ್ತಚ್ಛದ ಎಂಬುದು ವೃಕ್ಷ—ಏಳೆಲೆ ಬಾಳೆಯ ಗಿಡ, ದಂತಿಲಾಂಛನಂ=ಆನೆಯನ್ನು ಚಿಹ್ನೆಯಾಗಿ

ಉಳ್ಳವನು. ಮಹಿಜಂ=ವೃಕ್ಷವು. ರೋಹಿಣಿ ತಾರೆ-ಜಿತಾರಿ (ಜಿತ+ಅರಿ) ಸಕಲ ಕರ್ಮಗಳನ್ನೂ ಗೆದ್ದವನು. ("....ಏಳೆಲೆ ಬಾಳೆಯ ಮರದ ಸಮೀಪವನ್ನ ಹೊಂದಿದವನೂ..." (ಮ. ಪು. ೪೮–೩೮)

ವ : ಅಗ್ನೀಂದ್ರ ಮಕುಟ ಮಾಲೋದ್ದೀಪಿತ=ನಮಸ್ಕರಿಸಿದ ಅಗ್ನಿಯ ಕಿರೀಟ ಸ್ಪರ್ಶದಿಂದ ಉದ್ದೀಪನಗೊಂಡ, ಪಂಚಕಲ್ಯಾಣ ಭೂತಿ ಭಾಗಿಗಳಂ ಅಪ್ಪೆಂ ಅಕ್ಕೆ=ಪಂಚಕಲ್ಯಾಣಗಳನ್ನು ಪಡೆಯಲು ಯೋಗ್ಯವಾದ ಜನ್ಮವುಳ್ಳವರಾಗುವಂತೆ ಆಗಲಿ. ದೇವೇಂದ್ರನು ತನ್ನವರೆಲ್ಲರೊಂದಿಗೆ ಬಂದು ನಿರ್ವಾಣಕಲ್ಯಾಣ ಮಹಾಪೂಜೆಯನ್ನೂ ಆನಂದ ನೃತ್ಯವನ್ನೂ ಮಾಡಿ ಹಿಂದಿರುಗಿದನು.

ಇತ್ತ ದುಃಖಾರ್ತರಾದ ಜಿತಶತ್ರು ಮೊದಲಾದವರ ಮನಸ್ಸಮಾಧಾನಕ್ಕಾಗಿ ಸಿಂಹಸೇನಾದಿಗಳು ಅವರಿಗೆ ಸಂಸಾರ ಸ್ವರೂಪವನ್ನು ತಿಳಿಯ ಹೇಳಿ, ಒಳ್ಳೆಯ ಧರ್ಮೋಪದೇಶವನ್ನು ಮಾಡಿ, ಜಿನಪೂಜಾದಿ ಧರ್ಮಕಾರ್ಯಗಳನ್ನು ಮಾಡಿಸುತ್ತಾ ಕೃತಾರ್ಥರನ್ನಾಗಿಸಿದರು. ಪ್ರಭಾವನಾ=ಜೈನಧರ್ಮದ ಪ್ರಭಾವವನ್ನು ಬೆಳಗುವುದು. ಚರಿತಾರ್ಥ=ಕೃತಾರ್ಥ, ಧನ್ಯ.

## ಚಕ್ರನಾಥ ಚರಿತಂ

### ಅ) ಚಕ್ರಪೂಜಾಪರಿಕರವಿಧಿಯಂ ಮಾಡಿದಂ

೧. ಚಕ್ರವರ್ತಿಗಳು ಹನ್ನೆರಡು ಮಂದಿ ಮಾತ್ರ; ಆದ್ದರಿಂದ ಎಲ್ಲ ತೀರ್ಥಂಕರರ ಕಾಲದಲ್ಲೂ ಚಕ್ರವರ್ತಿಗಳಿರುವುದಿಲ್ಲ. ಆದಿಜಿನನ ಕಾಲದಲ್ಲಿ ಭರತೇಶ್ವರಚಕ್ರವರ್ತಿ; ಅಜಿತನ ಕಾಲದಲ್ಲಿ ಸಗರಚಕ್ರವರ್ತಿ. ಸಗರಚಕ್ರವರ್ತಿಯು ಅಜಿತಜಿನೇಶ್ವರನ ಭಕ್ತ.

ವ : ಸಗರನ ಭನಾವಳಿ–ವಿಷಯ=ದೇಶ, ಸ್ವರ್ಣಪಾಷಾಣ=ಚಿನ್ನದ ಕಲ್ಲು [ಚಿನ್ನದ ಕೋಳ ಎಂಬಂತೆ]. ದಂತಾಂತರವೇ ವಜ್ರ, ಅದರಿಂದ ಘಾತ—ದಂತಾಂತರ ವಜ್ರಘಾತ, ಅಗಿತಕ್ಕೆ ಸಿಕ್ಕಿದ—ಸತ್ತ, ನಿಜ....ಚಿತ್ತನಾಗೆ=ಮಗ ಸತ್ತ ದುಃಖವೆಂಬ ಬೆಂಕಿಯಿಂದ ವಿಶೇಷವಾಗಿ ಬೆಂದ ಮನಸ್ಸುಳ್ಳವನಾಗಿ. ರತಿಷೇಣ ಧೃತಿಷೇಣರು ಸೂರ್ಯ ಚಂದ್ರರನ್ನೂ ಜಯಿಸಿ ಪ್ರಕಾಶಿಸುತ್ತಿದ್ದರು [ಮ.ಪು]—ತೇಜಸ್ವಿಗಳಾಗಿದ್ದರು.

೨. ಮನಸಿಜವಧೂ-ಮನ್ಮಥನ ಪತ್ನಿ-ರತಿ, ಇವನದು ರತಿಯಂತೆ ಮೋಹಕವಾಗಿ ಶೃಂಗಾರಗೊಂಡ, ವೇಶ್ಯಾ ಸ್ತ್ರೀಯರ ಮನೋಕಮಲಕ್ಕೆ ಸೂರ್ಯನಂತಿರುವ ಶೃಂಗಾರ. ಗೋತ್ರಮಂಡನ = ವಂಶಕ್ಕೆ ಅಲಂಕಾರಪ್ರಾಯ.

ವ: ಬಾಯಬಿಡು = ಬೊಬ್ಬೆ ಹಾಕಿ, ವಿಪ್ರಲಾಪಂಗೆಯ್ವ = ವಿಶೇಷ ವಾಗಿ ಗೋಳಿಡುತ್ತಿರುವ, ಕರುಣಾರುತ = ಕರುಣಾಕ್ರಂದನ, ಮಾಣಿಸಿ = ಹೋಗಲಾಡಿಸಿ—ಸಮಾಧಾನ ಪಡಿಸಿ.

೩. ಇಂ ಬರ್ಕುಮೆ = ಇನ್ನು [ಮಗನು] ಬರುತ್ತಾನೆಯೇ? ಗೆಂಟಾಯ್ತು = ದೂರವಾಯಿತು, ಕಾಲ ಅನಲ ಕಬಳಿತ = ಯಮನೆಂಬ ಬೆಂಕಿಯಿಂದ ನುಂಗ ಲ್ಪಟ್ಟ, ಶೋಕಾಂಧ = ಶೋಕದಿಂದ ಕುರುಡಾದ-ಮುಂಗಾಣದ, ಆರ್ಮಂ = ರಕ್ಷಣೆ, ಸಂಸಾರಕಾಂತಾರ = ಭವಾಟವಿ — ಸಂಸಾರವೆಂಬ ಅಡವಿ, ತಳರ್ = ಚಲಿಸು-ಹೊರಡು.

ವ: ಸುಖ ದುಃಖಗಳು—ಹುಟ್ಟು, ಸಾವುಗಳು ಸಂಸಾರದ ಸ್ವರೂಪ, ಅಪಗತ × ಉಪಗತ. ಧೃತಿ = ಧೈರ್ಯ-ಸ್ಥಿರತೆ, ಪುರಸ್ಸರಂ = ಪೂರ್ವಕವಾಗಿ, ತಪಸ್ ಸಂಯಮಧರರ್—ತಪಸ್ಸಿನಿಂದ ಸ್ಥಿರವಾದಮನಸ್ಸುಳ್ಳವರು—ಮಹಾ ತಪಸ್ವಿಗಳು, ಅರಸು ಮಕ್ಕಳ್‌ವೆರಸು = ರಾಜರ ಮಕ್ಕಳೊಡನೆ, ವೆರಸು—ಬೆರಸು (ಹ.ಗ.ದಲ್ಲಿ ಪ,ಬ, ಮ ಗಳಿಗೆ ವಕಾರಾದೇಶವಾಗುತ್ತದೆ.) ಸನ್ಯಸನ ಮರಣ = ಸಲ್ಲೇಖನಮಹಾ ವ್ರತದಿಂದ ಆತ್ಮತ್ಯಾಗ ಮಾಡುವುದು. ರತ್ನ ತ್ರಯ ಉತ್ಸೇಧ = ರತ್ನತ್ರಯಕ್ಕೆ ಸಮವಾದ ಎತ್ತರ, ಮೂರು ರತ್ನಗಳಷ್ಟು ಎತ್ತರವುಳ್ಳವನು, ಧರ್ಮೋನ್ನತಿ (?) (Spiritual height) ಉತ್ಸೇಧ = ಎತ್ತರ. ದ್ವಾವಿಂಶತಿ = ಇಪ್ಪತ್ತೆರಡು. ಇಲ್ಲಿ ಸಹಸ್ರವರ್ಷ ; ಮೂಲದಲ್ಲಿ ಸಾಗ ರೋಪಮ ಎಂದಿದೆ. ಸಂಕಲ್ಪ ವಿಕಲ್ಪಿತಾಹಾರನುಂ = ದೇವಲೋಕದಲ್ಲಿ ಸಂಕಲ್ಪ ಮಾತ್ರದಿಂದ ಅಮೃತಾಹಾರವನ್ನು ಕಲ್ಪಿಸಿಕೊಂಡು ಅನುಭವಿಸುವ ವನೂ, ಏಕಾದಶ......ನಿಃಶ್ವಾಸನುಂ = ಹನ್ನೊಂದು ತಿಂಗಳಿಗೊಮ್ಮೆ ಹೊರಡು ತ್ತಿರುವ, ಸುಗಂಧಮಯವಾದ ನಿಃಶ್ವಾಸವುಳ್ಳವನೂ, ಉಪೇತ = ಕೂಡಿದ, ಮಣಿದರ್ಪಣ ಆಯಮಾನ = ರತ್ನದ ಕನ್ನಡಿಗೆ ಸಮಾನವಾದ, ಪರಿಸರ = ಸಮೀಪದ, ಉತ್ತಂಸ = ಶ್ರೇಷ್ಠ, ಜಯಸೇನ ಚರಂ = ಹಿಂದಿನ ಜನ್ಮದಲ್ಲಿ ಜಯಸೇನನಾಗಿದ್ದವನು. ತಮ್ಮ ಬಲ್ಲಂದದಿಂ = ತಾವು ತಿಳಿದಂತೆ-ವಿಭಕ್ತಿ

ಪಲ್ಲಟ, ಪ್ರತಿಬೋಧಿಸು=ಜ್ಞಾನೋದಯವನ್ನುಂಟು ಮಾಡು-ವಿಷಯ ಸುಖದ ಕಡೆ ಗಮನವುಳ್ಳವರನ್ನು, ದೀಕ್ಷೆಯ ಕಡೆ ಗಮನವುಳ್ಳವರನ್ನಾಗಿ, ಮಾಡು ಅನುಮುಖ=ಅನುಸರಿಸಿದಮುಖ ; ಅಭಿಮುಖ=ಎದುರಾದ, ಅತಿ ಕರಾಳ ................ ....ನಗರಂ=ಅತಿಕಠಿಣತೆಯೆಂಬ ದೃಷ್ಟಿಯಿಂದ ಸಂಗ ಲ್ಪಟ್ಟ ಶತ್ರುಗಳನ್ನುಳ್ಳ ನಗರವುಳ್ಳವನು. ಕೃತಕ ಸಂಕೇತಂ ಮಾಡೆ-ಇದು ಅಲ್ಲಿಗೆ ಸಹಜವಾದುದೇನಲ್ಲ; ಆದರೂ ತಮ್ಮ ಸ್ನೇಹಬಲದಿಂದ ಮಾಡಿ ಕೊಂಡುದು. ಮೂಲದ ಸಮುದ್ರವಿಜಯ, ಸುಬಲಾದೇವಿಯರು ಇಲ್ಲಿ ಸುಭದ್ರವಿಜಯ, ಸುವೇಲಾದೇವಿಯರಾಗಿದ್ದಾರೆ, ಪಂಚಾಶತ್=ಐವತ್ತು, ಸಪ್ತತಿ =ಎಪ್ಪತ್ತು, ಪರಮಾಯುಷ್ಯನುಂ=ಪರಮಾವಧಿ . ಆಯುಷ್ಯವುಳ್ಳವನೂ. ಪಂಚಾಶತ್....ಉತ್ಸೇಧನುಂ=ನಾಲ್ಕುನೂರ ಐವತ್ತು ಧನುಸ್ಸುಗಳಷ್ಟು ಶರೀ ರದ ಉತ್ಸೇಧ(ಔನ್ನತ್ಯ)ವುಳ್ಳವನೂ, ಚಂಭೆತ್...ಭಾಸನುಂ=ಹೊಳೆಯುತ್ತಿ ರುವ ಚಿನ್ನದ ಕಾಂತಿಯುಳ್ಳವನೂ, ಅಷ್ಟಾದಶ=ಹದಿನೆಂಟು, 'ಚಕ್ರರತ್ನ-ಚಕ್ರ ವರ್ತಿಯಾಗುವ ಪುಣ್ಯವಂತನಾದ ರಾಜನ ಆಯುಧಾಗಾರದಲ್ಲಿ ಹುಟ್ಟುವಂತ ಹಂದು'. ಇದು ಎಲ್ಲ ಶತ್ರುಗಳನ್ನೂ ಬಗ್ಗಿಸಿ ಚಕ್ರವರ್ತಿ ಪದವಿಯನ್ನು ಸಾಧಿಸಿ ಕೊಡುತ್ತದೆ. ಇದರೊಂದಿಗೇ ಇನ್ನೂ ಹದಿಮೂರು ರತ್ನಗಳೂ ಒಂಬತ್ತು ನಿಧಿ ಗಳೂ ಕೈಸೇರುತ್ತವೆ. ಸಕಲ ಚಕ್ರವರ್ತಿ =ಷಟ್ಖಂಡಾಧಿಪತಿ.

೪. ಈ ಪದ್ಯದ ಮೂಲ 'ರಘುವಂಶ' (೬-೨೨) ಧ್ವನಿಸುತ್ತದೆ' ''ಕಾಮಂ ನೃಪಾಃ ಸಂತು ಸಹಸ್ರಶೋಽನ್ಯೇ ರಾಜನ್ವತೀ ಮಾಹುರನೇನ ಭೂಮಿಮ್ ನಕ್ಷತ್ರ ತಾರಾಗ್ರಹ ಸಂಕುಲಾಪಿ, ಜ್ಯೋತಿಷ್ಮತೀ ಚಂದ್ರಮಸೈವ ರಾತ್ರಿಃ—ಬೇರೆ ರಾಜರು ಸಹಸ್ರ ಸಂಖ್ಯೆಯಲ್ಲಿ ಬೇಕಾದ ಹಾಗೆ ಇರಲಿ. ಆದರೆ, ಇವ (ರಘು) ನಿಂದ ಧರೆಯು 'ರಾಜನ್ವತಿ' ಎನಿಸಿಕೊಂಡಳು. ನಕ್ಷತ್ರಗಳ ಮತ್ತು ಗ್ರಹಗಳ ಸಮೂಹದಿಂದ ಕೂಡಿದರೂ ಚಂದ್ರನಿಂದ ಮಾತ್ರ ರಾತ್ರಿಯು ಜ್ಯೋತಿಷ್ಮತಿ ಎನಿಸಿಕೊಳ್ಳುತ್ತದೆ. ಕುರಾಜರ್-ಕುತ್ಸಿತರಾದ ರಾಜರು, ರಾಜವತಿ =ಮಲಿನತೆ-ಪಾಪದಿಂದ ಕೂಡಿದುದು, ರಾಜನ್ವತಿ=ಸುಯೋಗ್ಯನಾದ ರಾಜ ನಿಂದ ಕೂಡಿದುದು.

೫. ಅವನಮ್ರ=ಬಾಗಿದ, ನಮಸ್ಕರಿಸಿದ, ತಲ=ಅಂಗಾಲು-ಪಾದ, ವಿನಮ್ರ=ವಿನಯದಿಂದ ಬಾಗಿದ, ದೀಪ್ತಿ=ಹೊಳಪು, ವಿತಾನ=ಹೆಚ್ಚಳ.

ನೆಲೆಸಿದ ಅಂದು ಚಕ್ರಿಯಾ ಅತ್ಯುನ್ನತ ಅಂಗುಷ್ಠಂ ಆತಾಮ್ರತಲು ಕನತ್ ನಖಚಯಂ ಪಾದದ್ವಯಂ ಒಪ್ಪುವುದು (ಹ.ಗ. ?). ತಲೆಬಾಗಿದ ಶತ್ರುರಾಜರ ಔನ್ನತ್ಯವೆಂಬುದು ತನ್ನ ಅಂಗುಷ್ಠಗಳಲ್ಲಿಯೂ, ಅವರ ಚಿಗುರಿನಂತಿರುವ ಮೃದು ಕರಗಳ ಕೆಂಪು ಅವನ ಅಂಗಾಲುಗಳಲ್ಲಿಯೂ ಅವರ ಬಾಗಿದ ಕಿರೀಟಗಳಲ್ಲಿ ಅಲಂಕೃತವಾದ ಮಾಣಿಕ್ಯಗಳ ಕಾಂತಿ ಸಮೂಹವು ಅವನ ಕಾಲಿನ ಉಗುರುಗಳ ಲ್ಲಿಯೂ ನೆಲಸಿರಲಾಗಿ, ಚಕ್ರವರ್ತಿಯ ಶ್ರೇಷ್ಠವಾದ ಅಂಗುಷ್ಠವೂ, ಕೆಂಪಾದ ಅಂಗಾಲೂ, ಹೊಳೆವ ಉಗುರುಗಳೂ [ಇವುಗಳಿಂದ ಕೂಡಿದ] ಎರಡು ಪಾದಗಳು ಸುಂದರವಾಗಿದೆ. ಇಲ್ಲಿ ವಿಷಮಾಲಂಕಾರವಿದೆ— 'ವಿಷಮಂ ವರ್ಣ್ಯತೇ ಯತ್ರ ಘಟನ್ಯಾನನುರೂಪಯೋಃ '—ಪರಸ್ಪರ ಅನುಗುಣವಲ್ಲದ ಪದಾರ್ಥ ಗಳು ಒಟ್ಟಿಗೆ ಸೇರಿವೆ ಎಂದು ವರ್ಣಿಸುವುದು.

೬. ಸುರೇಂದ್ರಚಾಪ=ಕಾಮನಬಿಲ್ಲು, ಮರಾಳ=ಹಂಸ, ಆನಕಪಟು ಸ್ವನಮಾಗೆ=ಭೇರಿಯ ದೊಡ್ಡ ಶಬ್ದವಾಗಿರಲು, ಅಭ್ರಕುಳ=ಮೋಡಗಳರಾಶಿ, ಬಳ್ಳಿವಳ್ಳಿ=ವಿಶೇಷವಾದ ಬಳ್ಳಿಗಳ ಆಧಿಕ್ಯ ಖೇಚರೀಜನ=ವಿದ್ಯಾಧರಸ್ತ್ರೀ ಯರು. ಬಳ್ಳಿಮಾಡ=ಲತಾಗೃಹ. ಮಳೆಗಾಲ ಕಳೆದು ಶರತ್ಕಾಲವು ಬರುತ್ತಿರು ವಾಗಿನ ಚಿತ್ರ ಇದು. ಹೊಳೆಯುತ್ತಿರುವ ಕಾಮನಬಿಲ್ಲು ತೋರಣವಾಗಿರಲು, ಹಂಸಪಕ್ಷಿಗಳ ಧ್ವನಿಯು ವ್ಯಾಪಿಸುತ್ತಿರುವ ಮಂಗಳವಾದ್ಯಗಳ ಸ್ಪಷ್ಟ ಧ್ವನಿಯಾ ಗಿರಲು, ಶರತ್ಕಾಲದಲ್ಲಿ ದಿಕ್ಕು ದಿಕ್ಕುಗಳನ್ನೂ ವ್ಯಾಪಿಸಿ, ಬಿಳಿಯ ಮೋಡಗಳ ಸಮೂಹವು ಖೇಚರಿಯರಿಗಾಗಿ ಮಾಡಿಟ್ಟಿರುವ ಬೆಳ್ಳಿಯ ಲತಾಗೃಹವನ್ನು ಹೋಲುತ್ತಾ ಪ್ರಕಾಶಿಸುತ್ತಿದ್ದಿತು.

ವ: ದಿಗ್ವಿಜಯಕ್ಕೆ ಹೊರಡುವ ಸಲುವಾಗಿ ವಿಜಯಸೂಚಕವಾದ ಮಂಗಲಕಾರ್ಯಗಳನ್ನು ನಡೆಸಿದವನಾಗಿ—

೭. ಪಟ್ಟವರ್ಧನ ಎಂಬ ವಿಜಯಸಿಂಧುರ—ವಿಜಯ ಲಕ್ಷಣವುಳ್ಳ ಆನೆಯು ಅಲಂಕೃತವಾಗಿ ಸಿದ್ಧವಾಗಿದೆ. ಸಂಗತಪೂರ್ಣಕುಂಭಂ=ಒಪ್ಪುವ ಕುಂಭಸ್ಥಲಗಳುಳ್ಳುದು, ಉದಿತ ಧ್ವಜಂ=ಮೇಲೆದ್ದ ಧ್ವಜವನ್ನುಳ್ಳುದು, ಉಲ್ಲಸಿತ ಅಗ್ರಪಲ್ಲವಂ=ಸೊಗಸಾದ ಚಿಗುರಿನ ಚಿತ್ರದಿಂದ ಶೋಭಿಸುತ್ತಿರು ವುದು ; ಮನೋಹರವಾದ ಕುಂಭಸ್ಥಳದಲ್ಲಿ ಜಾಲರಿಯನ್ನುಳ್ಳುದು (?) ಭೃಂಗ ನಿಕಾಯಗೇಯ ಯುತಂ=ದುಂಬಿಗಳ ಸಮೂಹಗಾನದಿಂದ ಕೂಡಿದುದು,

ಅಕ್ಷಯ ಹಸ್ತವಿಭಾಸಿ=ದೊಡ್ಡದಾದ ಸುಂದರವಾದ ಸೊಂಡಿಲಿನಿಂದ ಶೋಭಿಸು ತ್ತಿರುವುದು, ರೋಚನಾ ಪಿಂಗವಿಲೋಚನಂ=ಹೊಳೆಯುವ ಕಂದುಬಣ್ಣದ ಕಣ್ಣುಗಳನ್ನುಳ್ಳುದು, ರುಚಿರ ಪುಷ್ಕರಂ=ಅಂದವಾದ ಸೊಂಡಿಲ ತುದಿಯನ್ನು ಳ್ಳುದು. ಉನ್ನತ ದಂತ ತೋರಣಂ=ಶ್ರೇಷ್ಠವಾದ ದಂತ ಮತ್ತು ಕಂಠಗಳ ನ್ನುಳ್ಳುದು. ಮಂಗಳ ಲಕ್ಷಣಂ=ಶುಭಲಕ್ಷಣಗಳಿಂದ ಕೂಡಿರುವಂತಹುದು. ಮಂಗಳ ದ್ಯೋತಕಗಳು—ಪೂರ್ಣಕುಂಭ, ಪಲ್ಲವ (ಚಿಗುರು) ಗೇಯ, ಪುಷ್ಕರ =ತಾವರೆಹೂ, ತೋರಣ, ಧ್ವಜ—ಇವು. ಮಂಗಳ ಲಕ್ಷಣಗಳುಳ್ಳುದರಿಂದಲೇ ಅದನ್ನು ಪಟ್ಟದಾನೆಯನ್ನಾಗಿ ಆಯ್ಕೆ ಮಾಡಿರುವುದು. ಪೂಜಾಗಜಮೆಂದು ಪಟ್ಟವರ್ಧನಂ (ಶ.ಮ.ದ.—ಪ್ರಯೋಗಸಾರ)

ವ: ಪಣ್ಣಿ=ಅಲಂಕಾರಗೊಂಡು,=ಬೆಂಗೆವಂದು ಮೇಲೇರಿ,

೮. ಸೇನಾಪಡೆ ನಡೆದಾಗ-ನೆಲೆ [ಲ?] ವತ್ತೆ=ನೆಲಮಂಪತ್ತೆ=ನೆಲಸಮ ವಾಗಲು, ಪಡಲ್ವಡೆ=ಮಲಗಿಹೋಗಲು, ಉರುಳಿಬೀಳಲು, ತೆಣಟು=ಭಾರ ದಿಂದ ಮಿಸುಕಾಡು, ಕಟಕ=ಸೈನ್ಯ.

೯. ಜಯೇಭಧ್ವಜಶ್ರೇಣಿ=ಆನೆಗಳ ಮೇಲೆ ಎತ್ತಿಹಿಡಿದ ಧ್ವಜಗಳ ಸಾಲು. ಬಲಕ್ಷೋಭಶಬ್ದಂ=ಸೇನೆಯ ನಡೆದಾಟದ ಗಲಗು, ತೂರ್ಯ= ತುತ್ತೂರಿ, ಪಯೋರಾಶಿ=ಸಮುದ್ರ, ದಾನಪ್ಲವ=ಆನೆಯ ಮದೋದಕದ ಪ್ರವಾಹ ಪರ...ಪ್ರಸರಂ=ಶತ್ರು ರಾಜಸ್ತ್ರೀಯರ ಕಣ್ಣುಗಳಿಂದ ಹರಿದ ಕಣ್ಣೀರ ಧಾರೆಯಹರಹು, ಪ್ರವಾಹ. ಇಲ್ಲಿ ಸಹೋಕ್ತಿ ಅಲಂಕಾರವಿದೆ.

ವ: ಪ್ರವೃದ್ಧಮಾಗಿರ್ದ=ತುಂಬ ವಿಶಾಲವಾದ ತುಂಬ ಪ್ರಾಚೀನ ವಾದ. ಸಗರನು ಸುಭದ್ರ ವಿಜಯನ ಮಗ, ಯುದ್ಧೋದ್ಯೋಗದಲ್ಲಿ ಧರ್ಮ– ವ್ರತಾಚರಣೆಯನ್ನು ಬಿಡದ ನಿಷ್ಠೆ. ನಾಲ್ವತ್ತೆಣ್=ನಲವತ್ತೆಂಟು ಪಡೆವಳ್ಳ– ಪಡೆವಳ=ಸೇನಾನಾಯಕ, 'ವಳ' 'ವಳ್ಳ'–ತದ್ಧಿತ ಪ್ರತ್ಯಯಗಳು. ಕಾಪು ವೇಟ್ಟು=ಕಾಪಂಪೇಟ್ಟು (ಕ್ರಿ.ಸ.) ರಕ್ಷಿಸು-ಕಾಯು-ವಂತೆ ಹೇಳಿ, ದಶವಾಹಸಂ, ವಾಹ್ಯ=ಹತ್ತು ಕುದುರೆಗಳಿಂದ ಎಳೆಯಲ್ಪಟ್ಟ, ಮಾಣೆ=ಕದಲದೆ ನಿಲ್ಲಲು, ಆಣೆಯಿಟ್ಟಂತೆ ಮಾಣೆ=ಕೀಲೈಸಲು, ರಥಾಂಗಧರ=ಚಕ್ರವರ್ತಿ, ದೃಪ್ತ= ಸೊಕ್ಕಿದ, ನಡುಗುತ್ತಿರಪ, ದೃಪ್ತ ಕೋಪಾವೇಶಿತಾಧರನುಮಾಗಿ=ಅತಿಶಯ ವಾದ ಕೋಪದಿಂದ ಅದುರುತ್ತಿರುವ ಕೆಳದುಟಿಯುಳ್ಳವನಾಗಿ.

೧೦. ಜನ ನುತ=ಜನ ಸ್ತುತಿಸುವಂತಹ-ಕೀರ್ತಿವಂತ. ಇದಿರೆಱಗು= ಬಂದು ಶರಣಾಗು. ನಾಮಮಂ ಬರೆದು=ತನ್ನ ಹೆಸರಿನ ಓಲೆಯನ್ನು ಬರೆದು. ಅಮೋಘಶರ=ಗುರಿತಪ್ಪದ ಬಾಣ, ದಿವ್ಯಾಸ್ತ್ರ, ಎಚ್ಚಂ (ಇಸು-ಧಾ)-ಬಾಣ ಬಿಟ್ಟನು.

ವ: ಮಾಗಧನೆಂಬ ವ್ಯಂತರಾಧೀಶನು ಸಿಡಿದೆದ್ದರೂ ಕುಲವೃದ್ಧರು ಅದಕ್ಕೆ ಪ್ರತಿಭಟಿಸಿ, ಅವನನ್ನು ಸಗರನಿಗೆ ಎರಗಿಸಿದರು. ಆಸ್ಫೋಟಿಸು (ಆಸ್ಫೋಟನ+ಇಸು)=ಆರ್ಭಟಿಸು, ಸಿಡಿದೇಳು. ಪ್ರಭೃತಿ=ಶ್ರೇಷ್ಠ. ಮೊದಲಾದ, ಒಡರ್ಚು=ಪ್ರಯತ್ನಿಸು, ಒಳಗನೆ=ಒಳಗೇ.

೧೧. ರನ್ನನ ಓಜಸ್ಸು ಹರಿದಿದೆ, ದಕ್ಷಿಣ ಸಮುದ್ರ ದರ್ಶನ-ಸಮುದ್ರ ವರ್ಣನೆ-[ಕವಿ ಕಂಡಿದ್ದಿರಲಾರದು!] ಕುಂಭೀರ=ಮೊಸಳೆ. ಪ್ರಚಾರ= ಪ್ರಚುರ-ಆಧಿಕ್ಯ, ವಿಚಳತ್=ವಿಶೇಷವಾಗಿ ಸಂಚಲವಾದ, ವಾಚಾಳ=ಶಬ್ದ ಗೈಯುವ, ವೀಚೀಚಯ=ಅಲೆಗಳ ಸಮೂಹ, ತುಂಗ....ಆಸ್ಪದಮಂ=ಎತ್ತರ ವಾದ ಅಲೆಗಳಿಂದ ಕೂಡಿದ, ತೇಲುತ್ತಿರುವ ನೊರೆಯ ರಾಶಿಯ ಪ್ರಕಾಶದಿಂದ ಕೂಡಿರುವ, ಆಘೂರ್ಣಿತ=ಭಯಂಕರವಾಗಿ ಮೊಳಗುತ್ತಿರುವ, ಅಕ್ಷೀಣಾಪದ ಕ್ಷೀಣಮಂ=ಎಂದೂ ಕ್ಷೀಣಿಸದ, ಎಂದೂ ಕಂಡಿರದ ಸಮುದ್ರವನ್ನು (?) ಸಮುದ್ರವನ್ನು ಕಾಣದಿದ್ದ ಸಗರನು ಕೌತುಕದಿಂದ ನೋಡಿದ್ದು ಈ ಭಯಂಕರ ಸಮುದ್ರವನ್ನೆ ?

ವ: ಬಂದು ಮುಖದೊಳ್=ಮುಖದೊಳ್ ಬಂದು, ಪ್ರಭಾಸಾಮರ =ಪ್ರಭಾಸನೆಂಬ ಅಮರ, ಅಪಗತಪ್ರಭಂ=ಕುಂದಿದ ಕಾಂತಿಯುಳ್ಳವ, ಸಂತಾನಕ ಮಾಲಾ=ಸ್ವರ್ಗದಲ್ಲಿಯ ಒಂದು ಜಾತಿಯ ಹೂಮಾಲೆ. ಸರಿತ್= ನದಿ. ತೀರಮಂ ಪಿಡಿ=ತೀರಂಬಿಡಿ- -ಕ್ರಿ.ಸ. ವಿಜಯಾರ್ಧ ಅಚಳ (ಪರ್ವತ) =ವಿಜಯಾರ್ಧಾಚಳ—ಸ. ದೀ.ಸಂ.

೧೨. ಮೃದುವಾದ್ಯಸ್ವನ=ಮೃದುವಾದ-ಹಿತಕರವಾದ ವಾದ್ಯಧ್ವನಿ, ಗೀತನಿಸ್ವನ=ಗೀತ ಮಾಧುರ್ಯ. ನಟತ್ ವಿದ್ಯಾಧರೀನಾಟ್ಯ ಸಂಪದ=ನಟಿ ಸುತ್ತಿರುವ ವಿದ್ಯಾಧರ ಸ್ತ್ರೀಯರ ನಾಟ್ಯವೈಭವ, ರತ್ನಮಯ................ ಆಸ್ಪದಮಂ=ರತ್ನಮಯವೂ ಪ್ರಸಿದ್ಧವೂ ಆದ ಶಿಖರಗಳಿಂದ ಅಲಂಕೃತವಾದ ಸಿದ್ಧಾಲಯವನ್ನು, ವಿಭವ ಪ್ರೋದ್ಭಾಸಿಯಂ-ಬೆಳಗುತ್ತಿರುವ ಈ ವೈಭವವನ್ನು,

ಅದ್ರೀಂದ್ರ=ಪರ್ವತ ಶ್ರೇಷ್ಠ–ಸ.ದೀ.ಸಂ. ರುಂದ್ರ=ವಿಸ್ತಾರವಾದ, ಖೇಚರ ಚಕ್ರವರ್ತಿಯು ವಿಭವವನ್ನೂ ಅವನ ವಾಸಸ್ಥಾನವಾದ ವಿಜಯಾರ್ಧ ಪರ್ವತ ಭೂಚರ ಚಕ್ರವರ್ತಿಯೂ ಮೆಚ್ಚಿ ನೋಡುತ್ತಿದ್ದಾನೆ.

೧೩. ಆ ಪರ್ವತದ ಒಂದು ಕಡೆ ಗುಹೆಗಳೊಳಗಿನ ಗಾಢಾಂಧಕಾರ, ಮತ್ತೊಂದೆಡೆ ಚಂದ್ರಕಾಂತ ಶಿಲಾಕಾಂತಿಗಳಿರುವುದನ್ನು ನೋಡುವಾಗ ಕತ್ತಲು ಮತ್ತು ಬೆಳುದಿಂಗಳು ಒಂದೇ ಎಡೆಯಲ್ಲಿ ನೆಲಸಿರುವಂತೆ ಭಾಸವಾಗುತ್ತಿತ್ತು. ಪೋಲ್ತು ಒಪ್ಪುವುದು=ಹೋಲುತ್ತಾ ಶೋಭಿಸುತ್ತದೆ. ಜ್ಯೋತ್ಸ್ನಾ (ತ್ಸ) –ಜೊನ್ನ (ತ್ಭ), ಪೊಡರ್=ಕಾಣಿಸಿಕೊಳ್ಳು.

೧೪. ವನ ದಹನ ಧೂಮ=ಕಾಡು ಕಿಚ್ಚಿನ ಹೊಗೆ, ನಿರ್ಜರ...... ವಾತ=ದೇವತೆಗಳ ವನದಿಂದ ಕೂಡಿದ ಪರ್ವತದ ಗಾಳಿ–ವಿಜಯಾರ್ಧ ಪರ್ವತದ ಗಾಳಿ, ಸನ್ನಿಪಾತ ಪ್ರಭವಂ=ಒಟ್ಟಾಗಿ ಸೇರಿ ಉಂಟಾದ, ಘನ=ಮೋಡ, ಕಾಡುಕಿಚ್ಚು ಮತ್ತು ದೇವತೆಗಳ ವನ ಮತ್ತು ಪರ್ವತಗಳಿಂದ ಬರುವ ಗಾಳಿಯು ಸೇರುವಿಕೆಯಿಂದ ಹುಟ್ಟುವ ಮೋಡವು ಆ ಪರ್ವತವನದಲ್ಲಿಯೇ ಸಮುದ್ರದ ನೀರನ್ನು ಮಳೆಯಾಗಿ ಕರೆಯುತ್ತದೆ. 'ಉಪಕಾರಿಗೆ ಅನುಪಕಾರಿಗಳ್ ಒಳವೆ' ಎಂಬಲ್ಲಿ ಅರ್ಥಾಂತರನ್ಯಾಸಾಲಂಕಾರವಿದೆ.

೧೫. ಸುಮನ=ಪುಷ್ಪ, ಕೀರ=ಗಿಳಿ, ಆತೋದ್ಯ=ಕೊಳಲು, ವೀಣೆ, ಮೃದಂಗಾದಿ ವಾದ್ಯಗಳು, ಲಟಹ=ಚೆಲುವು, ವಿಲಾಸ. ಖಗಾದ್ರಿ=ಖೇಚರರ ಪರ್ವತ-ವಿಜಯಾರ್ಧ ಪರ್ವತ. ಪುಷ್ಪ ಪರಿಮಳದಿಂದ ಆಕರ್ಷಿತವಾದ ದುಂಬಿಗಳ ಝೇಂಕಾರವೇ ಗೀತೆ, ಗಿಳಿಯ ಇಂಪಾದ ಧ್ವನಿಯೇ ವಾದ್ಯ, ನವಿಲಿನ ನೃತ್ಯ—ಇವುಗಳಿಂದ ವಿಜಯಾರ್ಧ ಪರ್ವತವು ಚಕ್ರಧರ—ಸಗರ—ನನ್ನು ಸಂಗೀತಕ ಕ್ರೀಡೆಯಿಂದ ಮರುಳುಗೊಳಿಸಿತು.

ವ: ಕನಕ ಭೃಂಗಾರ=ಬಂಗಾರದ ಗಿಂಡಿ, ಧವಳ ಆತಪತ್ರ=ಬೆಳ್ಗೊಡೆ, ಮಗುಳ್ದು=ಹಿಂದಿರುಗಿ, ವಿಧೇಯೀಕೃತಂಮಾಡಿ = ವಿಧೇಯನಾಗಿರುವಂತೆ ಮಾಡಿ, ಚತುರ್ದಶಭೂಷಣಂಗಳ್=ಕಿರೀಟವೇ ಮೊದಲಾದ ಹದಿನಾಲ್ಕು ಆಭರಣಗಳು, ಮೆಯ್ಗೆ ಮಾಡಿಸಿ=ಧರಿಸಿ, ಚೂಳಿಕೆ=ಕೊನೆ (ಶಿಖರ), ಅಖಂಡ ಭುಜದಂಡ ಪ್ರತಾಪದಿಂ=ಪರಿಪೂರ್ಣವಾದ ದಂಡದಂತಿರುವ ಭುಜದ ಪ್ರತಾಪದಿಂದ.

ಕಟಿಕ=ಸಾನುಪ್ರದೇಶ, ಸೈನ್ಯ. ಉನ್ಮಗ್ನ×ನಿಮಗ್ನ. ಉನ್ಮಗ್ನ ಜಳೆ= ಮೇಲಕ್ಕೆ ಹಾರುತ್ತಿರುವ ನೀರುಳ್ಳ [ನದಿ], ನಿಮಗ್ನ ಜಳೆ=ಕೆಳಕ್ಕೆ ಹಾರುತ್ತಿರುವ ನೀರುಳ್ಳ [ನದಿ]. ಅಱಿಕೆ—ಪ್ರಸಿದ್ಧಿ, ಉಪಕಂಠ—ಸಮೀಪ, ಅವುಂಕಿ-ಅಮುಕಿ-ಒತ್ತಿ. ತುಚ್ಛಪರಿಚ್ಛದರ್—ನೀಚವಾದ ನಿಶ್ಚಯವುಳ್ಳವರು. ಉಚ್ಚವಿಗ್ರಹ—ಶ್ರೇಷ್ಠವಾದ_ಯೋಗ್ಯತೆಗೆಮೀರಿದ-ಯುದ್ಧ. ನಿತ್ಯ (ತ್ಸ) ನಿಚ್ಚ (ತ್ಭ.) ಅಚ್ಚಿಗ—ಆಶ್ಚರ್ಯ, ಬೆಸಸು—ಪ್ರಾರ್ಥಿಸು-ಕೇಳಿಕೊಳ್ಳು. ಏಕಾರ್ಣವಂ—ಅಖಂಡ ಸಮುದ್ರವನ್ನಾಗಿ, ಸಕಲ . ಸ್ಕಂಧನಾಗಿ—ಸಮಸ್ತ ಭೂಮಂಡಲಕ್ಕೂ ಚಕ್ರವರ್ತಿಯಾದ ಸಗರನ ಭುಜದ ಮೇಲಿರುವ ಭಾರವನ್ನು ಕೊಡಲ್ಪಟ್ಟ ಹೆಗಲುಳ್ಳವನಾಗಿ-ಎಂದರೆ, ಚಕ್ರವರ್ತಿಯಿಂದ ವಹಿಸಲ್ಪಟ್ಟ ಜವಾಬ್ದಾರಿ ಯುಳ್ಳವನಾಗಿ. ಮಗಳ್ದಿರ್—ಮಗಳ್+ದಿರ್—ಬ. ವ. ಪ್ರತ್ಯಯ 'ಗಳ್'ಗೆ ಬದಲಾಗಿ (ಕೇಶಿ ಶ. ದ. ೯೭). ವಿಹಿತ—ಮಾಡಲ್ಪಟ್ಟ, ಭದ್ರ—ಮಂಗಳ, ತತ್—ವಿಷಯ, ತದ್ವಿಷಯ-ಜಶ್ತ್ವಸಂಧಿ. ಮನದೆಗೊಳ್—ಸಂತೋಷಿಸು, ಬಾಜಿಸು-ವಾಚಿಸು—ಓದು. ಗಳಿತ—ಜಾರಿ ಹೋದ, ಗಿರಿ+ಉಭಯ—ಗಿರ್ಯುಭಯ-ಯಣ್‌ಸಂಧಿ. ಬೞಿ ಬೞಿ—ಬೞಿವಿವಬೞಿ—ಬಳಿವಳಿ-ಬಳುವಳಿ—ಹತ್ತಿರ ಹತ್ತಿರ-ಹಿಂದೆ ಹಿಂದೆ ಹೋಗತಕ್ಕುದು-ಜೊತೆಗೆ ಕೊಡತಕ್ಕುದು—ಉಡುಗೊರೆ-ಕಾಣಿಕೆ. ಗುಹಾಕೂಟಗಿರಿ ನಿವಾಸಿ—ಗುಹೆ ಮತ್ತು ಶಿಖರ-ಇವನ್ನುಳ್ಳ ಬೆಟ್ಟದಲ್ಲಿ ವಾಸಿಸುವವ. ವೈಕಕ್ಷಮಾಲೆ—ಜನಿವಾರದಂತಿರುವ ಹೂಮಾಲೆ. ಮೇದಿನೀಧರ—ಪರ್ವತ. ಸೂಟ್—ಸಲ ಬಲಬೞು—ಬಲವಳು—ಪ್ರದಕ್ಷಿಣೆ ಮಾಡು.

೧೬. ಅಜಿತನಾಥನ ಸ್ತುತಿ-ಕುಲಪದ್ಮ=ಕುಲಗೃಹ, ಪರಮ ಶ್ರೀ ಕುಲಪದ್ಮ=ಶ್ರೇಷ್ಠತಮ ಸಂಪತ್ತಿಗೆ-ಮೋಕ್ಷಕ್ಕೆ ಆವಾಸಸ್ಥಾನ. ಗುಣಗಣಗಳಿಂದ ಉಪೇತ=ಗುಣಗಣೋಪೇತ. ಪ್ರಭಾ+ಅನೂನ=ಪ್ರಭಾನೂನ; ನೂನ=ನ್ಯೂನ, ಶಿಖಂಡ ಉತ್ತಂಸಮಸ್ತಂ=ಶಿಖೆಯನ್ನು ಶಿಖರದಂತೆ ಭೂಷಣಪ್ರಾಯವಾಗಿ ಕಟ್ಟಿದ ಮಸ್ತಕ, ಕ್ರಮ=ಪಾದ.

ವ: ಸಿದ್ಧಭಕ್ತಿ, ಚೈತ್ಯ (ಜಿನಬಿಂಬ) ಭಕ್ತಿ, ಪಂಚ ಗುರುಭಕ್ತಿ, ಶಾಂತಿ ಭಕ್ತಿ, ಸಮಾಧಿ ಭಕ್ತಿಗಳೆಂದು 'ಪಂಚ ಭಕ್ತಿ'ಗಳಿವೆ. ಆದರೆ ರನ್ನನಂತೆ ಸಿದ್ಧ ಭಕ್ತಿ, ಶ್ರುತಭಕ್ತಿ, ಚಾರಿತ್ರಭಕ್ತಿ, ಯೋಗಭಕ್ತಿ, ನಿರ್ವಾಣ ಭಕ್ತಿಗಳೆಂದು 'ಪಂಚ

ಭಕ್ತಿ 'ಗಳಾಗಿವೆ. ಶೇಷಾ > ಶೇಷೆ > ಸೇಸೆ = ಮಂತ್ರಾಕ್ಷತೆ, ಸ್ಥಪತಿರತ್ನ = ಜೀವರತ್ನಗಳಲ್ಲಿ ಒಂದು-ಚಕ್ರವರ್ತಿಯ ಆಲೋಚನೆಗೆ ತಕ್ಕಂತೆ ಮಾಟಕೂಟ ಪ್ರಾಸಾದಗಳನ್ನು ನಿರ್ಮಿಸುವವನು.

೧೭. ಆಗತಾನೆ ಮಸೆದ ಮನ್ಮಥನ ಪುಷ್ಪ ಬಾಣದಂತೆ ಒಪ್ಪುತ್ತಿರುವ ನಿಡಿ (ಉದ್ದ)ದಾದ, ಬಾಗಿದ, ಒತ್ತಾದ ಕೂದಲುಗಳ ರೆಪ್ಪೆಗಳುಳ್ಳ ಕಣ್ಣು ಗಳು ಶೋಭಿಸುತ್ತಿರಲು ತೆಳ್ಳಗಿನ ಶರೀರವುಳ್ಳ, ಹೊಚ್ಚ ಹೊಸತಾದ, ಯೌವ ನೆಯರಾದ ಸಗರನ ಅರಸಿಯರು ಮನತುಂಬಿ ದಿಟ್ಟಿಸಿ ನೋಡಿದರು. ಬಳಿದು > ಬಳಿಯ = ಬಾಗಿದ, ಕೊಂಕಿದ.

೧೮. ಆಗಟ್-ಅಗಳು = ಕಂದಕ, ಮೀನಲೋಚನೆ = ಮೀನಿನಂತಿರುವ ಕಣ್ಣುಳ್ಳವಳು—ಹೊಳೆ ಹೊಳೆಯುವ ಕಣ್ಣುಳ್ಳವಳು, ಮೃಗೇಕ್ಷಣ = ಜಿಂಕೆಯ ದೃಷ್ಟಿ-ಚಾಂಚಲ್ಯದೃಷ್ಟಿ, ಅಭಿವೀಕ್ಷಿಸು = ಚೆನ್ನಾಗಿ ನೋಡು.

೧೯. ಸ್ಖಲಿತಗತಿ = ತಡವರಿಸುವ ನಡೆ, ಲುಲಿತಕುಂತಲೆ = ಗುಂಗುರು ಗೂದಲುಳ್ಳವಳು, ವಲಿತನಿಜಗ್ರೀವೆ = ಚೆಂಚಲವಾದ ಕತ್ತುಳ್ಳವಳು. ಮುಗುಟ್ದು = ತಿರುಗಿ, ತಿರುತಿರುಗಿ (?) ಮತ್ತೆ ಮತ್ತೆ (?) ಗಲಿತಮದೆ = ಜಾರಿದ-ಸೋರಿದ ಮದವುಳ್ಳವಳು, ಚಲಿತಮಾನಸೆ = ಕಲಕಿಹೋದ—ಚಂಚಲವಾದ ಮನಸ್ಸುಳ್ಳವಳು. ಲಲಿತಾಂಗನಾದ ಸಗರನನ್ನು ಪೊಸಜವ್ವನೆಯರು ಪ್ರೇಮಿ ಸಿದ್ದು ಯುಕ್ತವೇ ಅಲ್ಲವೆ ?

ವ : ಮೂರ್ಧಾಭಿಷಿಕ್ತ ಮಹಾಕ್ಷತ್ರಿಯ = ಪಟ್ಟಾಭಿಷಿಕ್ತರಾದ ಮಹಾ (?) ಕ್ಷತ್ರಿಯರಾಜರು, ಸಾರ್ವಭೌಮ = ಚಕ್ರವರ್ತಿ.

೨೦. ಧರಣೀಚಕ್ರ = ಭೂಮಂಡಲ, ಪ್ರತಾಪಕ್ಕೆಅಗಿಯೆ = ಪರಾಕ್ರಮಕ್ಕೆ ಹೆದರಲು, ಪ್ರಥಿತ = ಪ್ರಖ್ಯಾತವಾದ, ಜಾತಾದರದಿಂದಂ = ತಾನಾಗಿಯೇ ಹುಟ್ಟಿದ ಆದರದಿಂದ—ಅತ್ಯಂತ ಆದರದಿಂದ, ಪೂಜಾಪರಿಕರ = ಪೂಜೆಗೆ ಬೇಕಾದಸಾಮಗ್ರಿ, ಚಕ್ರಪೂಜಾಪರಿಕರವಿಧಿಯಿಂ ಮಾಡಿದಂ = ಚಕ್ರರತ್ನದ ಪೂಜೆಗೆ ಬೇಕಾದ ಸಕಲ ಸಾಮಗ್ರಿಗಳಿಂದ ವಿಧಿವತ್ತಾಗಿ ಮಹಾ ಪೂಜೆಯನ್ನು ಮಾಡಿದನು.

## ೨: ಅಪ್ರಿಯ ಮಾಗಿಯುಂ ಹಿತಮಪ್ಪುದಂ ನೆಗಳ್ವಿಂ

ಅಷ್ಟಾದರ ವಿಷಯ ಭಾಷಾ—ಹದಿನೆಂಟು ಭಾಷಾ ರಾಜ್ಯಗಳು—ಇವು ರನ್ನನ ಕಾಲದ ಭಾಷಾರಾಜ್ಯಗಳಾಗಿರಬಹುದೆ ?

ದಶಾಂಗಭೋಗ=ದಿವ್ಯಪುರ, ದಿವ್ಯರತ್ನ, ದಿವ್ಯನಿಧಿ, ದಿವ್ಯಾಂಬರ, ದಿವ್ಯಾಚ್ಛಾದನೆ, ದಿವ್ಯಭಾಜನ, ದಿವ್ಯಶಯ್ಯೆ, ದಿವ್ಯಾಸನ, ದಿವ್ಯವಾಹನ, ದಿವ್ಯಸೇನೆ—ಇವು ಚಕ್ರವರ್ತಿಗೆ ಒದಗಿ ಬರುವಂತಹುವು. ಸಿದ್ಧವನ=ತಪೋಯೋಗ್ಯ ಉಪವನ, ಶ್ರೀಭಟ್ಟಾರಕ=ಮಹಾಮುನಿ, ಪ್ರತಿಮಾಯೋಗ=ಅಷ್ಟಮಿ ಚತುರ್ದಶಿ ಮೊದಲಾದ ಪರ್ವ ತಿಥಿಗಳ ಉಪವಾಸದ ರಾತ್ರಿಯಲ್ಲಿ ಪ್ರತಿಮೆಯಂತೆ ನಿಂತು ಮಾಡುವ ಧ್ಯಾನ. ಚತುರ್ಮುಖ ಪ್ರತಿಮಾಯೋಗ ? ಷಣ್ಣವತಿ ಸಹಸ್ರ=ತೊಂಬತ್ತಾರು ಸಾವಿರ—ಇದು ಪತ್ನಿಯರ ಸಂಖ್ಯೆ. ಕೃಷ್ಣನಿಗೆ ೧೬,೦೦೦ ಭರತನಿಗೆ ೯೬,೦೦೦; ಸಗರನಿಗೂ ೯೬,೦೦೦. ತಳವಟಿ> ತಳವಾಟಿ=ತಳವಾರ, ವಿಭೂತಿಯಿಂ=ವೈಭವದಿಂದ, ಅವತಂಸ=ಆಭರಣ, ಧರ್ಮಾವತಂಸ—ಧರ್ಮವೇ ಅವತಂಸ—ಅವಧಾರಣಾ ಪೂ.ಪ.ಕ.ಸ. ಬೆಸಸೆ= ತಿಳಿಸಲು. ಈಯಿರ್ದನೆ=ಈ ಇರ್ದನೆ=ಇಲ್ಲಿರುವವನೇ—ಯಕಾರಾಗಮ ಸಂಧಿ.

೧. ನಾನು ನಿನ್ನ ಮಿತ್ರನಾದ ಮಣಿಕೇತು ; ನೀನು ಹಿಂದೆ ಮಹಾಬಲನಾಗಿದ್ದವನು. ಇದನ್ನೇನು ತಿಳಿಯಬಲ್ಲೆಯಾ ? ಅಱಿವೋ—ತಿಳಿಯುತ್ತಿಯಶಾ ?

೨. ಮಿತ್ರನ ಕಿವಿಮಾತು:—ಹಿತನುಡಿ. ಹಿಂದೆ ದೇವಲೋಕದಲ್ಲಿ ನಾವಿಬ್ಬರೂ ಪರಸ್ಪರ ಪ್ರೀತ್ಯಾದರಗಳಿಂದ ಮಾಡಿಕೊಂಡಿದ್ದ ಒಪ್ಪಂದವನ್ನು ಮರೆತೆಯಾ ? ಅಪಾರವಾದ ಈ ಸಂಸಾರಸಾಗರದ ಪಾರ (ದಡ)ವನ್ನು ಸೇರು. ನೆನೆದು+ಉಂ=ನೆನಸಿಯೂ ಕೂಡ ? ಆಱನೆ=ಸಮರ್ಥನಾಗಲಿಲ್ಲವಲ್ಲ ! ಆರ್ ಗೆಲಲಾರ್ಪರೊ ಮೋಹರಾಜನಂ – ಇದು ಕವಿಯ ಉದ್ಗಾರ ! ಇಲ್ಲಿ ಅರ್ಥಾಂತರನ್ಯಾಸಾಲಂಕಾರವಿದೆ.

ವ: ದಿವಿಜಂ=[ಮಣಿಕೇತು] ದೇವನು, ಅಳುಪಿಪೋಗುತ್ತಿರೆ=ನಾಶವಾಗಿ ಹೋಗುತ್ತಿರಲು ಆಱಿಪು>ಅಳುಪು (?) ಚಾರಣ ಋಷಿ=ಚಾರಣ ಋದ್ಧಿ (ತಪೋಬಲದಿಂದ ಸಾಧಿಸಿದ ಗಗನ ಸಂಚಾರಶಕ್ತಿ) ಯನ್ನು ಪಡೆದ ಯೋಗಿ, ಬಂದಿಸಿ>ವಂದಿಸಿ, ನಿಮ್ಮ ತಪಂಬಟ್ಟ=ನೀವು ತಪಸ್ಸನ್ನು ಹಿಡಿದ—

ವಿಭಕ್ತಿ ಪಲ್ಲಟವಿದೆ. ಸಂಯೋಗ × ವಿಯೋಗ, ಆಗಂತುಕ ದುಃಖ=ಅನಿರೀಕ್ಷಿತ ವಾಗಿ ಬಂದ ದುಃಖ. ಪತ್ತುವಿಟ್ಟು=ಸಂಬಂಧವನ್ನು ಕಡಿದುಕೊಂಡು ದೂರ ವಿರಿಸಿ, ಪತ್ತುವಿಡು=ಧಾ, ಕಿಱಿದುಂ ಬೇಗದಿಂ=ಕೂಡಲೆ. ತಮ್ಮ ಕೃತ ಪ್ರತಿಜ್ಞೆ=ತಾವು ಮಾಡಿಕೊಂಡಿದ್ದ ಪ್ರತಿಜ್ಞೆ—ವಿಭಕ್ತಿ ಪಲ್ಲಟ. ಮಣಿಕೇತುವಿನ ಮಿತ್ರೋದ್ಧಾರದ ಹಂಬಲ, ಸತತ ಪ್ರಯತ್ನಗಳು ಗಮನೀಯ.

೩. ಮಣಿಕೇತುವಿನ ಅನುಕಂಪೆ-ಅಳವಿ=ವಶ, ವಿಶ್ವಾಸ, ಅಘಕೇತು= ಪಾಪವೆಂಬ ವೈರಿ, ಭವಜಲರಾಶಿ=ಸಂಸಾರಸಾಗರ, ಚರ್ವಿತ ಚರ್ವಣ= ಅಗಿದುದನ್ನೇ ಮರಳಿ ಅಗಿಯುವುದು-ಅನುಭವಿಸಿದುದನ್ನೇ ಮತ್ತೆ ಅನುಭವಿಸು ವುದು—ಹೊಸದೇನಿದೆ ? ಅವಚೆಱ ಬೇಡ=ಜುಗುಪ್ಸೆ ಪಡಬೇಡವೆ ? ಭವಾನುಭವ=ಸಂಸಾರದ ಸುಖದುಃಖಗಳ ಅನುಭವ

೪. ಕಡು ಚಪಲನಿವಂ-ಇವನೊಬ್ಬ ದೊಡ್ಡ-ಚಪಲ ಬುದ್ಧಿಯುಳ್ಳವನು. ತನಗೇಗಿಡುಗುಮೋ=ತನಗೆ ಏನಂ ಕಿಡುಗುಮೋ=ತನಗೇನು ನಷ್ಟವಾಗು ತ್ತದೆ-ಈತನ ಗಂಟೇನು ಹೋಯಿತು ? ಪರದುಃಖ ಶೀತಲಂ=ಇನ್ನೊಬ್ಬರ ದುಃಖದಲ್ಲಿ ತಾನು ಶಾಂತವಾಗಿರುವನು—ಸುಖವಾಗಿರುವವನು, ಮೆಚ್ಚಿದ ವೋಲ್=ಇಷ್ಟ ಬಂದಂತೆ, ಗಡ-ಅವ್ಯಯ. ಆದರೆ ಸಗರನಿಗೆ ರಾಜ್ಯಮೋಹಾದಿ ಗಳು ಪ್ರಬಲವಾಗಿದ್ದು ಈಗಲೂ ವೈರಾಗ್ಯ ಹುಟ್ಟುವುದಿಲ್ಲ.

ವ: ಸಂಸಾರಬಂಧ ಎಷ್ಟು ಗಾಢವಾದುದೆಂಬುದು ಇಲ್ಲಿ ಸುವ್ಯಕ್ತ. ವೈರಾಗ್ಯಹೇತುವಂ ಅವಧಾರಿಸಿ=ವೈರಾಗ್ಯಕ್ಕೆ ಕಾರಣವಾದುದನ್ನು, ಏನು ಮಾಡಿದರೆ ಇವನಿಗೆ ವೈರಾಗ್ಯ ಬರುತ್ತದೆ ಎಂಬುದನ್ನು, ಚೆನ್ನಾಗಿ ಮನಸ್ಸಿಗೆ ತಂದುಕೊಂಡು. " ಮಣಿಕೇತು ಪ್ರತಿಬೋಧಿಸಿದ ಎರಡು ಸಂದರ್ಭಗಳಲ್ಲೂ ಸಗರ ಮಾತನಾಡುವುದೇ ಇಲ್ಲ. ಅವನ ವಿಚಾರವಾಗಿ ಕವಿಯೆ 'ಅಱನೆಷಷ್ಟಿ ಸಹ್ರಸ ಪುತ್ರ ಮೋಹದೆ ನಿಜರಾಜ್ಯಮುಂ ತೊಱೆಯಲ್' ಎಂದು ಒಂದು ಸಂದರ್ಭದಲ್ಲೂ 'ರಾಜ್ಯಮೋಹದೊಳಂ ಪುತ್ರ ಸ್ನೇಹದೊಳಂ ತನ್ನ ನುಡಿ ಗೊಡಂಬಡದನಿತಱೊಳೆ ' ಎಂದು ಇನ್ನೊಂದರಲ್ಲೂ ಹೇಳುತ್ತಾನೆ. ಸಗರನ ಮಾನಸಿಕ ಹೋರಾಟವನ್ನು ಕವಿ ಅವನ ಮಾತುಗಳಲ್ಲೆ ಚಿತ್ರಿಸಬೇಕಿತ್ತು, ಎನಿಸು ತ್ತದೆ. ಒಂದು ಕಡೆ ಮೋಹ, ಇನ್ನೊಂದು ಕಡೆ ಹಿಂದಿನ ಪ್ರತಿಜ್ಞೆಯ ನೆನಪು- ಇವುಗಳ ನಡುವೆ ಸಗರನ ಚಿತ್ತ ಹೊಯ್ದಾಡಿದ ಪರಿಯನ್ನು ವಿಶದವಾಗಿ ನಿರೂ

ಪಿಸುವ ಅವಕಾಶವಿತ್ತು ; ಅದನ್ನು ರನ್ನ ಸರಿಯಾಗಿ ಬಳಸಿ ಕೊಂಡಿಲ್ಲವೆಂದು ಹೇಳಬಹುದು. ಮನೋವ್ಯಾಪಾರಗಳನ್ನು ಅವುಗಳ ಎಲ್ಲ ಜಟಿಲತೆಯೊಡನೆ ಚಿತ್ರಿಸುವಲ್ಲಿ ಅವನಿಗೆ ಆಸಕ್ತಿ, ಶಕ್ತಿ ಎರಡೂ ಸಾಲವು ಎಂಬುದಕ್ಕೆ ಪ್ರಕೃತ ಪ್ರಸಂಗವೂ ಒಂದು ನಿದರ್ಶನ. ಪಂಪನಂತಹ ಕವಿಯ ಕೈಗೆ ಇಂಥ ಸನ್ನಿವೇಶ ಸಿಕ್ಕಿದ್ದರೆ ಇನ್ನೂ ಉನ್ನತವಾದ ರೀತಿಯಲ್ಲಿ ನಿರ್ವಹಣೆಗೊಳ್ಳುತ್ತಿದ್ದುದರಲ್ಲಿ ಸಂಶಯವಿಲ್ಲ.''—ಇದು ಒಂದು ಅಭಿಪ್ರಾಯ. ಆದರೆ ಸಗರನ ಮೌನ ಇಲ್ಲಿ ಅತ್ಯಂತ ಧ್ವನಿಪೂರ್ವವಾಗಿದೆ ಎಂಬುದು ಗಮನಾರ್ಹ.

೫. ಮಣಿಕೇತು ಕಂಡುಕೊಂಡ ಉಪಾಯ ಇದು—ಪುತ್ರವಿಯೋಗ—ಆ—ವರ್ಣಧ್ವನಿ, ವ್ಯಪಾಯ=ಇಲ್ಲದಂತಾಗು, ಯೋಜಿಸೆ=ಹೊಂದಿಸಲು, ಚಿತ್ತ ಪಂಕೇಜದೊಳೊಂದುಪಾಯ ಮಕರಂದಮನಿಟ್ಟೊಸೆದಿರ್ದಂ=ಮನಃಕಮಲದಲ್ಲಿ ಒಂದು ಉಪಾಯವೆಂಬ ಮಕರಂದವನ್ನಿಟ್ಟುಕೊಂಡು ಸಂತೋಷದಿಂದಿದ್ದನು. ಇರ್ಪಿನಂ=ಹೀಗಿರುವಲ್ಲಿ, ಕ್ಷಣಮಾತ್ರದಲ್ಲಿ—ನೆಪಮಾತ್ರದಿಂದ — ವೈರಾಗ್ಯ ವುಂಟಾಗುವುದು ಕೆಲವರಿಗಾದರೆ, ಜೀವನದಲ್ಲಿ ಏನಾದರೊಂದು ಮಹಾ ಆಘಾತ ವೊದಗಿದರೇ ಮತ್ತೆ ಕೆಲವರಿಗೆ ; ಸಗರ ಈ ಎರಡನೆಯ ಗುಂಪಿನವ. ಎಂಬ ಅಭಿಪ್ರಾಯ ಮೇಲ್ನೋಟಕ್ಕೆ ಸರಿಬೆನಿಸಿದರೂ 'ಕಾಲಲಬ್ಧಿ' ಕೂಡಿಬರದಿದ್ದಾಗ ಹೃದಯ ಹದಗೊಳ್ಳುವುದೆಂತು ? ಇದು ಕೂಡಿಬಂದಾಗ ನಮಗೆ ಅತ್ಯಲ್ಪ ವೆನಿಸುವಂತಹ ಕಾರಣವೂ ಆ ಜೀವಕ್ಕೆ ಮಹತ್ತಾದುದಾಗಿ ಕಾಣಿಸುತ್ತದೆ.

ವ : ನಿಶ್ಚಿತಗೊಂಡ ಯೋಜನೆಯೂ ಕಾರ್ಯಗತವಾಗಲು ಕಾಲ ಕೂಡಿ ಬರಬೇಕು ; ಇಲ್ಲಿ ಇದಕ್ಕೆ ಅನೇಕ ಸಂವತ್ಸರಗಳೇ ಬೇಕಾದುವು !

೬. ಚಕ್ರವರ್ತಿ ಪುತ್ರರಿಗೆ ಸಹಜವಾಗಿ ಹೇಳಬಹುದಾದ ಕೆಲಸವೆಂದರೆ ದಿಗ್ವಿಜಯ, ಶತ್ರುಸಂಹಾರ. ಅದು ಈಗಾಗಲೇ ಆಗಿ ಹೋಗಿದೆ. ಮತ್ತೆ ಯಾರಾದರೂ ಹುಟ್ಟಿಕೊಂಡರೂ ಚಕ್ರರತ್ನವಿದೆ. ಇನ್ನು ಮಕ್ಕಳಿಗೆ ಏನು ಕೆಲಸವನ್ನು ಕೊಟ್ಟಾನು ? ಬೆಸಕೆಯ್ವುದರುಮಂ (ಬೆಸಕೆಯ್+ಅದ+ಅರ್+ಉಂ+ಅಂ) =ಆಜ್ಞೋಲ್ಲಂಘನೆ ಮಾಡುವವರನ್ನೂ, ಎನಗಂ=ನನಗೂ, ಬೆಸಕೆಯ್—ಗೌರವಿಸು.

ವ : ಆಗ್ರಹ ಬುದ್ಧಿಗಳಾಗಿ=ಹಟ ಹಿಡಿದವರಾಗಿ, ಸುಖಲೋಲುಪ್ತಿ

ಬೇಸರ ಹುಟ್ಟಿಸಿದೆ, ಕೆಲಸ ಬೇಕೆನಿಸಿದೆ. ಮನುಷ್ಯನಿಗೆ ಕೆಲಸದ ಅಗತ್ಯ ಇದೆ, ಸಂಪೂರ್ಣ ಸೋಮಾರಿಯಾಗಿರಲಾರ. ಬೆಸನ್=ಕೆಲಸ.

೭ : ಕಾಯಲುಂ—ಕಾಪಾಡಲೂ ('ಕಾ' ರಕ್ಷಣೇ—ಶ. ಮ. ದ.—ಧಾತು ಪ್ರಕರಣ). ಏಱಿದವರ್ಗೆ ಆರ್ತು ಈಯಲುಂ—ಮೇಲೇರಿ ಬಂದವರಿಗೆ ತೃಪ್ತಿಪಡಿಸಿಕೊಡಲೂ ಎಂದರೆ ಅವರನ್ನು ಸರಿಯಾಗಿ ಶಿಕ್ಷಿಸಲೂ, ಈ—ಧಾ. ಈ+ಅಲ್+ಉ—ಈಯಲುಂ. ಧಾತ್ರ—ಬ್ರಹ್ಮ. ಬ್ರಹ್ಮ ತೋಳೆರಡನ್ನು ಮಾಡಿರುವುದೇ ಶರಣು ಬಂದವರನ್ನು ಕಾಯಲು ಮತ್ತು ಏರಿ ಬಂದವರನ್ನು ಶಿಕ್ಷಿಸಲು. ಈ ಎರಡೂ ಗುಣಕ್ಕೆ ಹೊರತಾಗಿ ಬಾಳಿದವನು ನರಕದಲ್ಲಿ ಅಪಯಶಸ್ಸಿಗೆ ಗುರಿಯೂ ಆಗುತ್ತಾನೆ ಎಂಬ ಯುಕ್ತಿ ಉತ್ಸಾಹಗೊಳಿಸಿರುವಾಗ, ಇಂತಹ ವ್ಯರ್ಥವಾದ ಬದುಕು ಎಂತಹ ಬದುಕು, ಈಗೇನುಮಾಡೋಣ ? ಈ ಬಾಹು ಸಮೂಹವು ನಮಗೆ ವ್ಯರ್ಥವಾದುವು.

ಷಂಡ—ಸಮೂಹ. ಬರ್ದು—ಬದುಕು. ನರಕ+ಆವಾಸ—ನರಕಾವಾಸ —ಸ. ದೀ. ಸಂ. ಯುಕ್ತಿ—ಚಾತುರ್ಯ.

೮. ಮದೋದ್ಧತರ್ಕಳಿರಲಾಱದೆ ಪೇಟು=ಮದದಿಂದ ಉದ್ಧತ ರಾದವರು ಸುಮ್ಮನಿರಲಾದೀತೆ ? ಚಾವಲಿಸೆ—ಚಾಪಲಿಸೆ=ಚಾಂಚಲ್ಯಗೊಳಿಸಲು. ಕದರ್ಥಿಸಂ=ಪೀಡಿಸು, ಕಾಡಿಸು. ಅಂಕದ=ಪ್ರಸಿದ್ಧರಾದ.

ರನ್ನನಂತೆ ಮದಗಳು ಐದು—ಕುಲ, ಜಾತಿ, ವಯಸ್ಸು, ದೋರ್ವಲ ಮತ್ತು ರಾಜ್ಯ. ನಾಗಚಂದ್ರನ ಮಲ್ಲಿನಾಥ ಪುರಾಣದಲ್ಲಿ ಇವಕ್ಕೆ ಬೇರೆಯಾದ ಐದು ಮದಗಳನ್ನೇ ಹೇಳುತ್ತಾನೆ—ಲಕ್ಷ್ಮಿ (ಸಂಪತ್ತು), ವಿದ್ಯೆ, ರೂಪು, ಯೌವನ, ಅನ್ವಯ (ವಂಶ). ಇದೇ ಕವಿಯ ರಾಮಚಂದ್ರ ಚರಿತಪುರಾಣದಲ್ಲಿ ಮದಗಳು ಎಂಟಾಗಿವೆ—ಕುಲ, ರೂಪ, ವಯಸ್ಸು ದೋರ್ಬಲ. ಜಾತಿ. ಕಲಾ, ದೇವತಾ, ರಾಜ್ಯ. ಸಮಂತ ಭದ್ರಾಚಾರ್ಯರೂ ಮದಗಳು ಎಂಟೆಂದೇ ಹೇಳಿದ್ದಾರೆ ; ಆದರೆ ಅವು ಇವಕ್ಕಿಂತ ಬೇರೆಯಾಗಿವೆ—ಜ್ಞಾನ, ಪೂಜಾ, ಕುಲ, ಜಾತಿ, ಬಲ ಋದ್ಧಿ, ತಪ, ರೂಪ—'ರತ್ನಕರಂಡಕ ಶ್ರಾವಣಾಚಾರ—೨೫.'

೯ : ಮಣಿಕೇತುವಿನ ಬೋಚನೆ—ಅಪ್ರಿಯಮಾಗಿಯುಂ ಹಿತಮಪ್ಪುದಂ ನೆಗೞ್ವೆಂ—ಲೌಕಿಕವಾಗಿ ಅಪ್ರಿಯವಾದರೂ ಅಲೌಕಿಕವಾಗಿ ಹಿತವಾದುದನ್ನು ಮಾಡುತ್ತೇನೆ ಎಂದು. ಅವರೆಲ್ಲರೂ "ಭಸ್ಮಾವಲೇಪನರಾಗುವಂತೆ—' ಭಸ್ಮಾ

ವಿಶೇಷ 'ರಾಗಿಂವುದು ವೈದಿಕ ಕಥೆಯಲ್ಲಿ—ಮಾಡುತ್ತಾನೆ; ಇಲ್ಲಿ ಅವರು ನಾಶ ಗೊಳ್ಳುವುದಿಲ್ಲ. ಕೃತಕ=ಸಹಜವಲ್ಲದ ರೀತಿ. ಕಾದುಟಿಪಿ=ರಕ್ಷಿಸಿ, ಉಳಿಸಿ. ಅವನು ಹೂಡಿದ ತಂತ್ರ ಅದೆಷ್ಟು ಕುತೂಹಲಕಾರಿಯಾಗಿದೆ? "ಅರುವತ್ತು ಸಾವಿರ ಮಕ್ಕಳು ಅಳಿದರೆಂದು ಸಗರನಿಗೆ ಅವನು ತಟಕ್ಕನೆ ಹೇಳುವುದಿಲ್ಲ. ಹಾಗೆ ಹೇಳಿದ್ದರೆ, ಸಗರನಿಗೆ ವಿರಕ್ತಿ ಹುಟ್ಟುವುದಿರಲಿ, ಅನಿರೀಕ್ಷಿತವಾದ ದಾರುಣಾಘಾತದಿಂದ ಮರಣವೆ ಉಂಟಾಗಬಹುದಿತ್ತು. ಪುತ್ರನಾಶದ ಆಘಾತದ ಸ್ಮರಣೆಗೆ ಅವನ ಹೃದಯವನ್ನು ಹದಗೊಳಿಸುವುದು ಸಾವಿನ ಅನಿವಾರ್ಯತೆಯನ್ನೂ ಇಹ ಜೀವನದ ನಶ್ವರತೆಯನ್ನೂ ಅವನು ಪರಿಭಾವಿಸುವಂತೆ ಮಾಡಿ ವೈರಾಗ್ಯದತ್ತ ತಿರುಗಿಸುವುದು; ಜೊತೆಗೆ ಅವನ ಮಾತಿನಲ್ಲೇ ಅವನನ್ನು ಸಿಕ್ಕಿಸುವುದು—ಇಷ್ಟೂ ಉದ್ದೇಶಗಳು ಈಡೇರುವಂತೆ ಮಣಿಕೇತು ತಂತ್ರ ಹೂಡುತ್ತಾನೆ. ಈ ಹೂಟದಲ್ಲಿ ಮನೋವೈಜ್ಞಾನಿಕ, ಆಧ್ಯಾತ್ಮಿಕ ಹಾಗೂ ವ್ಯಾವಹಾರಿಕ ಸತ್ಯಗಳು ಮುಪ್ಪುರಿಗೊಂಡಿರುವುದನ್ನು ಕಾಣುತ್ತೇವೆ. ಇದೇ ಸಗರ ಕಥೆಯ ತಿರುಳು."

೯. ಅವಿಧಾ (ಅವಿಧೋ?)=ಕಾಪಾಡಿ ಕಾಪಾಡಿ ಎಂದು ಮೊರೆಯಿಡುವ ಕೂಗು. ಒದಱು=ಚಡಪಡಿಸು, ಕೂಗು. ಪಾರ್ವನ್+ಎನ್=ಬ್ರಾಹ್ಮಣನಾಗಿದ್ದೇನೆ. 'ಬ್ರಾಹ್ಮಣ' ಎಂಬ ನಾಮಪದದ ಮೇಲೆ 'ಎನ್' ಎಂಬ ಆಖ್ಯಾತ ಪ್ರತ್ಯಯವು ಬಂದು ಕ್ರಿಯಾಪದವಾಗಿ 'ಬ್ರಾಹ್ಮಣನಾಗಿದ್ದೇನೆ' ಎಂಬ ಅರ್ಥವನ್ನು ಹೊಂದಿದೆ [ನೋ; ಶ.ಮ.ದ. ೨] ನಿರ್ಘೃಣಂ=ನಿಷ್ಕರುಣೆ, ಯಮ—ಜವ. "ರಾಮಾಯಣದ ಉತ್ತರಕಾಂಡದಲ್ಲಿ ಬರುವ ಶಂಬೂಕ ತಪಸ್ವಿಯ ಕಥೆಯ ಛಾಯೆ ಈ ಪ್ರಸಂಗದ ಮೇಲೆ ಇರುವಂತಿದೆ."

ವ: ಕೆಯ್ಯ ತೊವಲ್ವೆರಸು=ಕೈಯಲ್ಲಿ ಚಿಗುರನ್ನು ಹಿಡಿದು (?)— ಸೊಪ್ಪು ಮುಂತಾದುವನ್ನು ಹಿಡಿದು. ಮೊರೆಯಿಡುವವರು ಕೈಯಲ್ಲಿ ಚಿಗುರು—ಗರಿಕೆ ಹಿಡಿಯುವುದು ಶರಣು ಬಂದಂತೆ ಎಂದಿರಬಹುದು. ಓಲಗಂಗೊಡು=ಸಭೆ ನಡೆಸು. ಅಶ್ರುತಪೂರ್ವಮಪ್ಪ=ಹಿಂದೆಂದೂ ಕೇಳದಿರುವ, ಬಱಿಯನಟ್ಟಿ=ಹೇಳಿಕಳುಹಿಸಿ, ಕರೆಸಿ.

೧೦. ಪಾಱಿಂಬಟ್ಟೆಂ=ನಾಶವಾಗಿ ಹೋದೆನು—? ಪಾಱಿಂಪಡು=ಪಾಱುಂಬಡು, ಪಾಡಂಪಡು=ಪಾಡುಪಡು, ಬಹು ಕಷ್ಟಪಡು.

೧೧. ತಡೆಯದೆ ಪೋಟ್ಟಲ್ಲಿ—ವಯಸ್ಸು ಬಂದಿದೆ, ಮದುವೆಯನ್ನು ತಡೆಯುವುದು ಸರಿಯಲ್ಲ, ಮದುವೆಯನ್ನು ಮಾಡಬೇಕು ಎಂದಿರುವಷ್ಟರಲ್ಲಿ; ಜವನೆಂಬ ಸಿಡಿಲ್ ಸಿಡಿಲಿನಂತೆ ಬಂದೆರಗಲು, ಈಯಲೆವೇಟ್ಟುಂ—ರಾಜನಲ್ಲಿ ಇದು ಇವನ ಒತ್ತಾಯ; ಇದು ತೋಳ ಕುರಿಮರಿಯ ಕಥೆಯನ್ನು ನೆನಪಿಗೆ ತರುವಂತಿದೆ. ಸಿಡಿಲ್—ಚದುರುತ್ತ ಹರಡು; ಸಿಡಿಲು. 'ಸಿಡಿಲ್ ವಿಕೀರ್ಣೇ ಮೋಘವಹ್ನೌ ಚ; 'ಈ ಪ್ರದಾನೇ' (ಶ.ಮ.ದ. ಧಾತುಪ್ರಕರಣ)

೧೨. ಶರಣಾಗಾ=ಆಶ್ರಯಕೊಡು [ಶ.ಮ.ದ–ಸಂಬುದ್ಧಿಯಲ್ಲಿ ದೀರ್ಘಕಾಕು–ಸುಖ ಸಂಪದಮಂ ಮಾಟ್ಪುದೆಮಗೆ ಪರಮಜಿನೇಂದ್ರಾ] ಬ್ರಾಹ್ಮಣನಾಗಿರುವ ನನ್ನನ್ನು ಕರುಣಿಸು. ಮಗನನ್ನು ಯಮಪುರಿಯಿಂದ ತರ ಬೇಕು. ಇಲ್ಲವಾದರೆ, ನನಗೆ ಮರಣವೆ ಶರಣು, ಇದಿಷ್ಟೇ ನಾನು ನಿನ್ನ ಪಾದ ಗಳಲ್ಲಿ ಶರಣುಬಂದು ಬೇಡಿಕೊಳ್ಳುವುದು. ಬ್ರಾಹ್ಮಣನಾದ ನಾನು ಸತ್ತರೆ ನಿನಗೆ ಬ್ರಹ್ಮಹತ್ಯಾದೋಷ ಬರುವುದು ಎಂಬುದು ವ್ಯಂಗ್ಯಾರ್ಥ.

೧೩. ಬ್ರಾಹ್ಮಣಾವಂಶವನ್ನು ಭರತನು ಸೃಷ್ಟಿಸಿದವನಲ್ಲಾ ಅವನೂ ಚಕ್ರವರ್ತಿ, ನೀನೂ ಚಕ್ರವರ್ತಿ. ಒಬ್ಬ ಬಡಬ್ರಾಹ್ಮಣನ ಮಗನನ್ನು ಕಾಪಾಡು ವುದು ನಿನ್ನಂತಹವನಿಗೆ ಅಸಾಧ್ಯವಾದುದೇನು ? ಅವನ ಮಾತಿನಲ್ಲಿ ಚಕ್ರವರ್ತಿ ತ್ವವನ್ನು ಕುರಿತ ವಿಡಂಬನೆಯಿದೆ.

ವ: ಬಾಯಬಿಡಿದು=ಪ್ರಲಾಪಿಸುತ್ತ, ಪುಯ್ಯಲ್ಚಿ=ಹುಯ್ಯಲಿಟ್ಟು, ವಿಸ್ಮಯಾಕ್ರಾಂತಸ್ವಾಂತನಾಗಿ=ಆಶ್ಚರ್ಯಾಭಿಭೂತ ಮನಸ್ಸುಳ್ಳವನಾಗಿ.

೧೪. ಈ ಬ್ರಾಹ್ಮಣನ ಮೂದಲಿಕೆಯ ಮಾತುಗಳಿಂದ ನಾನು ಅಪಾರ ಸಾಹಸದಿಂದ ಗಳಿಸಿದ ನನ್ನ ಅಪಾರವಾದ ಕೀರ್ತಿ ಮಸುಳಿಸುವಂತಾಗಿದೆ.

೧೫. ಚಕ್ರವರ್ತಿ ತನ್ನ ಅಸಹಾಯಕತೆಯನ್ನು ಕುರಿತು ಚಿಂತಿಸುತ್ತಾನೆ ಆಪತ್ಯ ಶೋಕವಿಕಳಂ=ಮಗ ಸತ್ತ ದುಃಖದಿಂದ ಬುದ್ಧಿ ವಿಕಲ್ಪಿತನಾಗಿದ್ದಾನೆ. ಸತ್ತರುಂ ಎತ್ತಲ್ ಆರ್ಪರ್ ಒಳರೆ ? ಪೆಱತೇನ್ ಏನೆಂದುಂ ಎಂತೆಂದುಂ ಇಂ—ಇದು ಪದ ವಿಭಾಗ. 'ನಿರ್ಮಳಕೀರ್ತಿಲಕ್ಷ್ಮಿ ಕಿಡುಗುಂ' ಇದರಿಂದ ಇನ್ನು ಉಳಿದುದೇನು ? ಅರ್ಥಿಪ್ರಾರ್ಥನಾಭಂಗ=ಬೇಡಿದವನ ಬೇಡಿಕೆಯನ್ನು ನಡೆಸಿ ಕೊಡದಿರುವುದು. ಪೆಱತೇನ್ (ಪೆಱತು + ಏನ್) ಇನ್ನು ಬೇರೆ ಏನಿದೆ? ಏನೆಂದುಂ

ಎಂತೆಂದುಂ=ಏನೆಂದಾಗಲಿ, ಹೇಗೆಂದಾಗಲಿ. ಇಂ ನುಡಿಯಲ್ಕೆ = ಇನ್ನು [ಬೇರೆ] ಹೇಳುವುದಕ್ಕೆ.

೧೬. ಅಘಟಮಾನಂ=ನಡೆಯಲಾಗದಂತಹುದು 'ಎತ್ತೆತ್ತ ಬಂದು ಮೂಡಿದಂ, ಎತ್ತೆತ್ತ ಎನಗೆ ಇನಿತು ದುರ್ಯಶಂ ಮಾಡಿದನೋ' ಎಂಬ ಯೋಚನೆ–ಚಿಂತೆ ತುಂಬ ಸಹಜವಾಗಿದೆ. ದೇಸಿಮಾತು ಶಕ್ತಿಯುತವಾಗಿದೆ; ಆವನ ತೊಳಲಾಟವನ್ನು ಎತ್ತಿ ಹಿಡಿದಿದೆ.

ವ : ಓರೋರ್ವರ್ ಅಪ್ಪೊಡಂ ಸತ್ತಱಿಯದ=ಯಾರೊಬ್ಬರಾದರೂ ಸತ್ತುದೇ ತಿಳಿಯದ, ಮೇಣ್ದಪ್ಪಡಂ=ಮೇಣ್ಪೊರ್ಡಂ=ಹಾಗೊಂದು ವೇಳೆ ತಂದಲ್ಲಿ, ಅಱಿದುಮಱಿಯದಂತೆ=ಇದು ಅಸಾಧ್ಯವೆಂದು ತಿಳಿದೂ ತಿಳಿಯು ದಂತೆ ನಟಿಸಿ. ಸತ್ತಱಿಯದ ಮನೆಯ ಪುಲ್ಲುಂ ಕಿರ್ಚುಮಂ ಕೊಂಡುಬರ್ಪುದು— ಇದು ಬುದ್ಧನ ಕತೆಯ ಕಿಸಾಗೋತಮಿಯ ಪ್ರಸಂಗವನ್ನು ನೆನಪಿಗೆ ತರುತ್ತದೆ. ಮೂಲದಲ್ಲಿಲ್ಲದ ಇದನ್ನು ರನ್ನ ಬಳಸಿಕೊಂಡಿರುವಂತಿದೆ. ಸಾವಿನ ಅನಿವಾರ್ಯತೆ ಯನ್ನು ಮನಗಾಣಿಸುವ ಈ ಪ್ರಸಂಗ ಮಣಿಕೇತುವಿಗೂ ಬೇಕಾಗಿರುವಂತಹುದೇ. ಈ ಮುಂದೆ ಬುದ್ಧಿಸಾಗರ ಮಂತ್ರಿಯ ಉಪದೇಶ, ವೈರಾಗ್ಯ ಬೋಧೆಗೆ ಎಡೆ ಮಾಡಿಕೊಂಡು, ಕವಿ ಜೈನಧರ್ಮ ಪ್ರಸಾರವನ್ನೇ ಮಾಡುತ್ತಿರುವಂತಿದೆ. ಈ ವೈರಾಗ್ಯಬೋಧೆ ಕಾವ್ಯಮಯವಾಗಿದೆ; ಪ್ರಭುಸಮ್ಮಿತ ಕಾಂತಾ ಸಮ್ಮಿತವಾಗಿದೆ. ಹಿಂದೆ ವಿಮಲವಾಹನನಿಗೆ ವೈರಾಗ್ಯಬೋಧೆ; ಇಲ್ಲಿ ಸಗರನಿಗೆ.

೧೭. ಜ್ಯೋತ್ಸ್ನಾ (ತ್ಸ)–ಜೊನ್ನ (ತ್ಭ) ಚಿತ್ರಮಂಪ್ಪಗೆ=ಚಿತ್ರಂಬುಗೆ, ಪಗಲ್–ಇರುಳ್, ಜೊನ್ನಂ–ಕಾಳಂ ಎಂಬ ಉಕ್ತಿ ಚಿತ್ರಂಬುಗೆ ನೆರೆದರ್– ಅಗಲ್ವರ್, ಪುಟ್ಟುವರ್–ಪೊಂದುವರ್ ಎಂಬುದನ್ನು ನೀಂ ಬಗೆಯು. ಕಾಳಂ= ಕತ್ತಲು, ಪೊಂದು = ಸಾವು, ಕಾಳಾಭೀಳವಕ್ತ್ರಾಂತಮಂ=ಯಮನ ಭಯಂಕರ ವಾದ ಬಾಯೊಳಗನ್ನು, ಪಜ್ಜ=ಮುತ್ತಜ್ಜ, ದಲ್=ಅವ್ಯಯ–ಅತ್ಯಂತ ನಿಶ್ಚಯಾರ್ಥದಲ್ಲಿ.

೧೮. ಬಾರಿ=ಸರದಿ, ಯಮನ ಸರದಿಯಲ್ಲಿ ತಪ್ಪಿಸಿಕೊಂಡು ಬದುಕು ವವರು ಯಾರು ? ಪೆಱಗನೆ=ಹಿಂದೆಯೇ, ಅಱಿವಂ=ವಿವೇಕವನ್ನು

೧೯. ನೊಣೆ=ನೊಣೆಯುವುದು—ಹಲ್ಲುಗಳ ಮಧ್ಯೆ ಸಿಕ್ಕಿಕೊಂಡ ಪದಾರ್ಥವನ್ನು ನಾಲಗೆಯಿಂದ ತೆಗೆದು, ಅದಿದು ರುಚಿನೋಡುವುದು–ತಿನ್ನು(?),

ನುಂಗು (?) ಚತುರ್ಗತಿ ಭ್ರಮಣ ರೂಪವಾದ ಈ ಸಂಸಾರದಲ್ಲಿ ಯಾರನ್ನು ತಾನೆ ಯಮ ಬಿಟ್ಟಿದ್ದಾನೆ ?

೨೦. ಬಾಟಿಗ್ಗೆ=ಬಾಳಲಿ, ಮಾಣ್ಗೆ=ಬೇಡ, ಪೆಣ್+ಪಡೆ-ಪೆಣ್ಬಡೆ -ಹೆಂಗಸರ ಸಮೂಹ.

೨೧. ಕುಲಜ—ಕುಲಹೀನ. ಕಲಿ-ಪಂದೆ, ಮಹಾಭಿಮಾನಿ-ನಾಣಿಲಿ, ಹೀಗೆಂದು ಭೇದಮಾಡದೆ ಸಂತೋಷದಿಂದ ಮೇಲೆಬಿದ್ದು ಕೊಲ್ಲುತ್ತಾನೆ. ಆಟಂದು (ಭೂತಕೃ)=ಮೇಲೆಬಿದ್ದು-ಆಟರ್—ಧಾ. ಮನದೊಳಳ್ಕಾಟಮಿಲ್ಲದೆ ಅರಿನೃಪ ಕೋಟಿಯನಾಟರಲೆಂದು ಆಸ್ಫೋಟಿಸಿ (ಪಂ.ಭಾ. ೧೨-೧೮ ವ). ನಾಣಿಲಿ= ನಾಣ್+ಇಲ್ಲ=ನಾಣ್+ಇಲಿ—ಪರದಲ್ಲಿ 'ಇಲ್ಲ' ಎಂದಿದ್ದರೆ, ಕಡೆಯಕ್ಷರಕ್ಕೆ 'ಲಿ' ಆದೇಶವಾಗುತ್ತದೆ (ಶ.ಮ.ದ.ಸೂ. ೧೮೭)

೨೨. ಪಸುಮಗ-ಹಸುಮಗ, ಮುತ್ತಾಣ್ಮ [ಮುದು+ಅಣ್ಮ]= ಮುದುಕಜ್ಞಾನಿ, ಅಕ್ಕಟ ಮಾಣ್=ಅಯ್ಯೋ ತಡೆ. ಮುಂ ಬಿಟ್ಟು=ಎಳೆದು(?) ಮುಂದುವರಿದು, 'ಯಮಸ್ಯಾತಕರುಣಂ ನಾಸ್ತಿ'.

೨೩. ಶಿಱಿಕೆಂಜಿ=ಅಯ್ಯುಕ್ಕಳಿ, ಗರಗರ ತಿರುಗಿಸಿ ಕತ್ತರಿಸು. ಯಮ ಅದೆಂತಹ ನಿಷ್ಕರುಣಿಯೊ ! ಕುರಿಯೂ ತಮ್ಮಂತೆಯೇ ಎಂಬುದನ್ನು ಮರೆತು ಜನ ಕೊಲ್ಲುತ್ತಾರೆ ; ಯಮ ಜನರನ್ನು ಕೊಲ್ಲುತ್ತಾನೆ. 'ಪರಚಿಂತಾಕರ ವಿಹಿ ಎನಿಪ್ಪ ಸೂಕ್ತಿ ತಪ್ಪದಮೋಘು' [ಪರರಿಗೆ ದುಃಖವುಂಟುಮಾಡುವವನನ್ನು ವಿಧಿ ತನ್ನ ಬಳಿಗೆ ಕರೆಯುವುದು ಸಹಜವೇ']-ಜನ್ನ.

೨೪. ಪಟಹ-ಭೇರಿ, ಚಿತಾಗ್ನಿ ಧೂಮ=ಹೆಣವನ್ನು ಸುಡುವ ಬೆಂಕಿಯ ಹೊಗೆ, ರುತಿ=ಧ್ವನಿ, ಯಮರಾಜನ ವಿಲಕ್ಷಣವಾದ ರಾಜ್ಯ ಚಿಹ್ನೆ ಗಳಂತೆ ಇವು ! ಮೃತಪಟಹವೇ ಜಯಪಟಹ, ಚಿತಾಗ್ನಿ ಧೂಮವೇ ಜಯ ಧ್ವಜ, ಜನಕರುಣಾರುತಿಯೇ ಜಯ ಮಂಗಳರುತಿ.

೨೫. ಬಹುಭಕ್ಷಿ=ಏನೆಲ್ಲವನ್ನೂ ಕಬಳಿಸುವವ-ಎಷ್ಟು ತಿಂದರೂ ಅವನ ಹಸಿವು ತೀರುವುದಿಲ್ಲ. ತ್ರಿಲೋಕ ಪಂಕೇಜ ಸಮುತ್ಥ ಜೀವಮಕರಂದ ಮದಾಳಿ =ತ್ರಿಲೋಕವೆಂಬ ತಾವರೆಯಲ್ಲಿರುವ ಜೀವರಸವನ್ನು ಹೀರಿ ಮದಿಸಿದ ದುಂಬಿ. 'ಇಲ್ಲಿ ಅಪೂರ್ವ ರೂಪಕವೊಂದು ಮೂಡಿದೆ........ಇಲ್ಲಿ ತ್ರಿಲೋಕವನ್ನೇ ಕಮಲವೆಂದೂ ಜೀವವನ್ನು ಮಕರಂದವೆಂದೂ ಯಮನನ್ನು ದುಂಬಿ ಎಂದೂ

ಕಲ್ಪಿಸಿಕೊಂಡಿರುವುದು ನಷ್ಟವಾಗಿದೆ. ಕಾಲನೂ ಕಪ್ಪು; ದುಂಬಿಯೂ ಕಪ್ಪು; ದುಂಬಿ ಹೂವಿನ ಮಕರಂದವನ್ನು ಹೀರುವಂತೆ ಆವನು ಜೀವವನ್ನು ಹೀರಿ ಹಾಕುತ್ತಾನೆ.' ಪರಿಸ್ಫುರತ್ತೇಜನ್=ಉಗ್ರತೇಜಸ್ಸುಳ್ಳವ, ಅನಂಗಜಾಂತಕನ್=ಮನ್ಮಥನಿಗೆ ಯಮನಾಗಿರುವವನು. ಅಮೋಹನ್=ನಿರ್ಮೋಹಿ, ಅಂತಕಾಂತಕ—ಯಮನಿಗೂ ಯಮ—ಜಿನ, ಮೃತ್ಯುರಾಜನನ್ನು ಜಿನರಾಜನಲ್ಲದೆ ಉಳಿದವರು ಗೆಲ್ಲಲಾಗುತ್ತದೆಯೆ ?

ವ : ತೊಡರ್ಚು=ಒಳಹೋಗುವಂತೆ ಮಾಡು. ಮೂಲದಲ್ಲಿ ಸಗರನೇ ಮಾಡುವ ಉಪದೇಶವನ್ನು ರನ್ನ ಬುದ್ಧಿಸಾಗರ ಮಂತ್ರಿಯಿಂದ ಮಾಡಿಸಿರುವುದು ತುಂಬ ಯೋಗ್ಯವಾಗಿದೆ, ಆದರೆ, ಅದೇ ಮುಂದೆ ಕಾಣುವ ಮತ್ತೊಂದು ತೊಡಕಿಗೂ ಎಡೆಕೊಟ್ಟಿದೆ.

೨೬. ಈ ನಿನ್ನ ಪೇಟ್ದ—ನೀನು ಹೇಳಿದ—ವಿಭಕ್ತಿ ಪಲ್ಲಟ. ಈ ಉಪದೇಶ ನನಗೆಯೊ, ನಿನಗೂ ಉಂಟೊ ಎಂದು ಕೇಳಿದ್ದಕ್ಕೆ ರಾಜನಾದ ತನಗೂ ಇದು ಮೊದಲೇ ಉಂಟು ಎನ್ನುತ್ತಾನೆ. 'ಈ ನಿನ್ನ ಪೇಟ್ದಧರ್ಮಂ' ಎಂಬ ಮಾತಿಗೂ 'ಇವರನಿವರ ನುಡಿಯೊಳ್ ತೊಡರ್ಚುವೆಂ' ಎಂಬ ಮಾತಿಗೂ ಬಂದ ಅಂತರವೇ ಒಂದು ತೊಡಕು. ಈ ಕಾರಣದಿಂದ ಬುದ್ಧಿಸಾಗರನಿಂದ ಉಪದೇಶ ಮಾಡಿಸಿದ್ದು ಸರಿಯಲ್ಲವೆಂಬ ಅಭಿಪ್ರಾಯವಿದೆ. ಧರ್ಮಸಂಕಟಕ್ಕೆ ಸಿಲುಕಿ ಮೌನವಾಗಿದ್ದ ಅರಸನ ಮಾನಸಿಕ ಸ್ಥಿತಿಯನ್ನರಿತ ಬುದ್ಧಿಸಾಗರನು ಅರಸನ ರಕ್ಷಣೆಗೆ ಬಂದಂತೆ ಕಥಾ ಸಂಯೋಜನೆ ಮಾಡಿರುವುದು ಸಮಂಜಸವಾಗಿದೆ ಎಂಬ ಅಭಿಪ್ರಾಯವೂ ಇದೆ.

ವ : ಸಗರನು ತನ್ನ ಮಂತ್ರಿಯು ಮಾಡಿದ ಉಪದೇಶಕ್ಕೆ ತಾನೂ ಬದ್ಧನೆಂದಾಗ- ದೃಷ್ಟಿವಿಷಾಹಿ=ದೃಷ್ಟಿಯಲ್ಲಿಯೇ ವಿಷವುಳ್ಳ ಸರ್ಪ. ಈಡಾಡಿ =ಹೊರಳಾಡಿ, ಅಶ್ರುಜಲ ವಿಲುಳಿತ ಲೋಚನಂ=ಕಣ್ಣೀರು ಹರಿಯುತ್ತಿರುವ ಕಣ್ಣುಳ್ಳವನು, ಅಪಗತ ಉತ್ತರೀಯನುಂ=ಹೊರಟುಹೋಗಿರುವ—ಬಿದ್ದು ಹೋಗಿರುವ—ಹೊದಿಕೆಯುಳ್ಳವನೂ, ಮನ್ಯು ಉದ್ಗತಕಂಠನುಂ=ದುಃಖದಿಂದ ಉಬ್ಬಿದ ಕತ್ತುಳ್ಳವನೂ, ಅತಿ...ಮುಖನುಂ—ಗಟ್ಟಿಯಾದ ಅಳುವಿನ ಮಾತುಗಳಿಂದ ಕೂಡಿದ ಬಾಯುಳ್ಳವನೂ, ಅಸಹ್ಯ...ದೂನಸನುಂ—ಸಹಿಸಲಾರದಷ್ಟು ದುಃಖದ ಬೆಂಕಿಯ ಉರಿಸಮೂಹದಿಂದ ಬೆಂದು ಹೋಗುತ್ತಿರುವ

ಮನಸ್ಸುಳ್ಳವನೂ, ಭಗ್ನ ಮನೋರಥನುಂ--ಒಡೆದುಹೋದ ಇಷ್ಟಾರ್ಥ ವುಳ್ಳವನೂ, ಸಗರ ಮುನ್ನಿನಂತಲ್ಲ; ತನ್ನನ್ನು ಬಂಧಿಸಿದ್ದ ಮೋಹಪಾಶ ದಿಂದ ಬಿಡಿಸಿಕೊಂಡು ವೈರಾಗ್ಯಪರನಾಗಿದ್ದಾನೆ; ವಿಚಲಿತನಾಗದೆ ಉತ್ತರಿ ಸಿದ್ದಾನೆ. ಆದರೂ ಸಹಜತೆಗೆ ಕಿಂಚಿತ್ತಾದರೂ ದೂರವೆನಿಸದೆ ಉತ್ತರ ಪುರಾಣ ದಲ್ಲಿ ಇದನ್ನು ಕೇಳಿದ ಸಗರನು ತಾನೇ ಉಪದೇಶಿಸಿದ್ದೂ ಮೂರ್ಛೆಗೊಳ್ಳು ತ್ತಾನೆ; "ಇಲ್ಲಿ ಕವಿ ಕೊಟ್ಟಿರುವ ಹಿನ್ನೆಲೆಯಲ್ಲಿ ಮೂರ್ಛೆಗೆ ಅವಕಾಶವಿಲ್ಲ ವಾದರೂ ಅವನು ಇದೇಂ ಚೋದ್ಯಂ ಎಂದಷ್ಟೇ ಪ್ರತಿಕ್ರಿಯೆ ವ್ಯಕ್ತಪಡಿಸುವುದು ಪೂರ್ತಿ ಸಂಭಾವ್ಯವಾಗಿ ತೋರುವುದಿಲ್ಲ.

೨೭. ಬೆಸದಪ್ಪ=ಮರಣಹೊಂದು, ದೇವರ ಬೆಸನೆ ಬೆಸನೆಂದು ಪೂಣ್ದು=ತಾವು ಕೊಟ್ಟ ಅಪ್ಪಣೆಯೇ ಅಪ್ಪಣೆ ಎಂದು ಪ್ರತಿಜ್ಞೆ ಮಾಡಿ, ಸಮನಿಸು=ಪ್ರಾಪ್ತವಾಗು. ಆನಿತೊಂದು ಸೈಪು=ತಮ್ಮ ಅಪ್ಪಣೆಯನ್ನು ಹಿಡಿದು ಪಾಲಿಸುತ್ತಿದ್ದಾಗಲೇ ಸಾವಪುಣ್ಯ. ಎಲ್ಲ ಒಡಹುಟ್ಟಿದವರ ಸಾವನ್ನು ಕಾಣುವಂತಾದ ಪಾಪ!

೨೮. ಅನಭ್ರವಜ್ರಾಘಾತಮಾದಂತೆ=ಮೋಡವಿಲ್ಲದ ಆಗಸದಲ್ಲಿ ಬರ ಸಿಡಿಲು ಹೊಡೆದಂತೆ. ಮೋಹಿಸೆ=ದಿಗ್ಭ್ರಾಂತರಾಗಲು, ಅಂತಃಪುರದಲ್ಲಿ ಹಾಹಾಕ್ರಂದನ ಉಂಟಾಗುತ್ತದೆ.

೨೯. ಅವಿರಳಗಳದಶ್ರುಜಲಪ್ರವಾಹಂ=ಒಂದೇ ಸಮನೆ ಸುರಿಯು ತ್ತಿರುವ ಕಣ್ಣೀರ ಪ್ರವಾಹವು, ಉದ್ರಿಪ್ತ=ಹೆಚ್ಚಾದ, ವಿವಸಂ=ವಿವಶರಾಗಿ ಮೂರ್ಛಿತರಾಗಿ, ನೃಪನಡಿಮೊದಲೊಳ್ (?) ರಾಜನ ಪಾದ ಮೂಲದಲ್ಲಿ —ಅಚ್ಚಗನ್ನಡ ಪ್ರಯೋಗ.

೩೦. ನಿನಗೆ ಚತುರ್ದಶ ರತ್ನಗಳೂ ಆಜ್ಞಾಧೀನ, ಅಮರರೆಲ್ಲರೂ ಏನಪ್ಪಣೆ ಎನ್ನುತ್ತಿದ್ದಾರೆ. ಇಂತಹ ನೀನು ಯಮನೊಡನೆ ಹೋರಾಡಿ ಮಕ್ಕಳನ್ನು ಬದುಕಿಸಿಕೊಳ್ಳಬೇಕು—ಪುತ್ರಶೋಕಾಕುಲಿತರಾದ ತಾಯಂದಿರ ಮೊರೆ ಇದು. ಬೆಸದಪ್ಪಿದ=ಕಾರ್ಯಕೆಟ್ಟುಹೋದ=ಸತ್ತ.

೩೧. ಷಟ್ಖಂಡವನ್ನೇ ನಿನ್ನಾಜ್ಞೆಗೆ ಒಳಪಡಿಸಿ ಕಲಿ, ಬಲ್ಲಾಳ್ ಎನಿಸಿದ ನೀನು ನಿನ್ನ ಮಕ್ಕಳನ್ನೇಕೆ ಕಾಪಾಡದಿದ್ದೀಯೆ? ಪದವಿ, ಕಲಿತನಗಳ ನಿಷ್ಪ್ರ ಯೋಜಕತೆ! ಬಾಟ್=ಕತ್ತಿ

೩೨. ನಿನ್ನ ಮಕ್ಕಳನ್ನು ಯಮನು ನಿರ್ಲಕ್ಷ್ಯದಿಂದ ಉಯ್ಯುವಾಗ ನಿನ್ನ ರತ್ನಗಳು ಎಲ್ಲಿ ಹೋಗಿದ್ದುವೊ ? ಉಱದೆ=ಲಕ್ಷಿಸದೆ.

೩೩. ಎಮ್ಮ ಪುತ್ರಶೋಕ ಅನಲನಿಂ ಎಮ್ಮಯ ಶರೀರವೋ ಉರಿದು ಆಱಿದಪ್ಪುದು. ಇನ್ನು ಬೇರೆ ಬೆಂಕಿ ಎಂಬುದೊಂದು ಉಂಟೇ ? ಏವುದೋ =ಯಾವುದೋ, ದಗ್ಧವಾರಿ ಎಂಬುದೂ ಉಂಟೆ—ಸುಟ್ಟುಹೋದ ನೀರು ಎಂಬುದೂ ಲೋಕದಲ್ಲುಂಟೆ ? ಪುತ್ರ ಶೋಕಂ ನಿರಂತರಂ–ಇದು ದುಸ್ಸಹ ವಾದುದು.

೩೪. ತಮಗೆ ಬದುಕು ಬೇಡವಾಗಿರುವುದನ್ನೂ, ತಾವಿನ್ನು ಬದುಕ ಬಾರದೆಂಬುದನ್ನೂ ತೋಡಿಕೊಳ್ಳುತ್ತಿದ್ದಾರೆ. ಕತ್ತಿಗೆ=ಕೈಗತ್ತಿ. ಏಂ ಪಡೆ ಮಾತೊ=ಏನು ವ್ಯರ್ಥವಾದ ಮಾತೊ ? ವಿಚಾರವೋ ? ಇನ್ನು ವಿಚಾರ ಮಾಡುವುದಾದರೂ ಏತಕ್ಕೆ ? ಎಂದು ಬಗೆಬಗೆಯಾಗಿ ಅಂಗಲಾಚುತ್ತಾರೆ. ಇಂತಹ ಹೊತ್ತಿನಲ್ಲಿ ಬುದ್ಧಿ ಹಿಂದೆ ಬಿದ್ದು, ಭಾವದ ಕೈ ಮೇಲಾಗುತ್ತದೆ." 'ಬುದ್ಧಿ ಬೇರೆ ಹೃದಯ ಬೇರೆ.' ಎಂಬುದು ಮರೆಯಾಗುತ್ತದೆ.

೩೫. ಪತಿವಿರಹ ತಾಪದಿಂದ ವೈರಾಗ್ಯಗೊಂಡು ದೇವಾಲಯಗಳನ್ನು ಹೊಗುತ್ತಿರುವ, ಬೆಂಕಿಗೆ ಬೀಳಲಿರುವ ಸೊಸೆಯರನ್ನಾದರೂ ನೋಡಿ ಕರುಣೆ ಬಾರದೇ ?

೩೬. ಈಗ ನಮಗುಳಿದಿರುವುದು ಎರಡೇ ದಾರಿ–ಮಕ್ಕಳನ್ನು ಹಿಂದಕ್ಕೆ ಪಡೆಯಬೇಕು, ಇಲ್ಲವೆ ತಪಸ್ಸಿಗೆ ಹೋಗಬೇಕು. ಮಕ್ಕಳನ್ನು ಹಿಂದಕ್ಕೆ ಪಡೆಯುವುದು ಸಾಧ್ಯವಲ್ಲ. ಇನ್ನು ಮಕ್ಕಳು ಸತ್ತನಂತರ ನಮ್ಮ ಬಾಳೊಂದು ಬಾಳೆ ? ತಡೆವುದೊ (?)=ಸುಮ್ಮನಿರುವುದೆ–ತಡ ಮಾಡುವುದೆ ? ಪಿಂಬಡು= "Immediately after". ಮಕ್ಕಳ ಪಿಂಬಡಿನೊಳ್=ಮಕ್ಕಳು ಸತ್ತನಂತರ ಮಾನಸವಾಳೆ ?=(ಲೋಕರೂಢಿಯ) ಮನುಷ್ಯ ಜೀವನವನ್ನು ನಾವು ಇನ್ನು 'ಬಾಳಬಹುದೆ ? ಮಾನಸ–ಸಂ : ಮಾನುಷ' ಹೋಲಿಸಿ : ಎನಗಿರ್ವರು ಮೆರಡುಂ ತೋ ।; ಳೆನಗಿರ್ವರುಮೆರಡು ಕಣ್ಣ [ಳ]ನ್ನರೆ ಯುವರಾ । ಜನು ಮಂಗರಾಜನುಂ ಪೊರೆನೆ ಸಂಜಯ ಮತ್ತಮೆನಗೆ ಮಾನಸವಾಳೇ । ಗ.ಯು.ಸಂ ೩-೫೦. 'ಪಡಿವುದೋ' ಅಲ್ಲ, ತಡೆವುದೊ ಎಂದರೆ ಅರ್ಥವಾಗುತ್ತದೆ.

೩೭. ಈವರೆಗೆ ಕರುಣಾಜನಕವಾಗಿ ಹರಿದು ಬಂದ ಕಾವ್ಯದ ಕಾವು

ಇಳಿದು, ಕಟ್ಟುವ ಕೆಲಸಕ್ಕೆ ತೊಡಗುತ್ತಿದೆ! ಇದುವರೆಗಿನದು ತಾಯಂದಿರ ಶೋಕಾಕ್ರಂದನವಾದರೆ ಇದು–ಬಹುಶಃ ಇನ್ನೂ ಮಕ್ಕಳನ್ನೂ ಕಂಡಿರದ–ಸೊಸೆಯರ ಗೋಳು, ಎಂತಹ ಶೋಕರಸದ ಹೊನಲು ಹರಿಯಬಹುದಿತ್ತೋ! ಕಾಡುಕಿಚ್ಚಿನ ಭಯಂಕರವಾದ ಉರಿಯ ಹೆಚ್ಚಳವು ಹೃದಯದಲ್ಲಿರಲಾಗಿ, ವಿಶೇಷ ವಾಗಿ ಹೊರಹೊಮ್ಮುತ್ತಿರುವ ದುಃಖದ ಬೆಂಕಿಯನ್ನು ಆರಿಸುವುದಕ್ಕಾಗಿ ಬರುತ್ತಿರುವ ರೀತಿಯಿಂದ ಕಣ್ಣುಗಳಿಂದ ಉಕ್ಕಿ ಹರಿಯುತ್ತಿರುವ ಕಾಡಿಗೆ ಮಿಶ್ರ ವಾದ ಕಣ್ಣೀರಿನ ಧಾರೆಯ ತೊಟ್ಟುಗಳು ನೀರವಾಗಿ, ಕುತ್ತಿಗೆಯಿಂದ ಬಿಡಲ್ಪಟ್ಟು ಜಾರುತ್ತಿರುವ ನೀಲಮಣಿಯ ಹಾರದ ಹಾಗೆ ಆಯಿತು. (?) ಎಲ್ಲರ ಕಣ್ಣು ಗಳಿಂದಲೂ ಧಾರಾಕಾರವಾಗಿ ಹರಿಯುತ್ತಿರುವ ಕಣ್ಣೀರ ಹನಿಗಳು ಅವರ ಕಂಠ ಮಾಲಿಕೆಯಿಂದ ಉದುರುತ್ತಿರುವ ಕರಿಮಣಿಗಳಂತಾದುವು! ಉತ್ಪ್ರೇಕ್ಷಾಲಂಕಾರ, ಕರುಣರಸಕ್ಕೆ ಉಪಷ್ಟಂಭಕವಾಗಿದೆ.

೩೮. ಕೈಮುಗಿದು ತಲೆಬಾಗಿದ್ದ ಅರಸರು ಶೋಕಾವಿಷ್ಟರಾಗಿ ತಲೆಯೆತ್ತದಿದ್ದರಂತೆ! ಆಕುಲಿತ=ಅಸ್ತವ್ಯಸ್ತಗೊಂಡ.

೩೯. ಇಷ್ಟೊಂದು ದುಃಖಾರ್ತರ ಮಧ್ಯದಲ್ಲಿದ್ದೂ ತಾನೂ ದುಃಖಾರ್ತನಾಗಿಯೂ ವಿಚಲಿತನಾಗದೆ ಸ್ಥಿತಪ್ರಜ್ಞ (?) ನಂತಾಗಿದ್ದಾನೆ. ಗುಣ್ಪು=ಆಳ, 'ಅಚಲಿತ ಸ್ವರೂಪದಿನಿರ್ದಂ ಕನಕನಗಂಬೋಲ್' ಎಂಬಲ್ಲಿ ಉಪಮಾಲಂಕಾರವೂ 'ಸಗರನ ಮನಮಂ ಸಾಗರದ ಗುಣ್ಪುಮನಱಿವರು ಮೊಳರೆ' ಎಂಬಲ್ಲಿ ಸಮುಯೋಗಾಲಂಕಾರವೂ ಇವೆ.

೪೦. ಚಳಿಯಿಕುಂ=ಚಲಿಸುವುದು, ಬೀಳುವುದು, ಅನಿಲನ ಆಹತಿ–ಗಾಳಿಯ ಹೊಡೆತ, ಅನೋಕಹ+ಅನೀಕ=ಮರಗಳ ಗುಂಪು. ಅನಲಾಹತಿ ಯಿಂದ ವೃಕ್ಷಸಮೂಹವು ಚಲಿಸುತ್ತದೆ; ಅದ್ರಿಯು ಚಲಿಸುವುದಿಲ್ಲ–ಇಲ್ಲಿ ವ್ಯತಿ ರೇಕಾಲಂಕಾರವಿದೆ. ಉದಾತ್ತ ಚಿತ್ತಂ ಜನಪತಿ–ಇಲ್ಲಿ ಪರಿಕರಾಲಂಕಾರವಿದೆ. ಜನಪತಿಯನ್ನು ಧೈರ್ಯಾಂಬುರಾಶಿ ಎಂದು ರೂಪಣ ಮಾಡಲಾಗಿದೆ–ರೂಪಕಾ ಲಂಕಾರ; ಚಳಿಯಿಕುಂ ಎಂಬ ಸಮಾನಾರ್ಥವಿರುವುದರಿಂದ ಇಲ್ಲಿ ಪ್ರತಿವಸ್ತೂಪ ಮಾಲಂಕಾರವಿದೆ. ಇಲ್ಲಿ ವ್ಯತಿರೇಕ, ಪರಿಕರ, ರೂಪಕಾಲಂಕಾರಗಳು, ಪ್ರತಿ ವಸ್ತೂಪಮಾಲಂಕಾರಕ್ಕೆ ಅಂಗಗಳಾಗಿದ್ದು ಸಂಕರಾಲಂಕಾರವೆನಿಸುತ್ತದೆ.

೪೧. ಅವಿವೇಕಿಗಳ ಮನವನ್ನು ಅಜ್ಞಾನವೆಂಬ ಕತ್ತಲು ದಟ್ಟವಾಗಿ

ಕವಿಯುತ್ತದೆ; ವಿವಿಕ್ತ ವಿಶದಮನನಾದ ಅರಸನ ಮಾನವನ್ನು ಪೊರ್ದಲ್ (ಮುಸುಕಲು) ಆಜಿದೆ (ಸಮರ್ಥವಾದೀತೆ ?) ವಿವಿಕ್ತ—ಏಕಾಂತವಾದ.

೪೨. ಒಡ್ಡು=ಅಡ್ಡಗಟ್ಟು- ಮರೆವಾಡು. ಗಗನಾಲಂಕಾರ = ಉಜ್ವಲತೇಜೋಭಾರ=ಅಹಿಮಕರ=ಸೂರ್ಯ. ಸಗರನನ್ನು ಶೋಕಾಂಧಕಾರವು ಆವರಿಸಲಾರದೆಂಬ ವೃತ್ತಾಂತವನ್ನು ತಿಳಿಯಪಡಿಸುವ ಈ ಪದ್ಯದಲ್ಲಿ ಅಪ್ರಸ್ತುತಪ್ರಶಂಸಾಲಂಕಾರವಿದೆ.

ವ: ಧೈರ್ಯಾವಷ್ಟಂಭ ಗಂಭೀರನಾಗಿ=ಧೈರ್ಯವನ್ನು ಆಶ್ರಯಿಸಿ ಗಾಂಭೀರ್ಯವುಳ್ಳವನಾಗಿ.

೪೩. ಮಕ್ಕಳ ಸಾವು, ಅರಸಿಯರ ಸೊಸೆಯರ ಗೋಳು ಅರಸನ ಚಿತ್ತ ಸ್ಥೈರ್ಯವನ್ನೂ ಕಲಕಿದೆ; ಚಿಂತೆಗೀಡುಮಾಡಿದೆ. ಅಯ್ಯೋ! ಬುದ್ಧಿಕೆಟ್ಟ ಬಡವುಗಳಾದ ರಾಜಸ್ತ್ರೀಯರೂ ಈ ಬಡ ಬ್ರಾಹ್ಮಣನ ನಂತರೇ ಆಗುವುದಿಲ್ಲವೇ ? ಅಡಸಿ—ಆಕ್ರಮಿಸಿ, ಮುತ್ತಿ.

ವ: ಸಮಾನವಾದ ಶೀಲ ಚಿಂತೆಗಳನ್ನುಳ್ಳವರಲ್ಲಿ ಸ್ನೇಹವು ಸಹಜವಾದುದಷ್ಟೇ ? ದೀನ=ನಮ್ರ, ಬಲಿದುನಿಲೆ=ಗಟ್ಟಿಮಾಡಿಕೊಂಡು ನಿಲ್ಲಲು.

೪೪. ಅರಸನ ದುಃಖಭಾರವನ್ನು ಕಾಣಲಾರದ ಜನಾಪವಾದ! ದೊರೆ ನಿಷ್ಕರುಣೆಯಂತೆ! ಮರವಮಾನಿಸನೋ—ಮರದ ಮನುಷ್ಯನೋ (ಗೊಂಬೆಯೊ) ಮಕಾರಕ್ಕೆ ವಕಾರಾದೇಶ. ಮರ ಮಾನಸನೊ-? ಕಲ್ಲುಂ ಮರಂ ಇರ್ಪಂತೆ ಇರ್ದಂ ಎಂತು ನಿಷ್ಕರುಣನೊ ಪೇೞ್—?

ವ: ಬುದ್ಧಿ ಸಾಗರನ ಬುದ್ಧಿವಂತಿಕೆ—ಸಿತಸರ್ಷಪ=ಬಿಳಿ ಸಾಸಿವೆ. ಇಟಿಯೆ ಸುರಿವುದುಂ=ಮೇಲಿಂದ ಬೀಳುವಂತೆ ಸುರಿಯಲು, ತಪ್ತಾಯಃಕಟಾಹ ಪತಿತಲಾಜಃ ಪುಂಜದಂತೆ=ಕಾದ ಕಬ್ಬಿಣದ ಬಾಣಲೆಯಿಂದ ಬಿದ್ದ-ಹೊರ ಸಿಡಿದ—ಅರಳುಗಳಂತೆ, ಅ—ಸಹ್ಯ=ಸಹಿಸಲು ಅಸಾಧ್ಯ, ಮಱುಮಾತಂ ಕುಡಲು=ಮಱುಮಾತುಗುಡಲು—ಉತ್ತರಿಸಲು. ಕ್ರಿ.ಸ. 'ಮೌನಂ ಸರ್ವಾರ್ಥ ಸಾಧನಂ'—ಮೌನವೇ ಎಲ್ಲ ಇಷ್ಟಾರ್ಥಗಳಿಗೂ ಸಾಧನ.

ಕಡುಕೆಯ್=ತೀವ್ರತ್ವೇ (ಶ. ಮ. ದ.) ತೀವ್ರವಾಗು. ಪೊಣ್ಮು= ಹೊಮ್ಮು—ಹರಡು, ತಡಿಸಾರ್ (ತಡಿ+ಸಾರ್)=ದಡವನ್ನು ಸೇರು—ಕೊನೆಯನ್ನು ಮುಟ್ಟು; ಮುಗಿ. ಇದಕ್ಕೆ=ಇದು ಅಕ್ಕೆ. ಇದಕ್ಕೆ ಮಂಗಳ ಮಹಾಶ್ರೀ

=ಇದು ಮೋಕ್ಷ ಲಕ್ಷ್ಮಿಯಲ್ಲಿಗೊಯ್ಯುವಂತಹ ಮಂಗಳವಾಗಲಿ. ಊರ್ಜಿತ ಗುಣಂ=ಶ್ರೇಷ್ಠವಾದ ಗುಣವುಳ್ಳವನು, ತಳ್ವಿಲ್ಲದೆ=ತಡಮಾಡದೆ, ಕೂಡಲೆ, ಬಾಹ್ಯಲಕ್ಷ್ಮಿಯನ್ನು ತೊರೆದವನಾಗಿ ತಪೋಭಿಮುಖನಾಗಲು ಸಿದ್ಧನಾದನು.

೪೫. ರಾಣಿಯರು ಒಬ್ಬೊಬ್ಬರಿಗೆ ಒಬ್ಬೊಬ್ಬ ಮಗ ಸತ್ತ ದುಃಖ ವಾದರೆ, ರಾಜನಿಗೆ ಅಷ್ಟೂಮಂದಿ ಸತ್ತ ದುಃಖ. ಅವನು ಮಹಾಸತ್ವನೇ ಸರಿ. "ಸಗರನ ಮೇಲೆ ಸಾಸಿವೆ ಸುರಿದ ಪ್ರಸಂಗ ಉತ್ತರ ಪುರಾಣದಲ್ಲಿಲ್ಲ; ಇದು ರನ್ನನ ಸ್ವಂತ ಸೇರ್ಪಡೆ. ಸಗರನಲ್ಲಿ ವೈರಾಗ್ಯೋದಯವಾದರೂ ಹೃದಯಾಂತರಾಳ ದಲ್ಲಿ ಪುತ್ರಶೋಕ ಘೂರ್ಣಿಸುತ್ತಿದೆ; ಅದನ್ನವನು ಮೆಟ್ಟಿನಿಲ್ಲುತ್ತಾನೆ. ಅವನ ಮನಸ್ಸಿನಲ್ಲಿ ಇದೊಂದು ಸಂಧಿ ಸ್ಥಿತಿ. ಇದನ್ನು ಕವಿ ಒಂದು ದೈಹಿಕ ಸಂಗತಿಯ ಮೂಲಕ ಪರೋಕ್ಷವಾಗಿ ತಿಳಿಸಿದ್ದಾನೆಯೇ ಹೊರತು ನೇರವಾಗಿ ಆವಿಷ್ಕಾರ ಗೊಳಿಸಿಲ್ಲ. ಸಗರ ಮುಂದೆ 'ಮೌನಂ ಸರ್ವಾರ್ಥ ಸಾಧನಂ' ಎಂಬ ಸೂತ್ರ ವನ್ನವಲಂಬಿಸುತ್ತಾನೆ. ಈ ಮೌನ ಒಂದು ರೀತಿಯಲ್ಲಿ ಚೆನ್ನಾಗಿ ಕಂಡರೂ, ಇನ್ನೊಂದು ರೀತಿಯಲ್ಲಿ ಕವಿಯ ಪರಿಮಿತಿಯನ್ನೇ ಸೂಚಿಸುವಂತಿದೆ. ರನ್ನ ಬಾಹ್ಯ ಘಟನೆಗಳನ್ನು ಸೊಗಸಾಗಿ ವರ್ಣಿಸಬಲ್ಲನೇ ಹೊರತು ಅಂತರಂಗದ ತುಮುಲ ತಳಮಳಗಳನ್ನು ಅಷ್ಟೇ ಯಶಸ್ವಿಯಾಗಿ ಚಿತ್ರಿಸಲಾರ ಎಂಬುದು ಮೂಲಭೂತ ಸತ್ಯ. ಹೀಗಾಗಿ ಈ ಸಗರ ವೈರಾಗ್ಯ ಪ್ರಕರಣ ಸಂಪೂರ್ಣ ತೃಪ್ತಿ ನೀಡದಿದ್ದರೂ 'ಉತ್ತರ ಪುರಾಣದ' ತತ್ಸಂಬಂಧವಾದ ಭಾಗದೊಡನೆ ಹೋಲಿಸಿ ದಾಗ ಉಜ್ವಲವಾಗಿ, ನಾಟಕೀಯವಾಗಿ ಬಂದಿದೆಯೆಂಬುದು ದಿಟ. ಅದು ನಾಟ ಕೀಯವಾಗಿರುವುದರಲ್ಲಿ ಅಚ್ಚರಿಯಿಲ್ಲ. ಮಣಿಕೇತು ಮಾಡಿದ್ದು ನಾಟಕವೆ ತಾನೆ!" ಇದು ಒಂದು ಅಭಿಪ್ರಾಯ. ಆದರೆ, ಇಲ್ಲೂ ಕವಿ ಮೌನವನ್ನಾ ಶ್ರಯಿಸಿರುವುದರಲ್ಲೇ ಅವನ ಮಹತ್ತು ಅಡಗಿದೆ; ಧ್ವನಿಶಕ್ತಿ ತುಂಬಿದೆ ಎಂಬ ಅಭಿಪ್ರಾಯವೂ ಇದೆ.

೪೬. ಶ್ರೀಮಹಿತ=ಲಕ್ಷ್ಮಿಯ ಮಹಿಮೆಯಿಂದ ಕೂಡಿದ, ವ್ಯಾಮೋಹ =ಅತಿಶಯವಾದ ಮೋಹ. ಮಾಣ್ಗೆ=ನಿಲ್ಲಲಿ, ತೊಲಗಲಿ, ಭವಭಯ ಹರನೂ ಸಕಳಾಮರಜನವಿನುತ ಚರಿತನೂ ಅಪಗತ ದುರಿತನೂ ಆದ ಅಜಿತ ಸ್ವಾಮಿ ಎಮಗೆ ಶರಣಂ ಅಕ್ಕೆ—ರಕ್ಷಕನಾಗಲಿ. ಇದೀಗ ತಾನೇ ಮೂಡಿದ

ವೈರಾಗ್ಯ ಭಾವನೆ ಕ್ಷಣಿಕವಾಗದಿರಲೆಂಬ ಆಶಯದಿಂದ ಅಜಿತನಾಥನನ್ನು ಸ್ಮರಿಸುತ್ತಿದ್ದಾನೆ.

ವ : ಮಹಾರಥ—ಒಬ್ಬನೇ ತನ್ನನ್ನೂ ತನ್ನ ಸಾರಥಿಯನ್ನೂ ತನ್ನ ಕುದುರೆಗಳನ್ನೂ ಕಾಪಾಡಿಕೊಂಡು, ಹತ್ತುಸಾವಿರ ಬಿಲ್ಲುಗಾರರನ್ನು ಎದುರಿಸ ಬಲ್ಲ ಯೋಧ (?) ಒಡಹುಟ್ಟಿದವರನ್ನೆಲ್ಲ ಕಳೆದುಕೊಂಡು ದುಃಖವನ್ನು ತಾಳಲಾರದೆ ಬಂದವನಿಗೆ ಈಗ ಸಾಮ್ರಾಜ್ಯ ಪದವಿ !

೪೭. ಜಲಧಿ ತರಂಗತಾಟಿತಮಹೀ=ಸಮುದ್ರದ ಅಲೆಗಳು ಅಪ್ಪಳಿಸುತ್ತಿರುವ ಎಂದರೆ ಸಮುದ್ರವೇ ಎಲ್ಲೆ ಕಟ್ಟಾಗಿರುವ ಭೂಮಂಡಲ. ಎನ್ನ ಬಗೆ ಕೂಡಿದುದು=ನನ್ನ ಬಹುಕಾಲದ ಬಯಕೆ ಕೈಗೂಡಿತು. ಅಸ್ತಭವಾಬ್ಧಿ= ಸಂಸಾರ ಸಾಗರದ ಮೋಹ ಕಡೆಯಾಗುವುದು. ಮಿಳಿರ್=ಅಲುಗಾಡು. ಖಗಮಾರ್ಗರಂಗ—ಆಕಾಶ. ತನ್ನ ಪ್ರಯತ್ನ ಫಲಿಸಿ, ಕೆಳೆಯ ಉದ್ಧಾರದ ಹಾದಿ ಹಿಡಿಯುತ್ತಿರುವುದಕ್ಕೆ ಮಣಿಕೇತುವಿಗೆ ಅಮಿತಾನಂದವಾಗಿದೆ.

ವ : ಸಂಯಮ=ಇಂದ್ರಿಯ ನಿಗ್ರಹ—ಹತೋಟಿ, ಕಾಳಗಕ್ಕಮೊಳಂ ಪುಯ್ಯಲ್ಗಮೊಳಂ. (ಉಳ್—ಧಾ) ಇದು ರನ್ನನ ಕಾಲದ ಗಾದೆಯಾಗಿರಬಹುದು; 'ತೊಟ್ಟಿಲನ್ನು ತೂಗುವುದು. ಮಗುವನ್ನು ಚಿವುಟುವುದು' ಎಂಬ ಗಾದೆ ಇದಕ್ಕೆ ಸಂವಾದಿಯಾಗಿರುವಂತಿದೆ; ಅದನ್ನಿಲ್ಲಿ ಸಮಯವರಿತು ಕವಿ ಬಳಸಿಕೊಂಡಿದ್ದಾನೆ. ಪುಯ್ಯಲ್ಗಂ—ಹುಯ್ಯಾಲಿಡುವುದಕ್ಕೂ, ಮಱಿದಿರ್ದ=ಎಚ್ಚರ ತಪ್ಪಿದ್ದ. ಚಕ್ರಧರ—ಚಕ್ರವನ್ನು ಧರಿಸಿದವನು ಸಗರ ಚಕ್ರವರ್ತಿ, ಸಂವೇಗ= ಗರ್ವ, ಸೊಕ್ಕು. ನಿರ್ವೇಗ=ವೈರಾಗ್ಯ. ದೃಢಧರ್ಮ ಕೇವಳಿ—ಇದು ಅಂಕಿತ ನಾಮ ; ಅನ್ವರ್ಥನಾಮವೂ ಹೌದು. ವ್ಯತಿಕರ=ಸಮಾಚಾರ. ಪಂಚಮುಷ್ಟಿಯಿಂ ಬಂದಿಸಿ=ಪಂಚಾಂಗ ಪ್ರಣಾಮ ಮಾಡಿ (?)

ಆಚಾರ್ಯ=ಪಂಚ ಪರಮೇಷ್ಠಿಗಳಲ್ಲಿ ಮೂರನೆಯವರು. ಸ್ವರ್ಗ ಮೋಕ್ಷಗಳಿಗೆ ಸಾಧನವಾದಂಥ ವ್ರತಗಳ ಆಚರಣೆಯನ್ನು ಮಾಡುವವರು ; ಶಿಷ್ಯರಿಗೆ ಧರ್ಮಬೋಧೆ ಮಾಡುತ್ತಾ ಅವರ ಆಚಾರಗಳನ್ನು ತಿದ್ದಿ ದಾರಿ ತೋರುವವರು. ಇವರಿಗೆ ಮೂವತ್ತಾರು ಗುಣಗಳೆಂದು ಜೈನಧರ್ಮ ಗ್ರಂಥಗಳ ವ್ಯಾಖ್ಯೆ. ಆದರೆ ರನ್ನ ಹೇಳುವುದು ಈ ಎಂಟು ವಿಧ ಉತ್ಕೃಷ್ಟ ಗುಣಗಳು ಮಾತ್ರ—ಪರಿಣತ ವಯಸ್ಕ, ವಪುಷ್ಕಾಂತ, ಅನಾಮಯ ಶರೀರ, ಬಹುಶ್ರುತ, ಅತಿ ಪ್ರಗಲ್ಭ,

ಮೇಧಾವಿ, ನಿರುಪಕ್ರಿಯಾ ಪ್ರವೃತ್ತ, ಪವಿತ್ರ ಚಾರಿತ್ರ. ಶ್ರೋತೃ=ಧರ್ಮದ ಉಪದೇಶವನ್ನು ಕೇಳಲು ಅರ್ಹನಾದವನು. ಇವನಿಗೆ ಹತ್ತುಗುಣಗಳಿರಬೇಕೆಂದು ರನ್ನನ ಹೇಳಿಕೆ–ದಾಕ್ಷಿಣ್ಯವಂತ, ಏಕಾಗ್ರಮನಸ್ಕ, ಅನುಕೂಲಕ, ಅನಾಲಸ್ಯ, ಅನವ ಕಾರ್ಯ. ಲಬ್ಧಿಬುದ್ಧ ಸದೃಶ, ಕಲಹಂಸಮನ, ಅನುರಕ್ತ, ಮಧ್ಯಸ್ಥ [ಇನ್ನೊಂದು ಕೈ ಬಿಟ್ಟಿದೆ] ಜಿನಸೇನಾಚಾರ್ಯರು ಎಂಟು ಗುಣಗಳನ್ನು ಹೇಳುತ್ತಾರೆ—ಶುಶ್ರೂಷಾ (ಕೇಳಬೇಕೆಂಬ ಇಚ್ಛೆ) ಶ್ರವಣ, ಗ್ರಹಣ, ಧಾರಣ ಬಹುಕಾಲದವರೆಗೆ ಮರೆಯದಿರುವುದು) ಸ್ಮೃತಿ, ಊಹ, ಅಪೋಹ, ನಿರ್ಣೀತಿ (ನಿಶ್ಚಯ).

೪೮. ಸಂಸೃತಿ=ಸಂಸಾರ, ಬೇವಸ=ಚಿಂತೆ ತಿರಿದಪುವು=ಅಲೆದಾಡುವುವು. ಸಮ್ಯಕ್ತ್ವ ಶುದ್ಧನಾಗಿ ಜಿನಧರ್ಮವನ್ನು ನಂಬದಿರುವಾಗಲೇ ಈ ಸಂಸಾರದಲ್ಲಿ ಅಲೆದಾಟ.

೪೯. ಉಪಚಯ=ಕೂಡಿಸುವುದು–ಸಂಗ್ರಹ, ವಲಂ (ಅ)=ನಿಶ್ಚಯವಾಗಿ, ದಿಟವಾಗಿ, ಅಲ್ಲವೇ ? ಸಾರೆ(ಸಾರ್–ಧಾ)—ಹತ್ತಿರಕ್ಕೆ ಹೋಗಲು. ಪುಣ್ಯ ಪಾಪಕ್ಷಯದಿಂದ ನಡೆಯಲು ಸುಗತಿ ನಿಶ್ಚಯವೇ ಅಲ್ಲವೆ ?

೫೦. ಪರಿಣಾಮ ಶುದ್ಧಿಯೇ ಜಿನತತ್ತ್ವ, ಪರಲೋಕಹಿತಮಂ=ಪರಹಿತಮಂ, ಲೋಕಹಿತಮಂ(?) ಪರಲೋಕ ಹಿತಮಂ (?)

೫೧. ಮೊದಲಿಂ ತಗುಳ್ದು (ತಗುಳ್. ಧಾ)—ಮೊದಲಿನಿಂದ ಪ್ರಾರಂಭಿಸಿ, ವಿದಿತಂ ಮಾಡೆ=ಚೆನ್ನಾಗಿ ಅರಿಯುವಂತೆ ಮಾಡಲು.

೫೨. ನೆಗಟ್=ಉಂಟಾಗು. ಆಸನ್ನಭವ್ಯ=ಸ್ವಲ್ಪಕಾಲದಲ್ಲಿಯೇ ಉತ್ತಮ ಗತಿಯನ್ನು ಪಡೆಯಲು ಅರ್ಹತೆಯನ್ನು ಗಳಿಸಿದವನು. ಸಂಛನ್ನ=ಮುಚ್ಚಲ್ಪಟ್ಟ, ಪ್ರಾಜ್ಯ=ಅಪಾರವಾದ, ವಿಗತವ್ಯಾಮೋಹಭೇದಂ=ಇಹದ ವ್ಯಾಮೋಹವು ದೂರವಾದುದರಿಂದ ಉಂಟಾದ ಭೇದ ವಿಜ್ಞಾನ–ಶರೀರವೇ ಬೇರೆ, ಆತ್ಮವೇ ಬೇರೆ ಎಂಬ ತಿಳಿವಳಿಕೆ.

ವ : ಮೋಕ್ಷ ಪುರವನ್ನು ಕುರಿತ ಭವ್ಯ ಪ್ರಯಾಣಿಕರಿಗೆ ಈ ಸಮ್ಯಕ್ತ್ವ ಬುತ್ತಿಯಾಗಿದೆ ; ಅನಂತರದ ಶ್ರಾವಕ ವ್ರತಗಳೆಲ್ಲವೂ ಸ್ವರ್ಗಕ್ಕೆ ಸೋಪಾನಗಳು. ತನ್ನ ಗೆಯ್ದು—ವಿಭಕ್ತಿ ಪಲ್ಲಟ. ಷಟ್ಪ್ರಪಂಚ=ಮೋಸ. ಮಣಿಕೇತು ತಾನು ಮಾಡಿದ ಮೋಸ (?)ವನ್ನು ಪ್ರಕಟಿಸಿ, ವ್ಯಥೆಕಳೆದುಕೊಂಡು ತನ್ನ ನಿವಾಸಕ್ಕೆ

ಹೋದನು ಎಂದಿಷ್ಟೇ ಇಲ್ಲಿದೆ. ಮೂಲದಲ್ಲಾದರೋ ಮಿತ್ರ ಶ್ರೇಷ್ಠನಾದ ಮಣಿಕೇತು ದೇವನು ತನ್ನ ಮಾಯೆಯನ್ನು ಪ್ರಕಟಮಾಡಿ ನಿಜರೂಪವನ್ನು ತೋರಿಸಿ ಸಗರನೇ ಮೊದಲಾದ ಆ ಮುನಿಗಳನ್ನು ಹೊಂದಿ 'ಕ್ಷಮಿಸಬೇಕು' ಎಂದು ಹೇಳಿದನು. ಆಗ ಆ ಸಗರ ಮುನಿಯೇ ಮೊದಲಾದವರು 'ನಿನ್ನ ತಪ್ಪೇನು ? ನೀನು ನಮಗೆ ಪ್ರಿಯವೂ, ಹಿತವೂ ಆದ ಕಾರ್ಯವನ್ನು ಮಾಡಿದೆ,' ಎಂದು ಒಳ್ಳೆಯ ಮಾತಿನಿಂದ ಆ ದೇವನನ್ನು ಸಮಾಧಾನ ಪಡಿಸಿದರು ಎಂದಿದೆ.

ನಿಶ್ಚಲಂಗೆಯ್=ವ್ಯಥೆ ಕಳೆದುಕೊಳ್ಳು. ಚರಮದೇಹ=ಮೋಕ್ಷಕ್ಕೆ ಮುನ್ನ ಜೀವನು ಪಡೆದಿರುವ ಕಡೆಯ ದೇಹ. ಇಷ್ಟಂ ಧರ್ಮೇಣ ಯೋಜಯೇತ್=ಇಷ್ಟರಾದವರನ್ನು ಧರ್ಮದಲ್ಲಿ ತೊಡಗಿಸಬೇಕು. ಅಪವರ್ಗಮಾರ್ಗ=ಮೋಕ್ಷಮಾರ್ಗ. ಸಮ್ಮೇದಾಗ್ರದೊಳ್=ಸಮ್ಮೇದ ಪರ್ವತದ ಶಿಖರದಲ್ಲಿ [ಇಪ್ಪತ್ತುಮಂದಿ ತೀರ್ಥಂಕರರು ಮೋಕ್ಷ ಹೊಂದಿದುದು ಇಲ್ಲಿಯೇ ; ಇದು ಜೈನರ ಪುಣ್ಯಕ್ಷೇತ್ರಗಳಲ್ಲೊಂದು] ಕುಂಜರ=ಆನೆ. ಮುನಿಕುಂಜರ=ಮುನಿಗಳಲ್ಲಿ ಆನೆಯಂತಹವನು-ಮುನಿಶ್ರೇಷ್ಠ. ನಿಗಳ=ಸರಪಳಿ, ಬೆಂಕೊಂಡು=ಬೆನ್ನಂಕೊಂಡು=ಅಟ್ಟಿಸಿಕೊಂಡು ಹೋಗಿ, ಕ್ರಿ.ಸ. ವೀಥೀ>ವೀಧಿ>ಬೀದಿ. ಪರಮಗತಿ=ಮೋಕ್ಷ.

## ಉಪಸಂಹಾರಂ

### ಅ: ಕವಿ ಕಾವ್ಯ ಪ್ರಶಸ್ತಿ

೧. ಕವಿ ತನ್ನ ಕೃತಿಯನ್ನು 'ಪುರಾಣ ತಿಲಕಂ' ಎಂದಿರುವುದು ಅನ್ವರ್ಥವೆಂಬ ಸಮರ್ಥನೆ ಇಲ್ಲಿದೆ. ಈ ಪುರಾಣವನ್ನು ಕೇಳಿದರೆ ಮನದ ಸಂಶಯಗಳೆಲ್ಲ ತೊಳೆದು ಹೋಗಿ ಸಂದಿಗ್ಧತೆ ಉಳಿಯದು ; ಧರ್ಮಾನುರಾಗ ಉಂಟಾಗುವುದು.

೨. ಬೇರೆ ಜೈನ ಕಾವ್ಯಗಳಲ್ಲಿರುವ ಎಲ್ಲ ಆಗಮ ವಿಚಾರಗಳೂ ಇಲ್ಲಿವೆ ; ಇಲ್ಲಿರುವ ಕೆಲವನ್ನಾದರೂ ಬೇರೆಯವುಗಳಲ್ಲಿ ಕಾಣಲಾಗದು. ಅಷ್ಟೇ ಅಲ್ಲದೆ ಪಂಪ ಪೊನ್ನರ ಕಾವ್ಯಗಳಲ್ಲಿ ಪರಿಸ್ಫುಟವಾಗದಿರುವ ಅಂಶಗಳನ್ನೂ ತನ್ನ ಕಾವ್ಯದಲ್ಲಿ ವಿಶದ ಪಡಿಸಿರುವನಂತೆ ! [ಇದಲ್ಲವೆ ಕೆಚ್ಚು!] ಕಾರಣ, ತಾನು 'ಆಗಮವೇದಿಯಪ್ಪುದು'. ಆಗಮ ಭಾಷೆ=ಆಗಮ ಪರಿಭಾಷೆ, ನೆಱಿಯೆ=ಪರಿಪೂರ್ಣ

ವಾಗಿ, ಎಯ್ದೆ=ಚೆನ್ನಾಗಿ, ಬಲ್ಮೆ=ಸಾಮರ್ಥ್ಯ, ಕೆಚ್ಚು, ಕಣ್ಣಂ ತೆಱಿಯೆ—ಕಣ್ದೆಱಿಯೆ, ನೆಗಟ್ಚು=ಕೈಗೊಳ್ಳು, ಆಗಮ ವೇದಿ=ಜೈನ ಆಗಮ-ಜೈನ ಸಂಪ್ರದಾಯಗಳನ್ನೆಲ್ಲ ತಿಳಿದವ, ಕವಿ ಚತುರ್ಮುಖ=ಕವಿಬ್ರಹ್ಮ—ಈ ಮಾತು ಜೈನಧರ್ಮ ಪರಿಭಾಷೆಗೆ ವಿರುದ್ಧವಾದುದು; ರೂಢಿಯ ಪ್ರಭಾವದಿಂದ ಈ ಬಳಕೆ.೧ 'ಯದಿಹಾಸ್ತಿ ತದನ್ಯತ್ರ, ಯನ್ನೇಹಾಸ್ತಿ ನ ಕುತ್ರಚಿತ್ '-ಮಹಾಭಾರತದ ಈ ಮಾತಿನ ಪ್ರಭಾವ ಈ ಪದ್ಯ ರಚನೆಯಲ್ಲಾಗಿರುವಂತಿದೆ.

೩. ಆತ್ಮ ಪ್ರತ್ಯಯ ಯಾರಿಗೂ ಬೇಕಾದುದೇ ; ಆದರೆ ಅದು ಇಲ್ಲಿ ಅಹಂಕಾರವಾಯಿತೆ ? ಅತಿಯಾಯಿತೆ ?

೪. ಉಪಮಾತೀತವೆನಿಪ್ಪ ಪುರಾಣದ ಕೃತಿಗಳಂತೆ ಈ ಮೂರು. ಉಳಿದುವು ಇವಕ್ಕೆ ಸಮನಲ್ಲವಂತೆ !

೫. 'ಜಿನಸಮಯದೀಪಕರ್ 'ಜೈನ ಸಿದ್ಧಾಂತವನ್ನು ಬೆಳಗುವವರು. ಈ ಮೂವರನ್ನುಳಿದು ಬೇರಿಲ್ಲವಂತೆ !

೬. 'ಗುಣಕ್ಕೆ ಮಚ್ಚರವುಂಟೆ ?' ಖಂಡಿತ ಕೂಡದು. ಇದು ರನ್ನನ ಹಿರಿಮೆ. ಆದರೆ ಇಲ್ಲಿ ಪೊನ್ನನೂ ಕಳಚಿಕೊಂಡಿದ್ದಾನೆ !

೭. 'ಬೆಳುಗಲಯಯ್ನೂಱು, ಜಂಬುಖಂಡಿಯೆಪ್ಪತ್ತು '—ಇದು ಆಯಾ ಪ್ರದೇಶಗಳೊಡನೆ ಸೇರಿದ ಗ್ರಾಮಗಳ ಸಂಖ್ಯೆ; 'ಅಷ್ಟು ವರಹ ವರಮಾನ ಭೂಮಿಯುಳ್ಳ'೨ ಈತ ಸುಪುತ್ರನೆನಿಸಿದುದರಲ್ಲಿ ಆಶ್ಚರ್ಯವೇನು ? ಪಾಠ 'ನೆಗಟ್ದಿ' ಎಂದಿರಬೇಕು.

೮. ತಾಯಿ, ತಂದೆ, ಅಣ್ಣ—ಇವರ ಬಗ್ಗೆ ಗೌರವ; ಅಭಿಮಾನ. ಪತಿವ್ರತಾಗುಣ ವಿಭೂಷಣೆಯಾದ ತಾಯಿ ; ಜಿನೇಂದ್ರ ಪಾದಕಮಲ ಭ್ರಮರನಾದ ತಂದೆ; ದೃಢಬಾಹು ಉದಾರ ಗುಣಿಗಳಾದ ರೇಚಣ, ಮಾರಮಯ್ಯ ಅಣ್ಣಂದಿರು. ಇವರು ತಮ್ಮ .' ಎಸಕ ' ದಿಂದ ವಣಿಕ್‌ಕುಳ ಅರ್ಕರು—ವೈಶ್ಯ ಕುಲಶ್ರೇಷ್ಠರು ಎನಿಸಿದ್ದರು.

೯. ಇಂದ್ರಾದಿವಂದ್ಯರಾದ ಅಜಿತ ಸೇನಾಚಾರ್ಯರೇ ಗುರುಗಳು ; ಅಜಿತನೂ ಶೌರಿಯೂ ಆದ ಚಾವುಂಡರಾಯನೇ ಸ್ವಾಮಿ; ವರದನೇ ಅಜಿತ

---

೧. ನೋ: ವಿಸ್ಮೃತಿಯ ಚೋದ್ಯ ಮತ್ತು ರೂಢಿಯ ಪ್ರಭಾವ-ಹೆಮ್ಮಿಗೆ ದೇಶಿಕಾಚಾರ್.

೨. ಡಾ॥ ಎಸ್. ಶ್ರೀಕಂಠಶಾಸ್ತ್ರಿ—ಪ್ರಜಾವಾಣಿ' (೭-೮-೧೯೬೭)

ನಾಥ–ಈ ಮೂರೂ ಸತ್ಯ ಎಂದಾಗ ರತ್ನನಂತೆ ಅಧಿಕ ಪ್ರಾಣ್ಯಕ್ಕೆ ನೋಂತವನು ಬೇರೆ ಯಾರಿದ್ದಾನೆ ? ವರದಂ=ವರವನ್ನು ಕೊಡುವವನು, ಜೈನರ ದೇವ–ತೀರ್ಥಂಕರ–ವರದನೇನೂ ಅಲ್ಲ. ಇವನಲ್ಲಿ ಮಾಡುವ ಭಕ್ತಿಗೆ ಸಂತುಷ್ಟರಾದ ಯಕ್ಷ–ಯಕ್ಷಿಯರು ವರದರಾಗಬಹುದು. ನೋನ್ —ಧಾ.

೧೦. ಕವಿರತ್ನ ಕವಿತಿಲಕನೆನಿಸಿದ. ಇದರಿಂದ ಇವನಿಗೆ ಸಂದ ಗೌರವ ಗಳು ಇವು–ಮದನಾವತಾರ (?), ಕನಕದಂಡ, ಚಾಮರ, ಉನ್ಮದೇಭ, ಉತ್ತುಂಗದ ಭತ್ತಗಾವೆ ಎಂಬ ಜಹಗೀರು. [ಕವಿಗೆ ' ಕವಿ ಚಕ್ರವರ್ತಿ 'ಯೆಂಬ ಬಿರುದನ್ನು ಕೊಟ್ಟು, ಪಾಲಕಿ, ಆನೆ, ಚಾಮರ, ಚಿನ್ನದ ಕೋಲು, ಭತ್ತದಗಾವೆ ಮುಂತಾದುವನ್ನೆಲ್ಲಾ ದಯಪಾಲಿಸಿ ಸನ್ಮಾನ...?]

೧೧. ಸದಾ ದೈವಭಕ್ತಿ, ಪತಿಭಕ್ತಿಗಳೇ ಭೂಷಣಗಳಾಗಿ ಶೋಭಿಸುತ್ತ, ಕುಲೋಚಿತ ಶುದ್ಧವೃತ್ತಿಯಿಂದ ಸದ್ಗುಣ ಸಂಪನ್ನೆಯ ರಾದ ಜಕ್ಕಿ ಶಾಂತಿಯರು ಕುಲಾಂಗನೆಯರು.

೧೨. ರಾಯ ಮಗ, ಅತ್ತಿಮಬ್ಬೆ ಮಗಳು–ಚಾಮುಂಡರಾಯ ಮತ್ತು ಅತ್ತಿಮಬ್ಬೆಯರ ಜ್ಞಾಪಕಾರ್ಥವಾಗಿ ಇಟ್ಟ ಹೆಸರುಗಳು. ಅವರೀರ್ವರ= ಆ ಇಬ್ಬರ-ಚಾವುುಂಡರಾಯ ಮತ್ತು ಅತ್ತಿಮಬ್ಬೆಯರ. ತನ್ನೆರಡುಮುಖ್ಯ ಕೃತಿಗಳ್=ಪರಶುರಾಮಚರಿತ, ಚಕ್ರೇಶ್ವರ ಚರಿತ ಎಂಬ ತನ್ನೆರಡು ಶ್ರೇಷ್ಠ ಗ್ರಂಥಗಳು.

### ಆ : ಮಂಗಳಂ

೧. ನೆಚ್ಚು=ನಂಬು, ಮಾನ್ಯನ=ಮಹಾಂತನ=ದೊಡ್ಡಸ್ತಿಕೆ. ನಾಗದೇವ ನಗ್ರಸುತಂ ಪಡೆವಳ ತೈಲಂ ವಿನುತಾರ್ಥಿಗೆ....ದಾನಿ_ ಇದು ಅನ್ವಯ.

೨. ಜಗತ್ತು ಪಡೆವಳ ತೈಲನನ್ನು ಬಗೆಬಗೆಯಾಗಿ ಕೊಂಡಾಡು ತ್ತದೆ. ಅದಿರು=ನಡುಗು, ಹೆದರು. ಗಂಡ—ಶೂರ, ಉದಿತೋದಿತ-ಉತ್ತ ರೋತ್ತರ ಅಭಿವೃದ್ಧಿಯುಳ್ಳವನು. ಉದಿತ+ಉದಿತ, ಮಹಾ+ಉದಯ— ಗು.ಸ. ಧರ್ಮಚಿತ್ತ—ಧರ್ಮಬುದ್ಧಿ, ದಯಾಪರ—ದಯೆಯುಳ್ಳವನು. ಶುಭ ವೃತ್ತಂ=ಒಳ್ಳೆಯ ವ್ಯವಹಾರ ಉದ್ಯೋಗವುಳ್ಳವನು. ಮಹೋದಯ— ಪುಣ್ಯಶಾಲಿ, ಸುದೈವಿ. ಜಗದ್ವಳಯ—ಭೂಮಂಡಲ.

೩. ಕಾವ್ಯಕ್ಕೆ ಮಂಗಳವನ್ನು ಹಾಡುತ್ತಿದ್ದಾನೆ ಕವಿ. ತೈಲಪನು ಏಕಚ್ಛತ್ರಾಧಿಪತಿಯಾಗಿ ಈ ಭೂಮಂಡಲವನ್ನು ಆಳಲಿ, ಚಕ್ರವರ್ತಿಯ ರಾಜ್ಯವು ದಿಗಂತದವರೆಗೂ ಹಬ್ಬಲಿ. ಅಜಿತನಾಥನ ಪ್ರಸಾದ–ಅನುಗ್ರಹದಿಂದ ಉದಿತೋದಿತನಾಗಿರುವ ತೈಲಪ ಚಕ್ರವರ್ತಿಯು ಖ್ಯಾತನಾಗಲಿ. ನನ್ನ ಕಾವ್ಯವನ್ನು ಮೆಚ್ಚಿ ಕೇಳುವ ಗುಣಗ್ರಾಹಿ ಸಹೃದಯರಿಗೆ ವೈಭವ ಶ್ರೇಯಸ್ಸು ಶುಭಗಳುಂಟಾಗಲಿ ; ಮಂಗಳವಾಗಲಿ.

ಮಂಗಳಂ

# ಗ್ರಂಥ ಋಣ


೧. ಅಜಿತತೀರ್ಥಕರ ಪುರಾಣತಿಲಕಂ- ಸಂ : ಮಂ. ಅ. ರಾಮಾನುಜಯ್ಯಂಗಾರ್

೨. ಅಜಿತತೀರ್ಥಕರ ಪುರಾಣತಿಲಕಂ— ,, –ತೀನಂ ಶ್ರೀಯವರ ಸ್ವಂತ ಪುಸ್ತಕ (ಶ್ರೀ ಬಿ. ಸಂಜುಂಡಯ್ಯನವರ ಹೆಸರೂ ಈ ಪುಸ್ತಕದಲ್ಲಿದೆ)–ಬರೆದ ಟಿಪ್ಪಣಿಗಳಿವೆ.

೩. ಅಜಿತತೀರ್ಥಕ ಪುರಾಣತಿಲಕಂ— –ಸಂ : ಎಚ್. ದೇವೀರಪ್ಪ, ದೇ. ಜವರೇಗೌಡ

೪. ಅಜಿತಪುರಾಣ ಸಂಗ್ರಹ–ಅ. ರಾ. ಮಿತ್ರ, ಎಂ. ಎಚ್. ಕೃಷ್ಣಯ್ಯ

೫. ಅಜಿತಪುರಾಣ ಸಂಗ್ರಹ–ತ. ಸು. ಶಾಮರಾಯ, ಎಚ್. ನಂಜೇಗೌಡ

೬. ಅಜಿತಪುರಾಣ–ಎಂ.ಎ. ತರಗತಿಗೆ ಸಿದ್ಧಪಡಿಸಿದ ಪಾಠಗಳು– ಡಾ॥ ಸಿ. ಪಿ. ಕೃಷ್ಣಕುಮಾರ್

೭. ಜಿನಸೇನಾಚಾರ್ಯರ ಮಹಾಪುರಾಣಂ–ಪಂಡಿತರತ್ನಂ ಎ. ಶಾಂತಿರಾಜಶಾಸ್ತ್ರೀ

೮. ರನ್ನ–ಡಾ॥ ಎನ್. ಅನಂತರಂಗಾಚಾರ್

೯. ರನ್ನ–ಕವಿಕಾವ್ಯ ಪರಂಪರೆ–ಐ. ಬಿ. ಎಚ್. ಪ್ರಕಾಶನ

೧೦. ರನ್ನ–ಕವಿಕಾವ್ಯ ವಿಮರ್ಶೆ–ಕನ್ನಡ ಸಾಹಿತ್ಯ ಪರಿಷತ್ತು

೧೧. ಮಹಾಕವಿರನ್ನ ಹಾಗೂ ಅವನ ಕೃತಿಗಳು –ಕರ್ನಾಟಕ ವಿಶ್ವವಿದ್ಯಾನಿಲಯ

೧೨. ರನ್ನ ಕವಿ ಪ್ರಶಸ್ತಿ–ಮೈಸೂರು ವಿಶ್ವವಿದ್ಯಾನಿಲಯ ಸಂಘ

೧೩. ದಾನ ಚಿಂತಾಮಣಿ ಅತ್ತಿಮಬ್ಬೆ–ತೀ. ನಂ. ಶ್ರೀಕಂಠಯ್ಯ

೧೪. ಗದಾಯುದ್ಧ ಸಂಗ್ರಹಂ–ತೀ. ನಂ. ಶ್ರೀಕಂಠಯ್ಯ

೧೫. ಪಂಪನಲ್ಲಿ ಭವ್ಯತೆ–ಕುವೆಂಪು

೧೬. ಆದಿಪುರಾಣ ಸಂಗ್ರಹಂ–ಎಲ್. ಗುಂಡಪ್ಪ

೧೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ –ಡಾ॥ ಎಂ. ಚಿದಾನಂದಮೂರ್ತಿ

೧೮. ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ

—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ

೧೯. ಶೈಲಿ—ಭಾ. ೧—ಡಾ॥ ಎಸ್. ವಿ. ರಂಗಣ್ಣ

೨೦. ಪುರಾಣ ಜಿಜ್ಞಾಸೆ—ಎಲ್. ಆರ್. ಹೆಗಡೆ

೨೧. ಕನ್ನಡ ಸಾಹಿತ್ಯದಲ್ಲಿ ಜೈನ ಪುರಾಣಗಳು—ಡಾ॥ ಸದಾನಂದನಾಯಕ

೨೨. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ

೨೩. ಕನ್ನಡ ಸಾಹಿತ್ಯ ಚರಿತ್ರೆ—ಡಾ॥ ರಂ. ಶ್ರೀ. ಮುಗಳಿ

೨೪. ಕನ್ನಡ ಸಾಹಿತ್ಯ ಚರಿತ್ರೆ—ಒಂದು ಸಮೀಕ್ಷೆ—ತ. ಸು. ಶಾಮರಾಯ

೨೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ—

—ಬೆಂಗಳೂರು ವಿಶ್ವವಿದ್ಯಾನಿಲಯ

೨೬. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ

—ಮೈಸೂರು ವಿಶ್ವವಿದ್ಯಾನಿಲಯ

# ಸಂಪಾದಕರ ಇತರ ಕೃತಿಗಳು

**ಸಾಹಿತ್ಯ :**

೧. ಭಾಸ್ಕರ ಕವಿಯ ಜೀವಂಧರ ಚರಿತೆ–ಕಾವ್ಯ ಸಂಗ್ರಹ
–ಶ್ರೀ ಕೆ. ಎನ್. ಕೃಷ್ಣಮೂರ್ತಿರಾವ್ ಅವರೊಂದಿಗೆ ೧೯೭೦

೨. ಆಚಣ್ಣ ಕವಿಯ ವರ್ಧಮಾನ ಪುರಾಣಂ
–ಶ್ರೀ ತ. ಸು. ಶಾಮರಾಯ ಅವರೊಂದಿಗೆ ೧೯೭೩

**ಕೋಶ :**

ಜೈನಪರಿಭಾಷಾ ರತ್ನಕೋಶ (ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ ಪುರಸ್ಕೃತ ಕೃತಿ)
–ಶ್ರೀ ತ. ಸು. ಶಾಮರಾಯ ಅವರೊಂದಿಗೆ ೧೯೮೧

**ಪಠ್ಯ :** ಜನಪ್ರಿಯ ಕನ್ನಡ ಪಾಠಗಳು ೧೯೬೪

**ಆಚಾರ ೧ :** ಸೂತಕ ವಿಧಿ ೧೯೮೩

೨ : ಹೋಮವಿಧಿ ಮತ್ತು ಕ್ರಿಯಾ ದರ್ಪಣ ೧೯೮೩

**ಲೇಖನಗಳು :**

ತಾಯ್ ಹರಕೆ (ಕನ್ನಡ ನುಡಿ–೧೯೫೯)
ನಯಸೇನನ ಧರ್ಮಾಮೃತದಲ್ಲಿ ಲೋಕನೀತಿ–(ವಿವೇಕಾಭ್ಯುದಯ ೧೯೫೯)
ಗೋವಿನ ಹಾಡು (ಕನ್ನಡ ನುಡಿ–೧೯೬೧)
ಧರ್ಮ ಪ್ರಭಾವ (ಗುರುದೇವ–೧೯೭೦)
ಮಲ್ಲಿನಾಥ ಪುರಾಣ (ದಿವ್ಯಧ್ವನಿ–೧೯೭೩)
ಜೈನ ಧರ್ಮ (ಸೇವಾ ಸದನ–೧೯೭೬)
ಅಹಂಕಾರ ನಿರಸನ (ನಂದನವನ–೧೯೭೮)
ಜೀವಂಧರ ಕಥಾ ಸಾಹಿತ್ಯ (ಜೈನ ಸಾಹಿತ್ಯ ಸಮ್ಮೇಳನ, ಹೊಂಬುಜ-೧೯೭೮)
ಧರ್ಮ ದಿವಾಕರ (ಸೇವಾ ಸದನ–೧೯೮೦)
ತೆರಕಣಾಂಬಿ ಬೊಮ್ಮರಸ (ವನಶ್ರೀ–೧೯೮೨)
ಮಿರ್ಜಿ ಅಣ್ಣಾರಾಯರ ' ರತ್ನಕರಂಡ ' (ಕ) ಶ್ರಾವಣಚಾರ
(ಕನ್ನಡ ಸಾಹಿತ್ಯ ಪರಿಷತ್ತಿನ ವಿಚಾರ ಸಂಕಿರಣ, ಅಥಣಿ–೧೯೮೩)

—ಈ ಮುಂತಾದುವು.

ಉಷಾ ಪ್ರೆಸ್, ಮೈಸೂರು

# ನಮ್ಮ ಕೆಲವು ಪ್ರಕಟಣೆಗಳು

| | | |
|---|---|---|
| ಯದುವೊಡೆಯ | ಸಮೇತನಹಳ್ಳಿ ರಾಮರಾಯ | ೧೫-೦೦ |
| ಮರ್ಯಾದೆ ಮಹಲು | ಅಶ್ವತ್ಥ | ೧೫-೦೦ |
| ನಂಜುಂಡಾಯಣ | ಅಶ್ವತ್ಥ | ೬೦-೦೦ |
| ಅಗ್ನಿವರ್ಣ | ರಂ. ಶ್ರೀ. ಮುಗಳಿ | ೨೫-೦೦ |
| ಯಯಾತಿ | ವಿ. ಎಂ. ಇನಾಂದಾರ್ | ೩೫-೦೦ |
| ಮಂಜುಮುಸುಕಿದ ದಾರಿ | ವಿ. ಎಂ. ಇನಾಂದಾರ್ | ೫[illegible] |
| ಚಿತ್ರಲೇಖಾ | ವಿ. ಎಂ. ಇನಾಂದಾರ್ | ೧೦-೦೦ |
| ಗ್ರಾಮಾಯಣ | ರಾವಬಹದ್ದೂರ್ | ೩೫-೦೦ |
| ಮಂಗಳಸೂತ್ರ | ಬಾ. ಪು. [illegible] | ೫[illegible] |
| ಗಿರಿಯ ನವಿಲು | ಬಸವರಾಜ ಕಟ್ಟೀಮನಿ | ೬-೦೦ |
| ವಿಶ್ವರೂಪ | ಎಂ. ಎಸ್. [illegible] | ೧೨-೦೦ |
| ಹೌಸ್ ಸರ್ಜನ್ | ಅನು : ವನಜ ಸತ್ಯನಾರಾಯಣ | ೬-೦೦ |
| ಬಾಳ್ಗೋಟಗಳು | ಡಾ. ಹಾ. ಮಾ. ನಾಯಕ | ೬-೦೦ |
| ಡಾ. ಅಂಬೇಡ್ಕರ್ | ವಿ. ಎಂ. ಇನಾಂದಾರ್ | ೧೨-೦೦ |
| ಶ್ರೀ ಕರ್ನಾಟಕ ಭಕ್ತವಿಜಯ | ಬೇಲೂರು ಕೇಶವದಾಸರು | ೬೦-೦೦ |
| ಸಾಹಿತಿಯ ಆತ್ಮಜಿಜ್ಞಾಸೆ | ಶ್ರೀರಂಗ | ೧೨-೦೦ |
| ಹುಚ್ಚು ಮನಸ್ಸಿನ ಒಂದೇ ಮುಖ | ಐ. ಮಾ. ಮುತ್ತಣ್ಣ | ೪೫-೦೦ |
| ನಲವಾಗರಕ್ಕೆ ಐನೂರು ಮೈಲಿ | ಎಸ್. ಆರ್. ಗೌತಮ್ | ೧೫-೦೦ |
| ಪಾಶ್ಚಾತ್ಯ ಕಾವ್ಯಮೀಮಾಂಸೆ | ವಿ. ಎಂ. ಇನಾಂದಾರ್ | ೭೫-೦೦ |
| ಪಾಶ್ಚಾತ್ಯ ವಿಮರ್ಶೆಯ ರೊಮ್ಯಾಂಟಿಕ್ ಯುಗ | ವಿ. ಎಂ. ಇನಾಂದಾರ್ | ೧೫-೦೦ |
| ಪಾಶ್ಚಾತ್ಯ ವಿಮರ್ಶೆಯ ಆಧುನಿಕ ಯುಗ | ವಿ. ಎಂ. ಇನಾಂದಾರ್ | ೧೮-೦೦ |
| ಶಿವರಾಮ ಕಾರಂತ : ಬದುಕು-ಬರೆಹ | ವಿ. ಎಂ. ಇನಾಂದಾರ್ | ೨೫-೦೦ |
| ಬಿ. ಎಂ. ಶ್ರೀ. ಬದುಕು-ಬರೆಹ | ವಿ. ಎಂ. ಇನಾಂದಾರ್ | ೧೩-೦೦ |
| ಪ್ರಾಸ್ತಾವಿಕ | ರಾಗೌ | ೧೨-೦೦ |
| ಸಿಂಗಾರ | ಡಾ. ಹಾ. ಮಾ. ನಾಯಕ | ೧೨-೦೦ |

## ಉಷಾ ಸಾಹಿತ್ಯ ಮಾಲೆ, ಮೈಸೂರು

ಬೆಲೆ : ರೂ. **14-00**